961

ವಿಜ್ಞಾಪ್ತಿ.

—o—

(1) ಜಗತ್ತಿನಲ್ಲಿ ಮಹಾತ್ಮರ ಅವತಾರವು ಲೋಕಹಿತಾರ್ಥವಾಗಿರುವದೆಂಬ ಮಾತು ಸುಪ್ರಸಿದ್ಧವಾಗಿದೆ. ಅವರ ಸಂದರ್ಶನ—ಸಂಭಾಷಣ—ಸಹವಾಸ ಮೊದಲಾದವುಗಳಿಂದ ಜನರಲ್ಲಿರುವ ಅಜ್ಞಾನಾಂಧಃಕಾರವೂ ಅನಾಚಾರವೂ ತೊಲಗಿ ಸುಜ್ಞಾನಪ್ರಭೆಯೂ ಸದಾಚರಣೆಯೂ ಸ್ಥಿರವಾಗಿ ನೆಲೆಗೊಳ್ಳುವವು. ಆದ್ದರಿಂದಲೇ "ಸಾಧು ಸಂಗತಿಯೆ ಸದ್ಗುಣಕಾರಣ ಮತ್ತೆ" ಮತ್ತು "ಸತ್ಸಂಗತಿಃ ಕಥಯ ಕಿಂ ನಕರೋತಿ ಪುಂಸಾಮ್" ಎಂಬದಾಗಿ ಮಹಾನುಭಾವರ ವಚನಗಳಾದರೂ ಮೇಲಿನ ತತ್ವವನ್ನೇ ಸಮರ್ಥನಗೊಳಿಸುತ್ತವೆ. ಅಂತಹ ಮಹಾತ್ಮರಲ್ಲಿ ಅಗ್ರಗಣ್ಯನಾದ ಅಲ್ಲಮಪ್ರಭುವಿನ ಲೀಲೆಗಳು ಈ ಚಿಕ್ಕಗ್ರಂಥದಲ್ಲಿ ವರ್ಣಿಸಲ್ಪಟ್ಟವೆ. ಶಿಷ್ಯರ ಮನೋವೃತ್ತಿಯನ್ನರಿತು ಪ್ರಭುದೇವರು ಮಾಡಿದ ಉಪದೇಶವು ನೀತಿಪರವಾಗಿಯೂ ವೇದಾಂತ ಸಾರವಾಗಿಯೂ ವೀರಶೈವಾಚಾರ ದರ್ಶಕವಾಗಿಯೂ ಇರುವದರಿಂದ ಇದು ಶೈವ ವೀರಶೈವರಿಂದ ಸಂಗ್ರಹಿಸಲ್ಪಡಶಕ್ಕದಾಗಿದೆ.

(2) ಅಲ್ಲಮಪ್ರಭು ಅಥವಾ ಪ್ರಭುದೇವರು ಕ್ರಿ. ಶ. ೧೧೬೦ ನೇಯ ಇಸ್ವಿಯ ಸುಮಾರಿನಲ್ಲಿ ಇದ್ದರೆಂತಲೂ ಅವರು ಮಂತ್ರಮಹಾತ್ಮ ಮಂತ್ರಗೋಪ್ಯದ ಪದ, ಷಟ್ಸ್ಥಲವಚನ, ಪ್ರಭುದೇವರಕಂದ, ಕಾಲಜ್ಞಾನವಚನ ಮುಂತಾದ ಗ್ರಂಥಗಳನ್ನು ಬರೆದಿರುವರೆಂತಲೂ ಮತ್ತು ಅವರು ವೀರಶೈವಗುರುಗಳಲ್ಲಿ ಬಹಳ ಪ್ರಖ್ಯಾತರೆಂತಲೂ ಕರ್ನಾಟಕ ಕವಿಚರಿತಾಕರ್ತರು ಬರೆದಿರುತ್ತಾರೆ. ಆದರೆ ಶಿವನು ನಾಲ್ಕು ಯುಗಗಳಲ್ಲಿ ಬೇರೆ ಬೇರೆ ಹೆಸರಿನಿಂದ ಜಂಗಮನಾಗಿ ಅವತರಿಸಿದ್ದರಿಂದ ಮತ್ತು ವೀರಶೈವರಲ್ಲಿ ಶೂನ್ಯ ಸಿಂಹಾಸನಾಧಿಪತಿಗಳು (ವಿರಕ್ತರು) ತಾವು ಪ್ರಭುದೇವರ ಸಾಂಪ್ರದಾಯಕರೆಂದು ಕರೆಯಲ್ಪಡುವದರಿಂದ ನಮ್ಮಲ್ಲಿಯ ವಿರಕ್ತ ಪೀಠವು ಯುಗ ಯುಗಾಂತರದಿಂದ ಬಂದಿರುವದಾಗಿ ಗೊತ್ತಾಗುತ್ತದೆ.

"ಆದೌತಚ್ಚರಲಿಂಗಂತು ನಿರಂಜನ ಇತಿಸ್ಮೃತಮ್ ।
ತ್ರೇತಾಯಾಂ ದೈವತಂ ಚೈತನ್ನಿರ್ಮಾಯ ಇತಿ ಕೀರ್ತಿತಮ್ ॥ ೬ ॥
ದ್ವಾಪರೇ ನಿಷ್ಕಲಶ್ಚೇತಿ ವಿಶ್ರುತಂಚ ತದೇವಹಿ ।
ಕಲೌಪ್ರಭುರಿತಿಖ್ಯಾತಂ ತಸ್ಯನಾಮಾನಿವೈಕ್ರಮಾತ್ ॥ ೭ ॥
ಕಲೌತತ್ಪ್ರಭುದೇವಶ್ಯಪೀಠಂ ಕಲ್ಯಾಣ ಪತ್ತನೇ ।
ಬಸವೇಶಾನಿ ಪ್ರಮಥ ಸಂದೋಹ ಪರಿಕಲ್ಪಿತಮ್ ॥ ೮ ॥

( ಉತ್ತರವಾತುಲಿ ಪ್ರಮಥ ಪರಶಿವ ಸಂವಾದ )

(3) ಈ ಚಿಕ್ಕಗ್ರಂಥವನ್ನು ನಾವು ಕನ್ನಡದ ಪದ್ಯ ಗ್ರಂಥವಾದ ಪ್ರಭು ಲಿಂಗಲೀಲೆ ಮತ್ತು ಕೈ. ವಾ. ಶ್ರೀಮಂತ ಮಲ್ಲಪ್ಪಾ ಅಂಣಾ ಉರ್ಫ ಅಪ್ಪಾಸಾಹೇಬ ವಾರದ ಸೊಲ್ಲಾಪೂರ, ಇವರ ಉದಾರಾಶ್ರಯದಿಂದ ಬಾಲಬೋಧೆಯಲ್ಲಿ ಮುದ್ರಿತವಾದ ಸಂಸ್ಕೃತ ಪ್ರಭುಲಿಂಗಲೀಲೆಯ ಆಧಾರದ ಮೇಲಿಂದ ಬರೆದಿದ್ದೇವೆ. ಮೂಲಗ್ರಂಥವು ಕಠಿಣವಿದ್ದು ಅದರಲ್ಲಿ ಅಡಕವಾಗಿರುವ ಗಹನೋಪದೇಶಗಳ ತಾತ್ಪರ್ಯವನ್ನು ನಮಗೆ ತಿಳಿದ ಮಟ್ಟಿಗೆ ವಾಚಕ ವೃಂದಕ್ಕೆ ಗ್ರಾಹ್ಯವಾಗುವಂತೆ ಬರೆದಿದ್ದೇವೆ. ಅರ್ಥ ವಿವೇಚನೆಯಲ್ಲಿ ತಪ್ಪುಗಳಿದ್ದರೆ ಬಲ್ಲಿದರು ಅವುಗಳನ್ನು ನಮಗೆ ತಿಳಿಸಿದ್ದಾದರೆ ಅವರ ಉಪಕಾರವನ್ನು ನಾವು ನೆನಿಸುವದಲ್ಲದೆ ಮುಂದಣ ಆವೃತ್ತಿಯಲ್ಲಿ ಆ ತಪ್ಪುಗಳನ್ನು ಸರಿಪಡಿಸುವೆವು.

(4) ಈ ಗ್ರಂಥವನ್ನು ಪ್ರಕಟಸುವದರಲ್ಲಿ ನಮ್ಮ ಮುಖ್ಯೋದ್ದೇಶವೇನೆಂದರೆ:— ಅಷ್ಟಾವರ್ಣ ಸಂಬಂಧವಾಗಿ ಮತ್ತು ಲಿಂಗಾಂಗ ಸಾಮರಸ್ಯ ಜ್ಞಾನ ವಿಷಯ ವಾಗಿ ಲಿಂಗವಂತರಲ್ಲಿ ತಕ್ಕಮಟ್ಟಿಗೆ ಜ್ಞಾನೋದಯವಾಗಿ ಅದರಂತೆ ಅವರು ತಮ್ಮ ಆಚರಣೆಯನ್ನು ಇಟ್ಟುಕೊಳ್ಳಬೇಕೆಂಬದಾಗಿಯೂ ಮತ್ತು ಅವರು ತಮ್ಮ ಅವಕಾಶವನ್ನು ಆದಷು ಮಟ್ಟಿಗೆ ಶಿವಕಥಾ, ಶಿವಶರಣರಕಥಾ ಪ್ರಸ್ತಾಪದಲ್ಲಿ ಉಪಯೋಗಿಸಿ ತಮ್ಮ ಜೀವಿತವನ್ನು ಪಾವನಗೊಳಿಸಿ ಜನ್ಮಸಾರ್ಥಕ್ಯವನ್ನು ಪಡೆಯಬೇಕೆಂಬದಾಗಿಯೂ ಇರುತ್ತದೆ.

(5) ಪ್ರಭುಲಿಂಗ ಲೀಲೆಯು ಕರ್ಣಾಟಕ, ತೆಲುಗು, ತಮಿಳು ಮುಂತಾದ ಭಾಷೆಗಳಲ್ಲಿರುವದು. ಎಲ್ಲವುಗಳಿಗಿಂತಲೂ ತೆಲಗು ಪ್ರಭುಲಿಂಗ ಲೀಲೆಯೇ ಬಹಳ ಉತ್ಕೃಷ್ಟವಾಗಿರುವದೆಂದು ಕೆಲವರ ಅಭಿಪ್ರಾಯವಿದೆ. ದೇಶಿಯ ಹಾಗು ಪಾಶ್ಚಾತ್ತಪಂಡಿತರನೇಕರು ಇದನ್ನು ಬಹಳ ವಿಧವಾಗಿ ಶ್ಲಾಘಿಸಿರುವರು. ಇದರಲ್ಲಿ ಸಿ. ಪಿ. ಬ್ರೌನು ( C. P. Browan) ಎಂಬುವ ಅಂಗ್ಲೇಯ ಪಂಡಿತರು ಮದ್ರಾಸು ಜರ್ನಲ್ ಅಫಲಿಟರೇಚರ್ ಆ್ಯಂಡಸೈನ್ಸ ( Madras journal of Literature and science ) ಎಂಬುವ ೧೮೩೩ ನೆ ವರುಷದ ಸಂಚಿಕೆಯಲ್ಲಿ ಈ ಉದ್ಗ್ರಂಥದ ವಿಷಯವಾಗಿ ಹೀಗೆ ಬರೆದಿರುವರು. —

"Prabhulinga Leela is far more attractive to an English reader than Dwipada Ramayan. It is not more difficult in style than the Lady of the Lake; in sweetness & purity of diction it epuals Theocritus. In point of morals, it is far purer than the works which Brahmins consider sacred." ಅಂದರೆ ಇಂಗ್ಲೀಷು ವಾಚಕರಿಗೆ ದ್ವಿಪದ ರಾಮಾಯಣಕ್ಕಿಂತಲೂ

ತೆಲಗು ಭಾಷೆಯಲ್ಲಿರುವ ಪ್ರಭುಲಿಂಗಲೀಲೆಯೇ ಬಹಳ ಮನೋಹರವಾಗಿದೆ. ಶೈಲಿಯಲ್ಲಿಯೂ ಶುದ್ಧತೆಯಲ್ಲಿಯೂ ಕಿವಿಗಿಂಪಾಗುವ ವಿಷಯದಲ್ಲಿಯೂ ಮಹಾ ಪ್ರಶಿದ್ಧಪಾಶ್ಚಾತ್ಯ ಕವಿಯಾದ ಥಿಯೋಕ್ರೀಟಸ ಇವರ ಅಮೋಘವಾದ ಗ್ರಂಥಗಳನ್ನು ಹೋಲುತ್ತದೆ. ನೀತಿ ವಿಷಯದಲ್ಲಾದರೋ, ಯಾವ ಪುಸ್ತಕಗಳನ್ನು ಬ್ರಾಹ್ಮಣರು ಪವಿತ್ರವಾಗಿ ಕಾಣುತ್ತಾರೋ ಅವಕ್ಕಿಂತಲೂ ಎಷ್ಟೋ ಅಂತರದ ಮೇಲೆ ಪ್ರಭುಲಿಂಗ ಲೀಲೆಯು ಮೇಲಾಗಿರುತ್ತದೆ ಎಂಬದಾಗಿ ಪರಮತೀಯರು ಕೂಡ ಕೊಂಡಾಡಿದ್ದಾರೆ. ಮತ್ತಲ್ಲದೆ ಎಚ್. ಎಚ್. ವಿಲ್ಲಸನ್ನ ( H. H Wilson ) ರವರು ಈ ಪ್ರಭುಲಿಂಗಲೀಲೆಯು ವಿಷಯವಾಗಿ ಬರೆದ ಅಂಶದ ಸಾರಾಂಶವು ಕೆಳಗಿನಂತೆ.

" On the mouutain of Kailas, when Siva was sitting in his court with Parvati by his side Chandesh was saluting them with but a single hand, whēre upon Parvati decame enraged and asked Siva. " what does he mean by it " Chandesh reqlied " Siva alone is omnipotent Sachid-ananda Parabrahma and Parvati is only material aspect the source of all confusion." Parvati said " Chandesh, if I am the material mask of the spirit, how do you refuse to acknowledge me who have conferred half of her body to Parabrahman and under whom were concentrated Brahma, Vishnu and other Deities so long as you are immured with a body. Chandesh then quitted his matter when Siva supported him with a third leg to stand on. To consider who is greater, Siva asked them both to assnme human forms and he or she who conquers is truely greater. Chandesh who is now called Bringeesh was born as Allam Prabhu to Nirahankar and Sugnani Devi at Kerur, and a spark of Parvatir's essence was born as Maya to Mamakar and Mohini Devi, the king and queen of Banavasi. Allam Prabhu after expounding the method of obtaing liberation, subdued Maya, got the title of Niranjana, wandered throughcut the land and wronught many miracles. "

ಮೆ॥ ಎಚ್. ಎಚ್. ವಿಲ್ಲಸನ್ನರವರು, ಈ ಪ್ರಭುಲಿಂಗಲೀಲೆಯಲ್ಲಿ ಹೇಳಿದ ಕಥಾ ತಾತ್ಪರ್ಯವನ್ನೇ ಇಂಗ್ಲೀಷದಲ್ಲಿ ಸಂಕ್ಷೇಪವಾಗಿ ಹೇಳಿರುವದರಿಂದ ಅದರ ಭಾಷಾಂತರವನ್ನು ಮಾಡಿರುವದಿಲ್ಲ.

(6) ಹೀಗೆ ಪಾಶ್ಚಾತ್ಯ ಪಂಡಿತರೂ ವೀರಶೈವರೂ ಅಲ್ಲಮಪ್ರಭುವನ್ನೂ ಆತನ ಚರಿತ್ರಾಂಶಗಳನ್ನೂ ಬಹು ಆದರದಿಂದ ಕಾಣುತ್ತಿದ್ದರೂ ಊರಿದ್ದಲ್ಲಿ ಹೊಲಿಗೇರಿ ಇರುವದೆಂಬನಾಣ್ಣುಡಿಯಂತೆ ಆರ್. ಶ್ರೀನಿವಾಸಾಚಾರ್ಯನೆಂಬ ಹಾರವಾಧಮನು ತನ್ನ ಸ್ವಮತ ತತ್ವವು ತನಗೆ ತಿಳಿಯದೆ, ಅನ್ಯಮತದ ಸಂಗತಿಗಳಲ್ಲಿ ಕೈ ಹಾಕಿ, ಕೇಳಬಾರದಂಥ ತುಚ್ಛಭಾಷೆಯಲ್ಲಿ "ಅಲ್ಲಮನ ಹಾಗು ಬಸವನ ವೃತ್ತಾಂತವೇನು ?" ಎಂಬ ಲೇಖವನ್ನು ಧಾರವಾಡ ಶುಭೋದಯ ತಾರೀಖು ೧೮–೪–೧೯೧೯ ನೇ ಸಂಚಿಕೆಯಲ್ಲಿ ಪ್ರಸಿದ್ಧ ಮಾಡಿದ್ದು ಸರ್ವಶ್ರುತವಿದೆ. ಈ ಬ್ರಾಹ್ಮಣಾಧಮನ ಲೇಖನಕ್ಕೆ ಇಂಬುಗೊಟ್ಟ ಪತ್ರವೂ ಅದರ ಸಂಪಾದಕರೂ ಅಸ್ತಂಗತರಾದರು. ಆದರೆ ಆರ್. ಶ್ರೀನಿವಾಸಾಚಾರ್ಯನ ಇತ್ಯರ್ಥವು ಈ ವರೆಗೆ ಗೊತ್ತಾಗಿಲ್ಲ. ಆದರೂ ತನ್ನ ಕುಮತಿಗೆ ಕುಬುದ್ಧಿಗೆ ಕಾಶೀನಾಥಶಾಸ್ತ್ರಿ ಮತ್ತು ಹಮ್ಮಿಗೆ ಶಾಂತಪ್ಪ ಕುಬಸದ ಎಂಬ ಈರ್ವ ಗಂಡುವಾರಸದಾರರನ್ನು ಬಿಟ್ಟು ಹೋಗಿರುವದಾಗಿ ಈ ವಾರಸದಾರರ ಲೇಖಗಳ ಮೇಲಿಂದ ತಿಳಿಯು ಬರುತ್ತದೆ. ಇವರು ಬರೆದ ಪ್ರತಿಯೊಂದು ಕುತ್ಸಿತ ಟೀಕೆಗೆ ಸಮಾಧಾನ ಕೊಡುತ್ತ ಹೋದರೆ ಈ ಗ್ರಂಥವು ಬೆಳೆಯುವದೆಂಬ ಭೀತಿಯಿಂದ, ಅಲ್ಲಮಪ್ರಭುವಿಗೆ ಸಂಬಂಧ ಪಟ್ಟ ಕೆಲವು ಅಂಶಗಳನ್ನು ಮಾತ್ರ ಸಂಕ್ಷೇಪವಾಗಿ ಖಂಡಿಸಿರುವೆವು.

"ಮುಸಲ್ಮಾನರಿಗೂ ಲಿಂಗವಂತರಿಗೂ ತೆತ್ತಿಗತನವನ್ನು ಜೋಡಿಸುವ ಉತ್ಸುಕತೆಯಲ್ಲಿ ಶ್ರೀನಿವಾಸಾಚಾರ್ಯನ ಅಸೂಯ ಪರವಶವಾದ ಮನಸ್ಸಿಗೆ ಸಂಸ್ಕೃತ ಭಾಷೆಯ ಅಜ್ಞಾನವು ಒಳ್ಳೇ ನೆರವಾಗಿದೆ. ಅಲ್ಲಮ ಎಂಬ ಹೆಸರು ಮುಸಲ್ಮಾನರ ದೇವತಾ ಸಂಕೇತವಾಗಿರುತ್ತದೆಂದು ಈ ವಿದ್ವನ್ಮಣಿಯು ಅನ್ನುತ್ತಾನೆ. ಅಲ್ಲಮ ಶಬ್ದವು ಶುದ್ಧ ಸಂಸ್ಕೃತ ಶಬ್ದವಾಗಿರುತ್ತದೆ. ಸಂಸ್ಕೃತದಲ್ಲಿ "ಅಲ್" ಎಂಬ ಧಾತು ಭೂಷಣ–ನಿವಾರಣ–ಪರ್ಯಾಪ್ತಿ ಮುಂತಾದ ಅರ್ಥಗಳನ್ನು ಕೊಡುತ್ತದೆ. ಹಾಗು "ರಮು" ಎಂಬ ಧಾತು ಆನಂದಪಡು. ಆಡು ಎಂಬ ಅರ್ಥವನ್ನು ಕೊಡುವದು. ಮೊದಲಿನ "ಅಲ್" ಎಂಬ ಧಾತುವಿಗೆ ಕ್ವಿಪ್ ಪ್ರತ್ಯಯವು ಹತ್ತಿ, "ಅಲನಂಅಲ್" ಅಂದರೆ ಸಂಸಾರ ನಿವಾರಣೆ ಎಂಬ ಅರ್ಥವಾಗುತ್ತದೆ. "ಅಲಿ" ಅಂದರೆ ಭಕ್ತರ ಸಂಸಾರ ನಿವಾರಣೆಯಲ್ಲಿ "ರಮತೆ" ಅಂದರೆ ವಿನೋದಪಡುತ್ತಾನೆ, ಎಂಬ ಅರ್ಥದಲ್ಲಿ 'ಅಲ್‌ರಮಃ' ಎಂತಲೂ, "ರಮೆರಶ್ಚಲೋವಾ" ಎಂಬ ಉಣಾದಿ ಸೂತ್ರದಲ್ಲಿ ಕ್ವಸ್ ಪ್ರತ್ಯಯದ ಮುಂದೆ ಹ್ಯಾಗೋ ಹಾಗೆ ಆಗಲೀ, ಅಥವಾ "ರಲಯೋರಭೇದಃ" ಎಂಬಂತೆಯಾಗಲೀ, ರಮು

ಶಬ್ದವು ಲಮರೂಪವನ್ನು ಹೊಂದಿತು. ಆದರಿಂದ ಅಲ್ಲಮ ಅಂದರೆ ಜೀವರ ಸಂಸಾರ ನಿವಾರಕನೆಂಬ ಅರ್ಥವನ್ನು ಕೊಡುವ ಶಬ್ದವು ಸಿದ್ಧವಾಯಿತು. ಇನ್ನೂ ಹಲವು ರೀತಿಯಿಂದ ಈ ಶಬ್ದದ ವ್ಯುತ್ಪತ್ತಿಯನ್ನು ಕೊಡಬಹುದು. ಆದರೆ ಸ್ಥಲ ಸಂಕೋಚಕ್ಕಾಗಿ ಇನ್ನೊಂದನ್ನು ಕೊಡುತ್ತೇನೆ.

ಅತ್ ಸಾತತ್ಯಗಮನೆ ಎಂಬ ಧಾತುವಿನಿಂದ ಆತ್ಮ ಶಬ್ದವು ಹುಟ್ಟಿದಂತೆ ಮನಿನ್ ಪ್ರತ್ಯಯವು ಹತ್ತಿ ಆದಂತೆ, "ಅತ್" ಶಬ್ದವು ಅದೇ ಅರ್ಥದಲ್ಲಿ ಕ್ವಿಪ್ ಪ್ರತ್ಯಯವು ಹತ್ತಿ ಆಗಿರುತ್ತದೆ. "ಅತ್ಸು" ಅಂದರೆ ಆತ್ಮರಲ್ಲಿ "ರಮತೆ" ಅಂದರೆ ಅವರ ಸುಖದುಃಖಗಳ ಸೋಂಕಿಲ್ಲದೆ ಆನಂದ ಭರಿತನಾಗಿರುವನೆಂಬರ್ಥದಿಂದ ಅಲ್ಲಮ ಶಬ್ದವು ಹುಟ್ಟಿರುವದು. ರಕಾರಕ್ಕೆ ಲಕಾರಾದೇಶದ ಕ್ರಮವು ಮೇಲೆ ಹೇಳಲ್ಪಟ್ಟಿದೆ. ಹೀಗೆ ಸಂಗತಿ ಇರಲು, ಸಂಸ್ಕೃತ ಭಾಷಾಗಂಧವು ಸೋಂಕದ ಶ್ರೀನಿವಾಸಾಚಾರ್ಯನು ಅಲ್ಲಮ ಶಬ್ದದೊಳಗಿನ ಮಕಾರವನ್ನು ನುಂಗಿ ಅದನ್ನು ಮುಸಲ್ಮಾನಿ ಶಬ್ದವನ್ನಾಗಿ ಮಾಡಿರುವನು.

ಹೀಗೆ ಅಕ್ಷರಲೋಪದಿಂದ ಶಬ್ದ ವಿಪರ್ಯಾಸ ಮಾಡುವದಕ್ಕಿಂತ "ರಹೀಮ" ಎಂಬ ಶಬ್ದದಿಂದ ರಾಮ ಶಬ್ದವು ಹುಟ್ಟಿರುತ್ತದೆಂದು ಹೇಳುವದು ಎಷ್ಟು ಸುಲಭವಾಗಿದೆ? ಆದರೆ ರಮ ಧಾತುವಿನಿಂದ ಸಿದ್ಧವಾದ ಪರಶಿವ ಬೋಧಕವಾದ ರಾಮ ಶಬ್ದವನ್ನು ಶಿವಭಕ್ತರಾದ ಜಮದಗ್ನಿ ದಶರಥ ಮುಂತಾದವರು ಪ್ರೀತಿಯಿಂದ ತಮ್ಮ ಮಕ್ಕಳಿಗೆ ಹೆಸರಿಟ್ಟರೆಂದು ಬಲ್ಲ ಯಾವ ಸುಜ್ಞನೂ ಶ್ರೀನಿವಾಸಾಚಾರ್ಯನ ಮೇಲಿನ ಸಿಟ್ಟಿನಿಂದ ಆ ಪವಿತ್ರವಾದ ರಾಮ ಶಬ್ದವನ್ನು ಪರಭಾಷೆಯಿಂದ ವ್ಯುತ್ಪಾದಿಸಲಾರನು.

ಹೊಟ್ಟೆಕಿಚ್ಚಿನಿಂದ ಹೊಲಬುಗಾಣದ ಶ್ರೀನಿವಾಸಾಚಾರ್ಯನು ಪುಣ್ಯನಾಮನಾದ ಆ ಮಹಾಪ್ರಭುವಿಗೆ ಕುಂದಿಡುವ ಹವ್ಯಾಸದಲ್ಲಿ ಶ್ರೀ ಚನ್ನಬಸವದೇವರು ಮಲ್ಲೂಖಾನನ ಸಹಾಯದಿಂದ ಅಳಿಯ ಬಿಜ್ಜಳನ ಕೂಡ ಯುದ್ಧಮಾಡಿದ್ದರಿಂದಲೂ, ಶಿಖಾಶೈಲಾದಿಗಳನ್ನು ಅವನ ಹತ್ತಿರ ಇಟ್ಟದ್ದರಿಂದಲೂ ತನ್ನಊಹೆಯು ದೃಢೀಕರಿಸಲ್ಪಡುತ್ತದೆಂದು ಅನ್ನುತ್ತಾನೆ. ಇದು ಎಂತಹ ತರ್ಕಪಾಂಡಿತ್ಯವು! ರಾಮನು ಕಪಿಗಳ ಸಹಾಯವನ್ನು ಬೇಡಿದ್ದರಿಂದ ಕಪಿಗಳ ಸಂಬಂಧಿ ಎನ್ನಬಹುದೇ? ಶಿಖಾಶೈಲಾದಿಗಳು ಅಧಿಕಾರ ಚಿನ್ಹಗಳಲ್ಲದೆ ಧರ್ಮದ ಅಂತರಂಗಕುರುಹುಗಳಾದ ಅಷ್ಟಾವರಣಗಳಂತಲ್ಲ. ಅಂದ ಬಳಿಕ ಈ ಸಂಗತಿಯಿಂದ ಪ್ರಭುವಿನಲ್ಲಿ ಜಾತಿಯ ತಾರತಮ್ಯಕ್ಕನುಸರಿಸಿ ಯಾವ ಭೇದವಾದರೂ ಇದ್ದಿಲ್ಲೆಂದು ಸಾಧಿಸುವದು ಶ್ರೀನಿವಾಸಾಚಾರ್ಯನ ತರ್ಕಪಾಂಡಿತ್ಯಕ್ಕೆ ಒಪ್ಪುತ್ತದಲ್ಲದೆ ಬೇರೆ ಏನೂ ಅಲ್ಲ.

ಬಸವೇಶ್ವರನು ಜಾತಿ ಸಂಕರವನ್ನುಂಟು ಮಾಡಿದನೆಂಬುದು ಧರ್ಮರಹಸ್ಯವನ್ನರಿಯದ ಹಾಗು ವೀರಶೈವ ದ್ವೇಷದಗ್ಧನಾದ ಶ್ರೀನಿವಾಸಾಚಾರ್ಯನಿಗೆ ಒಪ್ಪು

ತ್ರದೆ. ಯುಗದಲ್ಲಿ ಸೋಮರಸಪಾನವು ಪಶುವಧೆಯು ಮುಂತಾದ ಕರ್ಮಗಳನ್ನು ವೈದಿಕನು ಮಾಡುವದು ಪಾಮರರಿಗೆ ಸುರಾಪಾನದಂತೆಯೂ ಪ್ರಾಣಿವಧೆಯಂತೆಯೂ ತೋರಿದರೂ ಶ್ರೀನಿವಾಸಾಚಾರ್ಯನಿಗೆ ಹ್ಯಾಗೆ ಗ್ರಾಹ್ಯವೋ, ಅದರಂತೆಯೇ ಅಥವಾ ಅದಕ್ಕೂ ಹೆಚ್ಚು "ಶಿವದೀಕ್ಷಾಭಿ ಸಂಪನ್ನೇ ಜಾತಿಭೇದಂನಕಲ್ಪಯೇತ್" ಎಂಬ ಆಗಮ ವಚನಾನುಸಾರವಾಗಿ ಲಿಂಗವಂತರಲ್ಲಿ ಉಚ್ಚ ನೀಚ ಜಾತಿಭೇದವನ್ನು ಎಣಿಸದಿರುವದು ವರ್ಣಸಂಕರವೆಂದು ಯಾವ ಬಲ್ಲವನಾದರೂ ಅನ್ನಲಾರನು. ಆರಾಧ್ಯ ಬ್ರಾಹ್ಮಣರು ವೀರಶೈವರಲ್ಲ. ಅವರು ಶುದ್ಧಶೈವರೆಂದು ಸರ್ವ ಆಗಮಗಳೂ ಕೂಗುತ್ತವೆ,

ಕಾಶಿಯಲ್ಲಿ ಶಂಕರಾಚಾರ್ಯರ ಜ್ಞಾನಪರೀಕ್ಷೆಗಾಗಿ ವೇದವ್ಯಾಸ ಮಹರ್ಷಿಯು ಚಾಂಡಾಲವೇಷದಿಂದ ಎದುರಾದರೂ ಹ್ಯಾಗೆ ಆತನ ಯೋಗ್ಯತೆಗೆ ಹಾನಿ ಇಲ್ಲವೋ, ಅದರಂತೆಯೇ ವೇದವ್ಯಾಸನು ತನ್ನ ಹದಿನೆಂಟು ಪುರಾಣಗಳಿಂದಲೂ, ಬ್ರಹ್ಮಸೂತ್ರದಿಂದಲೂ, ಮಹಾಭಾರತದಿಂದಲೂ ಹುಡುಕಿ ಹೊಗಳಿಕಾಣದ ಪರವಸ್ತುವೇ ತಾನಾದ ಅಲ್ಲಮನು ವಿಚಿತ್ರ ವೇಷದಿಂದ ಬಸವನ ಭೋಜನ ಪಙ್ಕ್ತಿಯನ್ನು ಪ್ರವೇಶಿಸಿದರೆ ಹಾನಿಯೇನು ?

ಅಲ್ಲಮನೆಂಬ ಹೆಸರು ಅಸಹ್ಯಕರವಾದ್ದರಿಂದ ಪ್ರಭುವೆಂಬ ಹೊಸನಾಮವನ್ನು ಬಸವನಿಟ್ಟನೆಂದು ಅನ್ನುವದು ಶ್ರೀನಿವಾಸಾಚಾರ್ಯನ ಹೆಡ್ಡತನಕ್ಕೆ ಹಿಂದಾಗಿ ಒಪ್ಪುತ್ತದೆ. ಪಾಪ! ಶಿಷ್ಟಾಚಾರವು ಗೊತ್ತಿಲ್ಲ. "ಆತ್ಮನಾಮ ಗುರೋರ್ನಾಮ ನಾಮಾತಿಕೃಪಣಸ್ಯಚ । ಶ್ರೇಯಸ್ಕಾಮೋನಗೃಹ್ಣೀಯಾತ್ ಜೇಷ್ಠಾಪತ್ಯಕಲತ್ರಯೋಃ ॥' ಎಂಬ ಶಿಷ್ಟಾಚಾರಕ್ಕನುಸರಿಸಿ ಗುರುವಾದ ಅಲ್ಲಮನ ಹೆಸರನ್ನು ಸಾಕ್ಷಾತ್ ಗೃಹಣ ಮಾಡದೆ ಪ್ರಭುವೆಂದರೆ ತನಗೂ ಮೂರುಲೋಕಕ್ಕೂ ಒಡೆಯನೆಂದು ಬಸವನು ಕರೆದದ್ದು ವರ್ತಮಾನಪತ್ರಗಳಲ್ಲಿ ಮಂದಿಯನ್ನು ಬೈಯ್ಯುವ ಅಶಿಷ್ಟಾಚಾರದ ಶ್ರೀನಿವಾಸಾಚಾರ್ಯನಿಗೇನು ತಿಳಿಯುವದು? *

ಈ ಪ್ರಭುಲಿಂಗಲೀಲೆಯಲ್ಲಿ ಅಲ್ಲಮನ ಮತ್ತು ಬಸವೇಶ್ವರನ ಲೀಲೆಗಳು ಅಡಕವಾಗಿರುವ ಮೂಲಕ ಶ್ರೀನಿವಾಸಾಚಾರ್ಯನು ಬಸವೇಶ್ವರ ವಿಷಯವಾಗಿ ಎತ್ತಿದ ಆಕ್ಷೇಪಣೆಗಳ ನಿರಸನವನ್ನು ಅದೇ ಲೇಖದಿಂದ ಇದರಡಿ ಕೊಟ್ಟಿರುತ್ತದೆ.

" ಬಸವನು ತನ್ನ ಪೂರ್ವ ಧರ್ಮವನ್ನು ಬಿಟ್ಟು ಅನ್ಯ ಧರ್ಮವನ್ನು ಸ್ವೀಕರಿಸಲಿಲ್ಲ. ಆತನು ಹುಟ್ಟಿದಂದಿನಿಂದಲೇ ವೀರಶೈವನು. ಆತನ ತಂದೆತಾಯಿಗಳು ಶುದ್ಧ ಶೈವರಿದ್ದರು. ಆದರೆ ಸಕಲ ಶಿವಾಗಮಗಳನ್ನು ಸನತ್ಕುಮಾರಾದಿಗಳಿಗೆ

* ಇದನ್ನು ಶ್ರೀಯುತ ಸಿದ್ಧರಾಮಪ್ಪನವರು ಪಾವಟೇ ಇವರ ವಿಚಿತ್ರವಿಪರ್ಯಾಸವೆಂಬ ಲೇಖದಿಂದ ಉದಾಹರಿಸಿದೆ.

ಬೋಧಿಸಿದ ನಂದೀಶನ ಅಪರಾವತಾರನಾದ ಬಸವೇಶನು ಎಂದಾದರೂ ವೀರಶೈನೇ. ಅಥವಾ ಆತನು ಮೊದಲು ಶುದ್ಧಶೈವನಿದ್ದು ಆ ಬ್ರಾಹ್ಮಣ್ಯವನ್ನು ತಿರಸ್ಕರಿಸಿದನೆಂದು ಶ್ರೀನಿವಾಸಾಚಾರ್ಯನ ಅಭಿಪ್ರಾಯವೇ ನಿಜವೆಂದು ಹಿಡಿದರೂ, ಹಾನಿ ಏನು? ವೀರಶೈವವು ಶುದ್ಧಶೈವದ ಉತ್ತರಾವಸ್ಥೆಯೆಂದು ಸಕಲ ಆಗಮುಗಳು ಸಾರುತ್ತವೆ. ಆದ್ದರಿಂದ ವೀರಶೈವ ಧರ್ಮಸ್ವೀಕಾರವು ಪಾಪಕರವಾದದ್ದಲ್ಲ. ಹೀಗೆ ಬಸವನಮೇಲೆ ದೋಷಾರೋಪವನ್ನು ಮಾಡುವ ಶ್ರೀನಿವಾಸಾಚಾರ್ಯನು, ತನ್ನ ವೈಷ್ಣವ ಮತಕ್ಕೆ ದೋಷಾರೋಪಣೆಯನ್ನು ಮಾಡಿರುವನು. ನೋಡಿರಿ– ಚಕ್ರಾಂಕನನ್ನು ನಿಷೇಧಿಸುವ ಎಷ್ಟೋ ಸ್ಮಾರ್ತರು ವೈಷ್ಣವ ಮತ ಪ್ರವೇಶವನ್ನು ಮಾಡಿರುವದರಿಂದ, ಅವರಿಗೂ ಅವರಿಗೆ ಧರ್ಮಾಂತರವ ಮಾಡಿಸಿದ ಗುರುಗಳಿಗೂ ಅಧೋಗತಿಯನ್ನು ಕಲ್ಪಿಸ ಬೇಕಾದಿತಲ್ಲ!!

ಬಸವನು ಚಂಡಿಕೆಯನ್ನು ತೆಗೆದುಹಾಕಿದ್ದರಿಂದ ಶಿಖಾನ್ಯಾಸವನ್ನು ಹ್ಯಾಗೆ ಮಾಡುತ್ತಿದ್ದನು ಎಂಬ ಆಕ್ಷೇಪವನ್ನು ಈ ಜ್ಞಾನಲವದುರ್ವಿದಗ್ಧನು ಮಾಡುತ್ತಿರುವನು. ಆದರೆ ವ್ಲೀಂಭನು ಚಂಡಿಕೆಯನ್ನೆಳೆದದ್ದರಿಂದ ಶಿಖೆಯನ್ನು ಬೋಳಿಸಿಕೊಂಡ ಬ್ರಾಹ್ಮಣನು ಪುನಃ ಶಿಖೆಯು ಬೆಳೆಯುವತನಕ ಗಾಯತ್ರೀಜಪದಲ್ಲಿ ಶಿಖಾನ್ಯಾಸವನ್ನು ಹ್ಯಾಗೆ ಮಾಡುತ್ತಾನೆ? ಅಥವಾ ಶಿಖೆಯು ಬರುವ ವರೆಗೆ ಗಾಯತ್ರೀಜಪವನ್ನು ಬಿಡುತ್ತಾನೆಂದರೆ ಆತನು ಪಾತಕಿಯಾಗುವದಿಲ್ಲೇನು? ಶಿಖೆಯನ್ನು ಕಳೆದುಕೊಂಡ ಬ್ರಾಹ್ಮಣನಿಗೆ ಗಾಯತ್ರೀಜಪದಲ್ಲಿ ಅಧಿಕಾರವಿದ್ದರೆ, ಕರ್ಮಬಂಧಸೂಚಕವಾದ ಕೇಶಮಯ ಶಿಖೆಯನ್ನಿಕಿತ್ತು ಜ್ಞಾನರೂಪ ಶಿಖೆಯನ್ನು ತಾಳಿದ ಬಸವೇಶನಿಗೆ ಶಿಖಾನ್ಯಾಸವನ್ನು ಮಾಡುವದು ಸುಲಭವಾಗಿತ್ತು.

ಬಸವೇಶನು ವೀರಶೈವ ದೀಕ್ಷೆಯಿಂದ ಸರ್ವರನ್ನು ಪುನೀತರನ್ನಾಗಿಸಿ ಶಿವಭಕ್ತಿಯನ್ನು ಬೆಳಿಸುವಕ್ರಮವು ನಮ್ಮಲ್ಲಿಯ ಕೆಲವರ ಅಜ್ಞಾನದಿಂದ ಮುಸುಕಾದದ್ದನ್ನು ನೋಡಿ ಈ ಆಚಾರ್ಯನು ಸಂತೋಷಪಡುತ್ತಾನೆ. ಶಿವಾಜ್ಞೆಗನುಸರಿಸಿ ಸರ್ವರನ್ನು ಪಾವನಗೆಯ್ಯುವ ಆಚಾರವು ಈ ಪ್ರಾಕೃತನಿಗೆ ಹ್ಯಾಗೆ ಸೇರೀತು? ಉಳಿದ ವೇಳೆಯಲ್ಲಿ ತಮ್ಮ ವರ್ಣ ಶ್ರೇಷ್ಠತೆಯನ್ನು ಮೆರಿಸುವ ದೇಶಭಕ್ತರೆಂಬವರು ಕುಲಹದಿನೆಂಟು ಜಾತಿಯವರೊಡನೆ ಒಂದೇ ಪಂಕ್ತಿಯಲ್ಲಿ ಕುಳಿತು ಭೋಜನ ಮಾಡುವದು ಮಾತ್ರ ಈ ಸದ್ಬ್ರಾಹ್ಮಣನೆನಿಸುವ ಶ್ರೀನಿವಾಸಾಚಾರ್ಯನಿಗೆ ಒಪ್ಪುತ್ತದೆ.

ಬಸವೇಶ್ವರನಿಗೆ ವೇದೋಪನಿಷತ್ತುಗಳ ಅರ್ಥವಾಗುತ್ತಿದ್ದಿಲ್ಲೆಂದು ಹೇಳುವ ಈ ಪಂಡಿತನ ಸಂಸ್ಕೃತ ಜ್ಞಾನವು ಅಲ್ಲಮ ಶಬ್ದದ ನಿರ್ವಚನದಿಂದಲೇ ಗೊತ್ತಾಗಿದೆ. ಬಸವೇಶನ ಶಿವ ಶರಣರನ್ನು ನಿಂದಿಸಿದ ಶ್ರೀನಿವಾಸಾಚಾರ್ಯನು ಮತ್ಸ್ಯಗಂಧಿಯಲ್ಲಿ ಉತ್ಪನ್ನನಾದ ವ್ಯಾಸ ಮಹರ್ಷಿಯನ್ನೂ ಊರ್ವಸಿಯಲ್ಲಿ ಜನಿಸಿದ ವಶಿಷ್ಠನನ್ನೂ ಇನ್ನೂ ಅನೇಕ ಋಷಿಗಳನ್ನೂ ನಿಂದಿಸಿದ ಫಲವೇ ಫಲವಲ್ಲದೆ ಬೇರೆಯಲ್ಲ.

ಬಸವಾದಿಗಳು ದೇವಾವತಾರಿಗಳಾಗಿದ್ದರೆ ಹ್ಯಾಗೆ ಸೋತರೆಂದೂ, ನಾಸ್ತಿಕನಾದ ಬಿಜ್ಜಳನಲ್ಲಿ ಬಸವೇಶನು ಹ್ಯಾಗೆ ನೌಕರೀ ಹಿಡಿದನೆಂದೂ, ದಿಟ್ಟತನದ ಪ್ರಶ್ನೆಯನ್ನು ಒರಟುತನದಿಂದ ಈ ಆಚಾರ್ಯನು ಮಾಡಿರುತ್ತಾನೆ. ಮಹಿಮರ ಹೊಲಬನ್ನೇನು ಬಲ್ಲನು ? ಭಗವಾನ್ ಕ್ರಿಷ್ಣನು ಪರಂಧಾಮಕ್ಕೆ ಹೋಗಲು ಅವನ ಹೆಂಡರನ್ನು ಬೇಡರು ಒಯ್ದ ಮಾತ್ರದಲ್ಲಿ ಅವನು ಮಹಾವಿಷ್ಣುವಿನ ಅವತಾರನಲ್ಲವೇ ? " ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತೆ, " ಎಂದು ಮೊದಲಾಗಿ ವೈದಿಕ ಧರ್ಮವನ್ನೇ ಸ್ಥಾಪಿಸುತ್ತೇನೆಂದು ಸಾರುವ ಶ್ರೀಕೃಷ್ಣನು ಬೌದ್ಧಾವತಾರದಲ್ಲಿ ಅಸುರ ಮರ್ದನಕ್ಕಾಗಿ ಸರ್ವ ವೈದಿಕರಿಂದಲೂ ಅನಾದರಣೀಯವಾದ ಪಾಷಂಡ ಬೌದ್ಧ ಮತವನ್ನು ಸ್ಥಾಪಿಸಿದರೆ, ಹಾನಿಯಿಲ್ಲದಂತೆ ಕಾರ್ಯವಶಾತ್ ನಾಸ್ತಿಕನಾದ ಬಿಜ್ಜಳನಲ್ಲಿ ನೌಕರೀ ಮಾಡಿದನೆಂಬುದು ಬ್ರಾಹ್ಮಣ ಗ್ರಂಥಗಳಲ್ಲಿ ಹೊರಡುವ ವಿಷಯುಗಳಿಗಿಂತ ಹೆಚ್ಚು ಚಮತ್ಕಾರವಾದದ್ದಲ್ಲ. "

7. ಮೇಲ್ಕಾಣಿಸಿದ ಶ್ರೀನಿವಾಸಾಚಾರ್ಯನ ದೂಷಿತ ವಿಚಾರಗಳನ್ನೇ ಮೂಲ ಧನವಾಗಿಟ್ಟುಕೊಂಡು ಆತನ ಗಂಡುವಾರಸದಾರರೀರ್ವರು ತಮ್ಮ ಕುಹಕಕಲ್ಪನಾತರಂಗವನ್ನು ಬಿತ್ತರಿಸಿರುವರು. ಇವರ ಕುವಿಚಾರಕ್ಕೆ ಕೊಡಲಿಯಂತಿರುವ ಬಸವಭಾನು ಮೊದಲಾದ ಗ್ರಂಥಗಳಿಂದ ಶ್ರೀಯುತ ಪಾವಟೇ ಸಿದ್ಧರಾಮಪ್ಪನವರು ಅವರನ್ನು ಖಂಡಿಸಹತ್ತಿರುವರು. " ಶರಣರಿರವಂ ನರರಭಾವಕೆ ತಿಳಿಯಲೆಂತಹುದೋ" ಎಂಬ ಷಡಕ್ಷರಿದೇವರ ವಚನಕ್ಕನುಸಾರವಾಗಿ ಕಾಶೀನಾಥ ಮೊದಲಾದ ದುರಹಂಕಾರಪೂರಿತ ಶ್ಯಾಸ್ತ್ರಿಗಳು ಶಿವಶರಣರ ಇಂಗಿತವನ್ನರಿಯದೆ, ವೀರಶೈವ ಶೈವ ಮತಗಳ ಭೇಧವು ಗೊತ್ತಾಗದೆ, ಮನಬಲ್ಲಂತೆ ಮಲಿನ ವಿಚಾರಗಳನ್ನು ಹಂಡಿ ಶಿವಶರಣ ದೂಷಣೆ ಎಂಬ ಮಹಾ ಪಾತಕವನ್ನು ಪದರಿನಲ್ಲಿ ಕಟ್ಟಿಕೊಂಡು ಅಪಕೀರ್ತಿಗೆ ಭಾಜನರಾಗಿರುವರು. ವೀರಶೈವಮತ ವಾತ್ಸಲ್ಯಶೀಲರು ಯಾರೂ ಇವರ ಕುಮಾರ್ಗಕ್ಕೆ ಗಮನಕೊಡುವದಿಲ್ಲ. ವೀರಶೈವ ಧರ್ಮಪ್ರಕಾಶಿಕೆಯಲ್ಲಿ ಶ್ರೀನಿವಾಸಾಚಾರ್ಯನ ಲೇಖವು ಖಂಡಿಸಲ್ಪಟ್ಟಿರುವದು.

8. ಈ ಶ್ರೀನಿವಾಸಾಚಾರ್ಯನು ಮೇಲ್ಕಂಡ ಸಿ. ಪಿ. ಬ್ರಾವುನ ಸಾಹೇಬರು ಮದ್ರಾಸ ಜರ್ನಲ್ಲ ಆಫ ಲಿಟರೇಚರ ಆ್ಯಂಡ ಸಾಯಿನ್ಸ ಎಂಬ ಪತ್ರಿಕೆಯಲ್ಲಿ ಬರೆದಿರುವ " Jangam literature is as remarkable for innocence as that of the Brahmins is for vice " ಅಂದರೆ ಬ್ರಾಹ್ಮಣ ಗದ್ಯ ಪದ್ಯ ಗ್ರಂಥಗಳು ನೀತಿಗೆಷ್ಟು ವಿರೋಧವಾಗಿರುವವೋ, ಅಷ್ಟು ವೀರಶೈವ ಮತ ಗ್ರಂಥಗಳು ನೀತಿ ಬದ್ಧವಾಗಿರುವವೆಂದು ಬರೆದ ಅಂಶವನ್ನು ಖಂಡಿಸುವದರಲ್ಲಿ ತನ್ನ ವೇಳ್ಯೆಯನ್ನು ವೆಚ್ಚಮಾಡಿದ್ದರೆ ಹೆಚ್ಚು ಭೂಷಣವಾಗುತ್ತಿತ್ತು.

9. ಈ ಗ್ರಂಥದ ಸರ್ವಪ್ರಕಾರದ ಪ್ರಾಥಮಿಕ ತಿದ್ದು ಪಡೆಯನ್ನು ಶ್ರೀ ಲಿಂಗರಾಜ ಮುದ್ರಾಲಯದ ಒಡೆಯರಾದ ಶ್ರೀಯುತ ಎಮ್. ಮಧುಲಿಂಗಪ್ಪ ಹರ್ಡೇಕರ ಮಾಡಿದಕ್ಕಾಗಿ ಅವರ ಆಭಾರವನ್ನು ನಾನು ತುಂಬಾ ಮನ್ನಿಸುತ್ತೇನೆ. ಮತ್ತು ಇದರ ಶುದ್ಧಾ ಶುದ್ಧ ಪತ್ರಿಕೆಯನ್ನು ತಯಾರ ಮಾಡಿ ಶ್ರೀಯುತ ಶಿವನಗೌಡರು ಪಾಟೀಲ ಕನ್ನಡ ಗಂಡುಹುಡುಗರ ೨ ನೆಯ ನಂಬರ ಶಾಲೆಯ ಮುಖ್ಯ ಅಧ್ಯಾಪಕರಿಗೂ ನಾನು ಋಣಿಯಾಗಿರುವೆನು.

10. ಮೊದಲನೆಯ ಆವೃತ್ತಿಗೆ ವಾಚಕ ಮಹಾಶಯರು ಆಶ್ರಯಕೊಟ್ಟಂತೆ ಈ ದ್ವಿತೀಯ ಮುದ್ರಣವನ್ನು ಹೊಂದಿದ ಪ್ರಭುಲಿಂಗಲೀಲೆಗೆ ಕೂಡ ಉದಾರಾಶ್ರಯವನ್ನು ಕೊಡುವರೆಂದು ನೆರೆನಂಬಿರುವ

ಶ್ರೀಮನ್ನೃಪಶಾಲಿವಾಹನ ಶಕೆ ೧೮೪೪
ದುಂದುಭಿನಾಮ ಸಂವತ್ಸರ ಆಶ್ವೀನ ಶುದ್ಧ ೧೫
ಗುರುವಾರ ತಾ|| ೫-೧೦-೧೯೨೨
ಹುಬ್ಬಳ್ಳಿ.

ಸಜ್ಜನ ವಿಧೇಯ
ವೀರಪ್ಪ ಬಸವಪ್ಪ ಬಿಳಿಅಂಗಡಿ
ಬಿ. ಎ. ಎಲ್, ಎಲ್, ಬಿ
ಹುಬ್ಬಳ್ಳಿ.

# ವಿಷಯ ಸೂಚಿಪತ್ರಿಕೆ.

# ಶುದ್ಧಾಶುದ್ಧ ಪತ್ರಿಕೆ.

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೨ | ೧೫ | ಗೌತುಮ | ಗೌತಮ |
| ೨ | ೨೭ | ಆದಿಶೇಷನಿಗೂ | ಆದಿಶೇಷನಿಗೂ |
| ೩ | ೨೧ | ಆವನಾದರೂ | ಅವನಾದರೂ |
| ೪ | ೧ | ಹೇಳುವದೆನು | ಹೇಳುವದೇನು |
| ೬ | ೯ | ಯೆಥೇಚ್ಛ | ಯಥೇಚ್ಛ |
| ೭ | ೨೭ | ಒಂದನೇದ್ದು | ಒಂದನೆಯುದು |
| ೧೧ | ೪ | ದ್ದಲ್ಲದೆ ಶಿವನು, | ದ್ದಲ್ಲದೆ, ಶಿವನು |
| ೧೨ | ೮ | ಬನವಶೀ | ಬನವಸಿ |
| ೧೩ | ೬ | ರಾಣಿವಾಸ | ರಾಣೀವಾಸ |
| ೧೫ | ೧೮ | ಕ್ರೀಡಾಗ್ರುಹ | ಕ್ರೀಡಾಗೃಹ |
| ೧೮ | ೨ | ಅಂತಃಕರುಣ | ಅಂತಃಕರಣ |
| ೨೧ | ೮ | ಬಸವನ | ಬನವಸಿ |
| ೨೧ | ೧೬ | ಬೆಳಿಗ್ಯೆ | ಬೆಳಿಗ್ಗೆ |
| ೨೧ | ೨೮ | ನರಸಂಧಾನವಲ್ಲದು | ನು ಸಂಧಾನವಿಲ್ಲದ |
| ೨೨ | ೧೯ | ಕೊಂಡಿರಿವನೆಂಡು | ಕೊಂಡಿರುವನೆಂದು |
| ೨೨ | ೨೪ | ಜೋತಿಯನ್ನು | ಜ್ಯೋತಿಯನ್ನು |
| ೨೩ | ೧೬ | ಅಂಕಿನಲ್ಲಿ | ಅಂಕೆಯಲ್ಲಿ |
| ೨೪ | ೯ | ಲಿಂಗವೃತ | ಲಿಂಗವ್ರತ |
| ೨೪ | ೨೫ | ಶಕ್ಯಿಪವೇ | ತಕ್ಯಿವೇ |
| ೨೬ | ೨೫ | ನಮ್ಮಲ್ಲಿಯು | ನಮ್ಮಲ್ಲಿಯೇ |
| ೨೭ | ೨೩ | ಶೇಂ | ಸೇಂ |
| ೨೮ | ೮ | ಸುಲುಭ | ಸುಲಭ |
| ೨೮ | ೧೬ | ಅವಯುವಗಳ | ಅವಯುವಗಳು |
| ೨೯ | ೧ | ಶಿವಪೂಜೆ | ಶಿವಪೂಜೆ |
| ೨೯ | ೨೦ | ಸುಗುಣ | ಸಗುಣ |
| ೩೦ | ೭ | ತಪಶ್ವಿಯು | ತಪಸ್ವಿಯು |
| ೩೧ | ೨ | ಶಳವಿಗೆ | ಸೆಳವಿಗೆ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೩೧ | ೬ | ಅಸಕ್ಯ | ಅಶಕ್ಯ |
| ೩೨ | ೨೫ | ಸ್ವರಪನಾದ | ಸ್ವರೂಪನಾದ |
| ೩೩ | ೧ | ಹಾಗ್ಯಾದರು ! | ಹ್ಯಾಗಾದಾರು ! |
| ೩೩ | ೨೧ | ಪಸರಾಯಿಸಬಹುದು | ಪಸರಿಸಬಹುದು |
| ೩೫ | ೪ | ಮುಟ್ಟದ್ದಂದ ಪಾರ್ವತಿ | ಮುಟ್ಟದ್ದರಿಂದ ಪಾರ್ವತೀ |
| ೩೫ | ೧೪ | ಶಿಟ್ಟು | ಸಿಟ್ಟು |
| ೩೬ | ೧೧ | ಮನಿಯಲ್ಲಿ | ಮನೆಯಲ್ಲಿ |
| ೩೬ | ೨೪ | ತೆರಳದ್ದರೆ | ತೆರಳದಿದ್ದರೆ |
| ೩೭ | ೧೭ | ಪ್ರಥ್ವಿ | ಪೃಥ್ವಿ |
| ೩೭ | ೨೯ | ಪ್ರಶಿದ್ಧಿ | ಪ್ರಸಿದ್ಧಿ |
| ೩೮ | ೨೫ | ಭಾವಿ | ಭಾವೀ |
| ೩೯ | ೧೬ | ಮಾತಡದ ವಿನಾ | ಮಾತಾಡಿದ ವಿನಾ |
| ೪೧ | ೧೬ | ತಟಾಕು | ತಟಾಕ |
| ೪೨ | ೨೧ | ಸಾಯಿವರು | ಸಾಯುವರು |
| ೪೪ | ೮ | ಕುಂಟ | ಕುಂಟೆ |
| ೪೫ | ೯ | ಕಾಯುವಾಚಾ ಮನಸ್ಸಿನಿಂದ | ಕಾಯುವಾಙ್ಮನಸ್ಸಿನಿಂದ |
| ೪೬ | ೧೭ | ದೇಸಕ | ದೇಶಿಕ |
| ೪೬ | ೧೬–೨೭ | ಸಾಧಿಸುದ | ಸಾಧಿಸುವ |
| ೪೭ | ೯ | ಇಷ್ಟ | ಇಷ |
| ೪೭ | ೨೧ | ಕ ೃಪಾ | ಕೃಪಾ |
| ೪೯ | ೧೫ | ಯಾವ್ಯಾವ | ಯಾವ ಯಾವ |
| ೫೧ | ೧೭ | ವ್ಯಾಪಿಸ್ಕಿ ಕೊಂಡಾಗ | ವ್ಯಾಪಿಸಿಕೊಂಡಾಗ |
| ೫೧ | ೨೧ | ಸದಾ ಶಿವಮೂರ್ತಿಯು | ಸದಾಶಿವ ಮೂರ್ತಿಯು |
| ೫೨ | ೫–೬ | ಪ್ರಮಥ ಗಣದವನಿದ್ದು | ಪ್ರಮಥನಿದ್ದು |
| ೫೩ | ೨೪ | ಸುಟ್ಟೆ ಬೀಜ | ಸುಟ್ಟ–ಬೀಜದಂತೆ |
| ೫೪ | ೭ | ವೇದಾ | ವೇಧಾ |
| ೫೬ | ೯ | ಸಮಿಪಕ್ಕೆ | ಸಮೀಪಕ್ಕೆ |
| ೬೦ | ೨ | ಪ್ರಮಾಣ | ಪ್ರಣಾಮ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೬೦ | ೨೨ | ಅಗ್ಗೀನೇ ಶೀಳಿ | ಅಗ್ಗೀ ಸೀಳಿ |
| ೬೨ | ೧೫ | ಅನಂತವರ | ಅನಂತರ |
| ೬೩ | ೩ | ಯೋಗಿ | ಯೋಗೀ |
| ೬೫ | ೧೫ | ಕೀರ್ತಿಪೂಜಾ ಲಾಭದಲ್ಲಿ | ಕೀರ್ತಿ ಪೂಜಾಲಾಭದಲ್ಲಿ |
| ೬೫ | ೨೨ | ಯೋ ಅತೀತ್ಯ | ಯೋऽ ತೀತ್ಯ |
| ೬೯ | ೧೪ | ಬೇವನು | ಜೀವನು |
| ೭೧ | ೨೮ | ಲಿಂಗದ | ಲಿಂಗ |
| ೭೨ | ೨೩ | ಅಳಿಕಿಸಿ | ಅಳುಕಿಸಿ |
| ೭೩ | ೨ | ಕಡಿಗೆ | ಕಡೆಗೆ |
| ೭೪ | ೧೨ | ಶಾನು | ತಾನು ಅವರನ್ನು |
| ೭೬ | ೯ | ದಂಡಾನಾಯುಕನ | ದಂಡ ನಾಯುಕನ |
| ೭೬ | ೧೧ | ಬಸವೇಶ್ವನು | ಬಸವೇಶ್ವರನಿಗೆ |
| ೭೭ | ೧ | ನಿನ್ನನ್ನೇ | ನಿಮ್ಮನ್ನೇ |
| ೭೮ | ೨೮ | ನುಡಿವಳಿಯುಲತಿ | ನುಡಿಯುಳಿಯುಲತಿ |
| ೭೯ | ೧೨ | ಮರುಳ ಶಂಕರದೇರನು | ಮರುಳು ಶಂಕರದೇವರು |
| ೭೯ | ೨೫ | ಯುಂನ | ಎನ್ನ |
| ೭೯ | ೨೬ | ಕರಣಗಳು | ಕರಣಗಳು ಪರಿಣಮಿಸಿ |
| ೮೦ | ೧೫ | ಕೃಪೆಯಿಂದಲ್ಲದೆ | ಕೃಪೆಯಿಲ್ಲದೆ |
| ೮೧ | ೧ | ಅಂತಜ್ಞಾನವೇ | ಅಂತಜ್ಞಾನಿಯೇ |
| ೮೨ | ೩೦ | ಅವರೆಲ್ಲರೂ | ಅವರೆಲ್ಲರೂ ಅಲ್ಲಮನನ್ನು |
| ೮೪ | ೧೯–೨೦ | ಹನಿವೆಗೆ | ಹಸಿವೆಗೆ |
| ೮೫ | ೨೦ | ಪಡೆಯುಲೆತ್ನಿಸುವನು | ಪಡೆಯಲು ಯತ್ನಿಸುವನು |
| ೮೬ | ೨೩ | ಲಿಂಗವ | ಲಿಂಗವನು |
| ೮೬ | ೨೫ | ಬ್ಯಾರಿರಿಸಲಾಗದು | ಬೇರಿರಿಸಲಾಗದು |
| ೮೮ | ೨೩ | ಯುದ್ಧತ್ತಂ | ಯುದ್ದತ್ತಂ |
| ೮೮ | ೨೮ | ಪಾಣಾ | ಪ್ರಾಣಾ |
| ೮೯ | ೨೬ | ಜ್ಞಾನಿಯೂದನೆಂದು | ಜ್ಞಾನಿಯಾದೆನೆಂದು |
| ೯೨ | ೧೧ | ಸುಗಂಧಮು | ಸುಗಂಧವು |
| ೯೪ | ೯ | ಮಳಿ | ವಳೆ |
| ೯೫ | ೧೮ | ಭವಿುಯು | ಭೂಮಿಯು |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೯೬ | ೨೫ | ನೆನನೆನದು | ನೆನೆಸನೆದು |
| ೯೬ | ೨೮ | ಮತ್ತೆ | ತನ್ |
| ೯೮ | ೨೭ | ಯೆನುತ | ಯೆನು |
| ೧೦೧ | ೪ | ಸಟೆಯು | ಸಟಯು |
| ೧೦೧ | ೨೬ | ಕೆಚ್ಚಲಪೇಸು | ಕೆಚ್ಚ ಲೊಳೇಸು |
| ೧೦೨ | ೧ | ಅಮಲ್ಲ | ಅಲ್ಲಮ |
| ೧೦೨ | ೭ | ಮನದ | ಮನನ |
| ೧೦೩ | ೮ | ಚತ್ಸ್ವರೂಪದ | ಚಿತ್ಸ್ವರೂಪದ |
| ೧೦೪ | ೬ | ನೆನ್ನ | ನಿನ್ನ |
| ೧೦೫ | ೨ | ಅನ್ಯ್ಕತ | ಅನ್ಯತ್ರ |
| ೧೦೬ | ೧೦ | ಬಂಧು | ಬಂಧ |
| ೧೦೭ | ೧೭ | ಉಳಿಸುವನು | ಉಳಿಯುವನು |
| ೧೦೭ | ೨೧ | ಪದಾರ್ಥಗಳು | ಪದಾರ್ಥಗಳ |
| ೧೦೮ | ೧೬ | ಹೇಳಲ | ಹೇಳಲ್ಪ |
| ೧೧೦ | ೧೭ | ದರ್ಭಾಸನ | ದರ್ಭಾಸನದ |
| ೧೧೨ | ೨೭ | ತಿಳಿವದೀತನು | ತಿಳಿವುದೀತನು |
| ೧೧೨ | ೨೭ | ನುಡಿದರೆ | ನಡೆದರೆ |
| ೧೧೩ | ೨೫ | ಮುಗ್ನನಾಗಿರುತ್ತೇನೆ | ಮುಗ್ನನಾಗಿರುತ್ತಾನೆ |
| ೧೧೪ | ೨೮ | ಛಾಯುಡಾಗಿನ | ಛಾಯುದೊಳಗಿನ |
| ೧೧೫ | ೯ | ಅವನ | ಅಲ್ಲಮನ |
| ೧೧೬ | ೧೫ | ಕಾರಣವು | ಕಾರಣವೂ |
| ೧೧೭ | ೨ | ರುಚಿಸಿರುವೆನು | ರಚಿಸಿರುವೆನು |
| ೧೨೦ | ೨೯ | ಸಾಮಗ್ರಿಗಳೊಡನೆ | ಸಾಮಗ್ರಿಗಳು ಇವುಗಳೊಡನೆ |
| ೧೨೧ | ೨೩ | ಅಂತರಶತ್ರು | ಅಂತಃಶತ್ರು |
| ೧೨೨ | ೨೪ | ಮನೀಶ್ವರರ | ಮುನೀಶ್ವರರು |
| ೧೨೪ | ೨೨ | ಶರೀರವು | ಶರೀರದಲ್ಲಿ |
| ೧೨೬ | ೧೫ | ಯುಜ್ಞನದ | ಯುಜ್ಞದ |
| ೧೨೬ | ೧೮ | ಗೃಹಗಳ | ಗ್ರಹಗಳ |
| ೧೨೬ | ೧೮ | ಸುಷುಮ್ನ | ಸುಷುಮ್ನ |
| ೧೨೬ | ೨೦ | ಅಂತರಯುಜ್ಞವನ್ನು | ಅಂತರ್ಯಾಜ್ಞವನ್ನು |
| ೧೨೯ | ೪ | ಉತ್ತರ | ಉತ್ತರದ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೨೯ | ೫ | ದಕ್ಷಿಣ | ದಕ್ಷಿಣದ |
| ೧೩೧ | ೧೦ | ದೂರು | ದೂರ |
| ೧೩೨ | ೨೫ | ಮಡಿವಾಳ–ಮಾಚಿದೇವ | –ಮಡಿವಾಳ ಮಾಚಿದೇವ– |
| ೧೩೩ | ೧೨ | ನಿರಾಂತಕವಾಗಿ | ನಿರಾತಂಕವಾಗಿ |
| ೧೩೯ | ೯ | ತಂದಿಡರಿ | ತಂದಿಡಿರಿ |
| ೧೪೦ | ೧೧ | ಒಡವಾಗ್ನಿಯು | ವಡವಾಗ್ನಿಯು |
| ೧೪೦ | ೨೩ | ಗೊತ್ತಾಗಿ | ಅರಿವಾಗಿ |
| ೧೪೩ | ೪ | ಸ್ವಲ್ಪು | ಸ್ವಲ್ಪ |
| ೧೪೭ | ೩ | ಮೂರು | ಮೂವರು |
| ೧೪೭ | ೫ | ಸಮಂಧ | ಸಂಬಂಧ |
| ೧೫೧ | ೧೫ | ಪ್ರಾಣಿಗಳಿಗನ್ನು | ಪ್ರಾಣಿಗಳನ್ನು |
| ೧೫೧ | ೨೦ | ಕಪ್ಪೆ ಚಿಪ್ಪು | ಕಪ್ಪೆಚಿಪ್ಪು |
| ೧೫೬ | ೧೭ | ದೃಷ್ಕಿಪರುಷ | ದೃಷ್ಟಿಪರುಷ |
| ೧೫೮ | ೮ | ಸ್ವರ್ಘ | ಸ್ವರ್ಗ |
| ೧೬೦ | ೧೩ | ಉತ್ಮನ್ನ | ಉತ್ಪನ್ನ |
| ೧೬೧ | ೧೭ | ಮಃಹಾದೇಮಂ | ಮಹಾಃದೇವಂ |
| ೧೬೧ | ೨೧ | ಸತ್ಯಸಂಭ | ಸತ್ಯಸಂಧ |
| ೧೬೧ | ೨೭ | ಕೋಟಭ | ಕೋಟಭಃ |
| ೧೬೨ | ೮ | ಬ್ರಹ್ಮಚಾರೀ–ಗ್ರಹಸ್ಥ | ಬ್ರಹ್ಮಚಾರಿ–ಗೃಹಸ್ಥ |
| ೧೬೩ | ೯ | ಪ್ರಾಕಾತ | ಪ್ರಾಕೃತ |
| ೧೬೩ | ೨೬ | ಸೇವಿಸಿದೆ | ಸೇವಿಸದೆ |
| ೧೬೪ | ೨೫ | ಕಥ್ಯತೇ | ಕಥ್ಯತೇ |
| ೧೬೫ | ೮ | ದೇವ | ದೇವಃ |
| ೧೬೬ | ೧೦ | ಬೇರೆಯಿಂ | ಬೇರೆಯುಂ |
| ೧೬೬ | ೫ | ಮಹೇಶ್ವರನು–ವೀರಶೈವನು | ಮಾಹೇಶ್ವರನು ( ವೀರಶೈವನು ) |
| ೧೬೭ | ೩೦ | ದುರ್ಲಭ್ಯ | ದುರ್ಲಭ |
| ೧೬೮ | ೨೧ | ದ್ವಿಜಾ | ದ್ವಿಜೇ |
| ೧೬೮ | ೨೨ | ಶ್ರೇಷು | ತೇಷು |

—( ಶ್ರೀ ಶಿವಾಯನಮಃ )—



# ಪ್ರಭುಲಿಂಗಲೀಲೆ.

## ೧ ನೆಯ ಅಧ್ಯಾಯ.

## ಶಾಂಬರೀ ಮಾಯಾ ನಿಯೋಜನ.

॥ ಶಾ. ವಿ. ॥ ಶ್ರೀ ಮದ್ವೇದಶಿಖೈಕಮತ್ಯಘಟನಾ ಸಿದ್ಧಾಂತ ಸೂತ್ರಾವಲೀ
ತಾತ್ಪರ್ಯಾರ್ಥಮಪಾರ್ಥಮಾಯಿಕಜಗನ್ಮಿಥ್ಯಾತ್ವ ಬೋಧಪ್ರದಂ ।
ಸತ್ಯಂ ಜ್ಞಾನಮನಂತಮಾದ್ಯಮಜನಂ ಸರ್ವೇಶ್ವರಂ ಶಂಕರಂ ।
ವಂದೇಹಂ ಪ್ರಭುಲಿಂಗಮೂರ್ತಿಮನಿಶಂ ವಾಙ್ಮಾನಸಾಗೋಚರಂ ॥೧॥



ಪ್ರಕಾಶಮಯವಾದ ಸತ್ವಗುಣದೊಬ್ಬಳಿಯೇ ರಜತಾದ್ರಿ ಎಂಬ ಹೆಸರನ್ನು ಹೊಂದಿರುವದೋ ಎಂಬಂತೆ ಯಾರಿಂದಲೂ ಬಣ್ಣಿಸಲಸದಳವಾದ ದೇದೀಪ್ಯಮಾನವಾದ ಕೈಲಾಸ ಪರ್ವತವು ಕಂಗೊಳಿಸುತ್ತಿತ್ತು. ಆ ಕೈಲಾಸ ಪರ್ವತದಲ್ಲಿ ಅಷ್ಟೈಶ್ವರ್ಯಗಳಿಂದ ಯುಕ್ತವಾದ ಒಡ್ಡೋಲಗ ಶಾಲೆಯು ಸಕಲರ ಚಿತ್ತವನ್ನು ಆಕರ್ಷಿಸಿ ಮೆರೆಯುತ್ತಿತ್ತು. ಅಂತಹ ಒಡ್ಡೋಲಗ ಶಾಲೆಯೊಳಗೆ ನವರತ್ನ ಖಚಿತವಾದ ದಿವ್ಯ ಮಂಟಪದಲ್ಲಿ ಸತ್ಯತೆಯು ಸಾಕಾರವಾಗಿಯೂ ನಿತ್ಯತೆಯು ನೆಲೆಯಾಗಿಯೂ ದಿವ್ಯಜ್ಞಾನದ ಜ್ಯೋತಿಯಾಗಿಯೂ ಇರುವ ಸಿಂಹಾಸನವು ಒಪ್ಪುತ್ತಿತ್ತು. ಆ ಮನೋಹರವಾದ ಸಿಂಹಾಸನಾಗ್ರದಲ್ಲಿ ತರ್ಕಕ್ಕೆ ನಿಲುಕದವನೂ, ಪರಬ್ರ

ಹ್ಮನೂ ಪ್ರಣವಸ್ವರೂಪನೂ, ನಿತ್ಯನೂ, ಪರಿಪೂರ್ಣನೂ, ಕಾರಣಕ್ಕೆ ಕಾರಣನೂ ಆಗಿರುವ ಪರಶಿವನು, ಚಂದ್ರನು ಶೀತಳವನ್ನೂ, ಕರ್ಪೂರವು ಕಂಪನ್ನೂ, ಪುಷ್ಪವು ಪರಿಮಳವನ್ನೂ, ರತ್ನವು ಕಾಂತಿಯನ್ನೂ ಕೂಡಿಕೊಂಡಿರುವಂತೆ ಅವಿನಾಭಾವದಿಂದ ಶಕ್ತಿಸ್ವರೂಪಳಾದ ಪಾರ್ವತೀದೇವಿಯನ್ನು ಹೊಂದಿ ರಂಜಿಸುತ್ತಿದ್ದನು. ಇಂತಹ ಪಾರ್ವತೀ ಪರಮೇಶ್ವರರ ಉಭಯ ಪಾರ್ಶ್ವಗಳಲ್ಲಿ ಅನೇಕ ಪ್ರಕಾರ ಪರಿಚರ್ಯೆ ವನ್ನು ಮಾಡಿಕೊಂಡಿರುವ ರುದ್ರರೂ, ರುದ್ರಕನ್ಯೆಯರೂ ವಿರಾಜಿಸುತ್ತಿದ್ದರು. ಆ ತೇಜಃಪುಂಜವಾದ ಒಡ್ಡೋಲಗದ ಮುಂಭಾಗದಲ್ಲಿ ಅನೇಕ ಕೋಟಿ ರುದ್ರ, ವಿಷ್ಣು, ಬ್ರಹ್ಮ, ದೇವೇಂದ್ರ ಮೊದಲಾದ ಅಗಣಿತ ದೇವತೆಗಳಿದ್ದರು. ಪರಶಿವನ ಸಮ್ಮುಖದಲ್ಲಿ ಧರ್ಮಮೂರ್ತಿಯೆನಿಸಿದ ನಂದಿಕೇಶ್ವರನು ಮೆರೆದಿದ್ದನು. ಅಲ್ಲಿಯೇ ಸಮೀಪದಲ್ಲಿ ಮೃತ್ಯುವಿನ ವೇಗವನ್ನು ಕೆಡಿಸಿ, ಕರ್ಮಗಳ ಭ್ರಮೆಯನ್ನು ಬಿಡಿಸಿ, ಶಿವಪದ ದ್ರೋಹಿಗಳನ್ನ ಸೀಳಿ ನೆಲಕ್ಕೆ ಅಪ್ಪಳಿಸುವ ಮಹಾಸಮರ್ಥ ವೀರಭದ್ರನೂ, ಶಿವನ ಹರುಷದ ನಿಲಯವೂ, ಸೌಖ್ಯದ ನೆಲೆಯೂ, ಆನಂದದ ದರ್ಪಣವೂ ಭಕ್ತಿಯ ಕರಂಡವೂ ಆದ ಭೃಂಗೀಶ್ವರನೂ, ಸಪ್ತ ಸಮುದ್ರಗಳನ್ನು ನಿಮಿಷಾರ್ಧದಲ್ಲಿ ಬತ್ತಿ ಸುವ, ಮೇರುಗಿರಿಯನ್ನು ಬೆರಳಿನಿಂದ ಮೀಟುವ, ಕ್ಷಣಮಾತ್ರದಲ್ಲಿ ಬ್ರಹ್ಮಾಂಡಗ ಳನ್ನೇ ಕಿತ್ತು ಹಾಕುವ, ವೀರವೃತ್ತಿಯ ಪ್ರಮಥರೂ ಒಪ್ಪಿರ್ದರು. ಅತ್ರಿ, ಭರ ದ್ವಾಜ, ವಿಶ್ವಾಮಿತ್ರ, ಗೌತಮ, ಗಾರ್ಗ್ಯನಾರದ, ಭೃಗು, ಪುಲಸ್ತ್ಯ, ವಶಿಷ್ಠ ದುರ್ವಾಸ ಮೊದಲಾದ ಮುನಿಸ್ತೋಮವು ಸಹಾ ಆ ಶಿವನ ಸಭೆಯಲ್ಲಿ ನೆರೆದಿತ್ತು. ಆದಿತ್ಯ, ಸವಿತೃ ಸೂರ್ಯ, ಪೂಷ, ಭಗ, ಸುಮಿತ್ರ, ತಮೋಘ್ನ, ಅರುಣ, ಭಾನು ಮಾರ್ತಂಡ, ಪ್ರಭಾಕರ, ದಿವಾಕರ, ರೆಂಬ ದ್ವಾದಶಾದಿತ್ಯರೂ, ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತುಗಳೆಂಬ ನವಗ್ರಹಗಳೂ ಆ ಪರಶಿವನೋಲಗದಲ್ಲಿ ಎಸೆದಿದ್ದರು. ವೀಣೆಯು ಧ್ವನಿಗೊಂಡಿರುವದು, ಮೃದಂಗವು ನುಡಿಯುತ್ತಿರುದು; ರಾಗವು ರಂಜಿಸುತ್ತಿರುವದು; ಕಹಳೆಯು ಭೋರ್ಗರೆಯುವದು. ಗತಿಗನುಸಾರವಾಗಿ ತಾಳವನ್ನು ಹಾಕುತ್ತಿರಲು, ತತಾನದ್ಧ ಘನಸುಷಿರಗಳೆಂಬ ಚತುರ್ವಿಧ ವಾದ್ಯಗಳು ಒಂದಕ್ಕೊಂದು ಸಮ್ಮೇಳನವಾಗಿರಲು, ಭೃಂಗೀಶ್ವರನ ನರ್ತನವು ಆ ಶಿವನ ಸಭೆಗೆ ವಿಶೇಷ ಶೋಭೆಯನ್ನುಂಟು ಮಾಡಿತ್ತು. ಸಕಲ ಸಂಪ ತ್ತಿಗೆ ಆಧಾರನೂ ಪರಮ ಲೀಲಾವೈಭವನೂ ಆದ ಪರಶಿವನ ಒಡ್ಡೋಲಗದ ವರ್ಣ ನೆಯನ್ನು ಮಾಡುವದು ಆದಿಶೇಷನಿಗೂ ಸಹ ಅಸಾಧ್ಯವು.

ಒಂದಾನೊಂದು ದಿವಸ ಪರಮೇಶ್ವರನು ಪಾರ್ವತಿಗೆ ಭಕ್ತಿವಿಷಯವನ್ನು ನಿರೂಪಿಸುವಾಗ ಭಕ್ತಿಯಲ್ಲಿ ಸಕಾಮ–ನಿಷ್ಕಾಮಗಳೆಂಬವೆರಡು ಮುಖ್ಯ ಭೇದಗ

ಳುಂಟೆಂತಲೂ ಅವುಗಳಲ್ಲಿ ನಿಷ್ಕಾಮ ಭಕ್ತಿಯೇ ಶ್ರೇಷ್ಠವಾಗಿದ್ದು, ಅಂತಹ ಭಕ್ತಿಸಂಪನ್ನರನ್ನು ಜಯಿಸುವದು ಮೂರು ಲೋಕಗಳಲ್ಲಿ ಯಾರಿಗೂ ಸಾಧ್ಯವಲ್ಲವೆಂತಲೂ ನುಡಿದದ್ದನ್ನು ಪಾರ್ವತಿಯು ಕೇಳಿ—ಸ್ಥಾವರ ಜಂಗಮಾತ್ಮಕವಾದ ಈ ಜಗತ್ತು ನನ್ನ ಸ್ವರೂಪವಾದದ್ದು; ಈ ಜಗತ್ತಿನಲ್ಲಿ ನನ್ನಾಜ್ಞೆಯನ್ನು ಮೀರಿ ನಡೆಯುವವರು ಯಾರು? ನಿಷ್ಕಾಮ ಭಕ್ತನಾದರೂ ಕ್ಷಣಮಾತ್ರದಲ್ಲಿ ಸೋತು ಹೋಗುವದೇ ನಿಶ್ಚಯ. ಹೀಗಿದ್ದು ಆತನನ್ನು ಜಯಿಸುವವರು ಯಾರೂ ಇಲ್ಲೆಂದು ಹೇಳುವ ನುಡಿಯು ಗಗನಕುಸುಮದಂತೆ ಅಸಂಭವವೇ ಸರಿ. ದೇವಾಧಿದೇವನಾದ ಮಹೇಶ್ವರನನ್ನೇ ನಾನು ನನ್ನ ಮಾಯಾ ಶಕ್ತಿಯಿಂದ ವಶ ಮಾಡಿಕೊಂಡ ಬಳಿಕ ನನಗಿಂತಲೂ ಅಧಿಕರು ಯಾರಿದ್ದಾರೆ? ಎಂದು ಬಹು ಅಹಂಕಾರದಿಂದ ನುಡಿಯಲು ಕೈಲಾಸಪತಿಯು ದೇವಿಯ ಗರ್ವೋಪಶಮನಾರ್ಥವಾಗಿ ಯೋಗೀಶ್ವರನೂ, ವಿಶ್ವಾತ್ಮಕನೂ, ಚಿದ್ಘನಸ್ವರೂಪನೂ ಆದ ಅಲ್ಲಮಪ್ರಭುವನ್ನು ನೆನೆದ ಮಾತ್ರದಲ್ಲಿಯೇ ಆತನು ಆಕಾಶ ಮಾರ್ಗದಿಂದ ತನ್ನೆಡೆಗೆ ಬರಲಾಗಿ, ಪರಮೇಶ್ವರನು ಸಿಂಹಾಸನದಿಂದೆದ್ದು ಮೃದುಮಧುರೋಕ್ತಿಗಳಿಂದ ಸತ್ಕರಿಸಿ ಆಸನದಲ್ಲಿ ಕೂಡ್ರಿಸಿ ಭಕ್ತಿಯಿಂದ ಆತನನ್ನು ಪೂಜಿಸಿದನು. ಬಳಿಕ ಪರಮೇಶ್ವರನು ಆ ಪ್ರಭುವಿನೊಡನೆ ಬ್ರಹ್ಮಜ್ಞಾನ ಪ್ರಸಂಗವನ್ನು ಬೆಳಿಸಿ ಆ ಮಹದಾನಂದದಲ್ಲಿ ತನ್ನ ಅರ್ಧಾಂಗಿಯನ್ನೇ ಮರೆತು ಬಿಟ್ಟನು. ಆತನು ಅಲ್ಲಿಂದ ಹೊರಟು ಹೋದ ಬಳಿಕ ಪಾರ್ವತಿಯು ಚಕಿತಮಾನಸಳಾಗಿ ಶಂಕರನನ್ನು ಕುರಿತು—ಎಲೈದೇವೋತ್ತಮನೆ ನೀನು ಜಗತ್ತಿನಲ್ಲಿ ಶ್ರೇಷ್ಠನೂ, ಅಖಂಡನೂ, ಸಂಪೂರ್ಣನೂ, ಸರ್ವಜ್ಞನೂ ಆಗಿರುವಿ. ನಾನು ನಿನಗೆ ಸತಿಯಾಗಿರುವೆನು. ಹೀಗಿದ್ದು ಇದೇ ಈಗ ಇಲ್ಲಿಂದ ಹೊರಟುಹೋದ ಯಾವನೋ ಒಬ್ಬನಿಗೆ ನೀನು ಬಹು ಮಾನಮರ್ಯಾದೆಯನ್ನು ಮಾಡಿದಿ, ಅವನನ್ನು ಅರ್ಚಿಸಿದಿ. ನಿನ್ನ ಸಿಂಹಾಸನದಮೇಲೆ ಕೂಡ್ರಿಸಿದಿ; ಅವನಾದರೂ ನನ್ನಂಜಿಕೆಯು ತಿಲಮಾತ್ರವಿಲ್ಲದೆ ಸಿಂಹಾಸನದಲ್ಲಿ ಕುಳಿತನು. ಆತನ ಹೆಮ್ಮೆ ಎಷ್ಟು! ಅವನು ಯಾರು? ಎಲ್ಲಿರುವನು? ಎಲ್ಲಿಹೋದನು? ಇದೆಲ್ಲವನ್ನು ನನಗೆ ಹೇಳಬೇಕು—, ಎಂದು ಕೇಳಲು ಪರಮೇಶ್ವರನು ನಿನ್ನ ಇಚ್ಛೆಯಿದ್ದರೆ ಹೇಳುತ್ತೇನೆ ಕೇಳು. ಪೂರ್ವದಲ್ಲಿ ಅಜ್ಞಾನತಮವನ್ನು ನಾಶ ಮಾಡಿದ ಸಚ್ಛೀಲನಾದ ಒಬ್ಬ ಮುನಿಶ್ರೇಷ್ಠನು ಆಗಿಹೋದನು. ಆತನ ಧರ್ಮಪತ್ನಿಯಾದರೂ ಪತಿಯಗುಣ ಸ್ವಭಾವಗಳಿಗೆ ಅನುರೂಪಳಾಗಿದ್ದಳು. ಆ ದಂಪತಿಗಳು ಪುತ್ರಪ್ರಾಪ್ತಿಗಾಗಿ ಬಹು ಕಾಲದವರೆಗೆ ದೃಢತರ ತಪಸ್ಸನ್ನಾಚರಿಸಿದ್ದರಿಂದ, ನಾನು ಅವರ ತಪಸ್ಸಿಗೆ ಮೆಚ್ಚಿ ಒಬ್ಬ ಪುತ್ರನನ್ನು ಪಾಲಿಸಿದೆನು. ಇವನೇ ಆತನು, ಈತನ ಹೆಸರು ಅಲ್ಲಮಪ್ರಭು. ಈತನು ಉಪಾಧಿರಹಿತನು; ದೇದೀಪ್ಯಮಾನ ಶರೀರವುಳ್ಳವನು; ಜ್ಞಾನಭಾಂಡಾರನು,

ಮಾಯಾತೀತನು, ಬಹಳ ಹೇಳುವದೇನು! ಈತನೇ ಜಗದ್ಗುರುವು ಎಂದು ಹೇಳಲು ಪಾರ್ವತಿಯು ನಾನು ಜಾಗೃತಳಾಗಿರುವಲ್ಲಿ ಅಲ್ಲಮಪ್ರಭುವಿನ ಆಟವು ಸಾಗುವದೇ! ನಾನು ಸರ್ವ ಜಗತ್ತನ್ನು ಮಾಯಾರೂಪದಿಂದ ವ್ಯಾಪಿಸಿಕೊಂಡಿರುವೆನು. ಆ ಅಲ್ಲಮಪ್ರಭುವಿನ ದೊಡ್ಡಸ್ತಿಕೆಯನ್ನು ಯಾಕೆ ಸುಮ್ಮನೆ ಹೇಳುತ್ತೀರಿ? ಎಂದು ಅಹಂಕಾರಪೂರ್ವಕವಾಗಿ ಮಾತಾಡಿದಳು. ಬಳಿಕ ಶಂಕರನು ಅಲ್ಲಮನ ವಿಷಯವಾಗಿ ತಾನು ಹೇಳಿದ್ದೆಲ್ಲ ನಿಜವೆಂದೂ, ನಿಸ್ಸಂದೇಹ ಎಂದೂ ಹುಸಿಯನ್ನು ನುಡಿದಿಲ್ಲವೆಂದೂ, ಮತ್ತು ಯಾವನಿಗೆ ಆತ್ಮಸ್ವರೂಪ ಜ್ಞಾನವಾಗಿದೆಯೋ ಅಂಥವನು ಮಾಯೆಯಿಂದ ಎಂದೂ ಸೋಲಿಸಲ್ಪಡನೆಂದೂ ಅನೇಕ ಪ್ರಕಾರ ಬುದ್ಧಿವಾದ ಹೇಳಿದಾಗ್ಯೂ ಪಾರ್ವತಿಯು ಕೇಳದೆ ಜಗದೀಶ್ವರಾ ನೀವು ಅನ್ನುವದು ನಿಜವಿದ್ದರೂ ನಾನು ನಂಬಲಾರೆನು. ನನ್ನ ಮಾಯಾ ಶಕ್ತಿಗೆ ಅಲ್ಲಮನು ವಶವರ್ತಿಯಾಗದಿದ್ದರೆ ಮಾತ್ರ ನೀವು ಅಪ್ಪಣೆಕೊಡಿಸಿದ್ದು ಯಥಾರ್ಥವೆಂದು ನಂಬುವೆನು—, ಎಂದು ಆಡಲು ಶಂಕರನು— ಪಾರ್ವತಿ, ನೀನು ಅಲ್ಲಮನನ್ನು ಗೆಲ್ಲುವ ವಿಷಯವಾಗಿ ಇಷ್ಟು ದುರಾಗ್ರಹವುಳ್ಳವಳಾಗಬೇಡ. ನಿನ್ನ ಉದ್ಧತವಾದ ಪ್ರತಿಜ್ಞೆಯು ಆನೆಯು ಸುಂಡಿಲನ್ನು ಬಳ್ಳಿಯಿಂದ ಕಟ್ಟಲು ಯತ್ನಪಡುವಂತೆ ವ್ಯರ್ಥವಾಗಿ ಹೋಗುವದು—ಎಂದು ಅನೇಕ ರೀತಿಯಿಂದ ತಿಳಿಸಿದರೂ ಹಟವನ್ನು ಬಿಡದೆ ತನ್ನ ಶಕ್ತಿಯಿಂದ ಅಲ್ಲಮಪ್ರಭುವನ್ನು ಸೋಲಿಸದೆ ಬಿಡಲೊಲ್ಲೆನೆಂದು ಶಪಥ ಮಾಡಿ, ತನ್ನ ಅಂಶೀಭೂತಳಾದ ತಾಮಸೀ ಮಾಯೆಯನ್ನು ನೆನೆದಳು. ಆಗ ಆ ಮಾಯೆಯು ಕೂಡಲೆ ಅವಳ ಸಮ್ಮುಖದಲ್ಲಿ ಬಂದು ನಿಂತಳು. ಅವಳನ್ನು ನೋಡಿ ಪಾರ್ವತಿಯು— ಎಲೆ ಸುಂದರಿ, ನಾನು ದೇವ ಸಭೆಯಲ್ಲಿ ಅಭಿಮಾನಪೂರ್ವಕವಾಗಿ ಮಾಡಿದ ಪ್ರತಿಜ್ಞೆಯು ನಿನಗೆ ತಿಳಿದಿರುವದು. ನೀನು ಪರಾಕ್ರಮಿಯಾಗಿರುವಿ. ಮುನೀಶ್ವರರ ಮನಸ್ಸನ್ನು ಚಂಚಲ ಪಡಿಸುವಲ್ಲಿ ಬಹಳ ಕುಶಲಳಿರುವಿ. ಜಯಶೀಲಳಾಗಿರುವಿ. ಜಗತ್ತಿನಲ್ಲಿ ಹಬ್ಬಿದ ನನ್ನ ಕೀರ್ತಿಗೆ ನೀನೇ ಕಾರಣಳಾಗಿರುವಿ; ಇದು ನನಗೆ ಸಂಪೂರ್ಣವಾಗಿ ಗೊತ್ತುಂಟು. ನೀನು ನಿನ್ನ ಹಾವಭಾವ ವಿಲಾಸಯುಕ್ತವಾದ ಕಳೆಯಿಂದಲೂ ಗಾಯನ ನರ್ತನ ಮೊದಲಾದ ಮನೋರಂಜಕ ಕೃತ್ಯಗಳಿಂದಲೂ ಅಲ್ಲಮಪ್ರಭುವಿನ ಮನಸ್ಸನ್ನು ಕಾಮವಿಕಾರದಲ್ಲಿ ತೊಡಗಿಸು; ವಿಷಯಸುಖಗಳ ಕಡೆಗೆ ಹಚ್ಚು; ನೀನು ಕೈಕೊಂಡ ಯಾವ ಕಾರ್ಯವೂ ವ್ಯರ್ಥವಾಗಿಲ್ಲ— ಎಂದು ಹೇಳಲು, ತಾಮಸೀ ಮಾಯೆಯು ಅವಳೆದುರಿಗೆ ಕೈ ಜೋಡಿಸಿ ನಿಂತುಕೊಂಡು— ಎಲೈ ಜಗನ್ಮಾತೆಯೆ, ನಾನು ನಿನ್ನ ದಾಸಳು. ನನಗೆ ಅಸಾಧ್ಯವಾದ ಕಾರ್ಯವು ಈ ಜಗತ್ತಿನಲ್ಲಿ ಯಾವದೂ ಇಲ್ಲ. ಬ್ರಹ್ಮಾದಿ ದೇವತೆಗಳ ಮನಸ್ಸನ್ನು ವಿಷಯ ಸುಖಗಳಲ್ಲಿ ಮಗ್ನವಾಗಿರುವಂತೆ ಮಾಡಿರುವೆನು. ಹೀಗಿದ್ದು, ಅಲ್ಲಮನೆಂಬುವ ಸಾಮಾನ್ಯ ಮನುಷ್ಯನನ್ನು ಗೆಲ್ಲುವದೆಂದರೆ ಯಾವ

ದೊಡ್ಡ ಪ್ರತಿಷ್ಠಿತ ಕಾರ್ಯ? ಅಲ್ಲಮನು ಬೇಕಾದಲ್ಲಿ ಅಡಗಿಕೊಂಡಿದ್ದರೂ ಅವನನ್ನು ಕಂಡು ಹಿಡಿದು ನಿನ್ನ ಕೃಪೆಯಿಂದ ವಶಮಾಡಿಕೊಳ್ಳುವೆನು— ಎಂದು ನುಡಿಯಲು, ಪಾರ್ವತಿಯು ಧೀರಳಾದ ಶಾಂಬರೀ ಮಾಯೆಗೆ ನಿನ್ನ ಕಾರ್ಯವು ದಿಗ್ವಿಜಯವಾಗಲೆಂದು ಹರಿಸಿ ವೀಳೆಯನ್ನು ಕೊಟ್ಟು ಕಳುಹಿದಳು. ಇತ್ತ ಶಾಂಬರೀ ಮಾಯೆಯು ಅಲ್ಲಮನನ್ನು ವಶ ಮಾಡಿಕೊಳ್ಳಬೇಕೆಂದು ಕೈಲಾಸ ಪರ್ವತದಿಂದ ಭೂಲೋಕಕ್ಕೆ ತೆರಳಿದಳು.


ಇತಿ ಪ್ರಥಮಾಧ್ಯಾಯ ಸಂಪೂರ್ಣಂ.

# ೨ ನೆಯ ಅಧ್ಯಾಯ.



## ಮಾಯಾಜನ್ಮ.



ಮೇರುಪರ್ವತದ ದಕ್ಷಿಣ ಭಾಗದಲ್ಲಿ ಕರ್ನಾಟಕ ದೇಶವಿರುತ್ತದೆ. ಅದರೊಳಗೆ ಬೆಳುವಲ ದೇಶದಲ್ಲಿ ಬನವಸಿ ಎಂಬ ಪಟ್ಟಣವಿರುವದು. ಅದು ದೇವನಗರದಂತೆ ಅತಿ ವೈಭವದಿಂದ ಮೆರೆಯುತ್ತಿತ್ತು. ಆ ರಮಣೀಯವಾದ ನಗರದಲ್ಲಿ ಮಮಕಾರನೆಂಬ ಹೆಸರಿನ ಅರಸನೊಬ್ಬನು ಆಳುತ್ತಿದ್ದನು. ಅವನು ಮಹಾಪರಾಕ್ರಮಿಯೂ ಸುಂದರನೂ ಮತ್ತು ಮಹಾಮಾಯೆಗೆ ವಿಲಾಸಸ್ಥಾನನೂ ಆಗಿದ್ದನು. ಆತನು ತನ್ನ ಸೋದರಮಾವನ ಮಗಳಾದ ಮೋಹಿನಿ ಎಂಬಾಕೆಯನ್ನು ಲಗ್ನ ಮಾಡಿಕೊಂಡಿದ್ದನು. ಅವಳು ಸೌಂದರ್ಯದಲ್ಲಿ ರತಿದೇವಿಯಂತೆ ಒಪ್ಪುತ್ತಿದ್ದಳು. ದಂಪತಿಗಳಿರ್ವರು ಸಶಕ್ತರೂ ವಿಷಯಸುಖಲುಬ್ಧರೂ ಇದ್ದು ತಾರುಣ್ಯದಲ್ಲಿ ವಿಷಯದ ಸುಖವನ್ನು ಯಥೇಚ್ಛ ಉಪಭೋಗಿಸುತ್ತಿದ್ದರು. ಹೀಗೆ ಅನೇಕ ವರ್ಷ ಕಳೆದರೂ ಸಹ ಸಂತಾನವಾಗದೆ ಅವರು ದುಃಖಪಡುತ್ತಿದ್ದರು. ಮಕ್ಕಳಿಲ್ಲದವರಿಗೆ ಗತಿಯಿಲ್ಲನೆಂಬ ಶಾಸ್ತ್ರವಚನದಿಂದಂತೂ ಅಧಿಕವಾದ ಮನೋವ್ಯಥೆಯುಳ್ಳವರಾಗಿ ಅನೇಕ ಜ್ಯೋತಿಶ್ಶಾಸ್ತ್ರಜ್ಞರನ್ನೂ ಸಾಮುದ್ರಿಕ ಬಲ್ಲವರನ್ನೂ ಕರಿಸಿ, ಅವರು ಹೇಳಿದಂತೆ ನಡೆದು ಯೋಗ್ಯರಾದವರಿಗೆ ದಾನಧರ್ಮಗಳನ್ನು ಮಾಡುತ್ತಿದ್ದರು. ಬಳಿಕ ದೈವಯೋಗದಿಂದ ಮೋಹಿನಿಯು ಗರ್ಭಿಣಿಯಾಗಿ ನವಮಾಸ ತುಂಬಿ ಒಂದು ಕನ್ಯಾರತ್ನವನ್ನು ಹಡೆದಳು. ಹಿಂದೆ ಹೇಳಿದ ಶಾಂಭವೀಮಾಯೆಯೇ ಅಲ್ಲಮಪ್ರಭುವನ್ನು ವಶಮಾಡಿಕೊಳ್ಳಬೇಕೆಂದು ಮೋಹಿನಿಯ ಗರ್ಭದಲ್ಲಿ ಅವತರಿಸಿದಳು. ಅದರಿಂದ ತಂದೆತಾಯಿಗಳಿಗೆ ಪರಮಾನಂದವುಂಟಾಗಿ ಯೋಗ್ಯರಾದ ಭಿಕ್ಷುಕರಿಗೆ ದಾನಧರ್ಮ ಅನ್ನಪಾನ ಮುಂತಾದವುಗಳನ್ನು ಮಾಡಿಸಿದರು. ಆಸರೆ ಮಾಯಾದೇವಿಯು ಜನ್ಮಕ್ಕೆ ಬಂದಬಳಿಕ ಸರ್ವ

ಸ್ತ್ರೀಪುರುಷ ಜಾತಿಗಳಲ್ಲಿ ವಿಶೇಷ ಕಾಮೋದ್ರೇಕವುಂಟಾಗಹತ್ತಿತು; ಮಾನಮರ್ಯಾದೆಗಳಿಲ್ಲದೆ ನಿರ್ಲಜ್ಜೆಯಿಂದ ಸ್ತ್ರೀಪುರುಷರು ಆಲಿಂಗನ ಮಾಡತೊಡಗಿದರು; ಮೋಕ್ಷಪ್ರಾಪ್ತಿಗಾಗಿ ಯಾರು ತಮ್ಮ ಹೊಲಮನೆಗಳನ್ನು ಬಿಟ್ಟುಕೊಟ್ಟು ಗಿರಿಗಹ್ವರಗಳಲ್ಲಿ ತಪಶ್ಚರ್ಯ ಮಾಡುತ್ತ ನಿರಾಹಾರಿಗಳಾಗಿದ್ದರೋ, ಮತ್ತು ಪಂಚಾಗ್ನಿ ನಡುವೆಯೂ ಚಳಿಗಾಲದಲ್ಲಿ ನೀರಿನ ನಡುವೆಯೂ ನಿಂತು ಕಂದಮೂಲಗಳನ್ನು ಸೇವಿಸುತ್ತ ಮನದಲ್ಲಿ ಪರಮೇಶ್ವರ-ಧ್ಯಾನಪರರಾಗುತ್ತ ದೃಢನಿಶ್ಚಯದಿಂದ ತಪಸ್ಸನ್ನು ಮಾಡುತ್ತಿದ್ದರೋ, ಅಂತಹ ತಪಸ್ವಿಗಳ ಚಿತ್ತವು ಪಲ್ಲಟಿಸಿ ಈಶ್ವರ-ಧ್ಯಾನದಿಂದ ತಪ್ಪಿ ಸಂಸಾರ ಸುಖದ ಕಡೆಗೆ ತಿರುವಲ್ಪಟ್ಟದ್ದರಿಂದ ಸರ್ವರು ಆಶಾಪಾಶದಿಂದ ಕಟ್ಟಲ್ಪಟ್ಟರು. ತಲೆ ನಡುಗುತ್ತಿರುವ ಮುದುಕರು ವೃದ್ಧ ಸ್ತ್ರೀಯರ ಮುಖಾವಲೋಕನ ಮಾತ್ರದಿಂದ ಕಾಮವಿಕಾರವುಳ್ಳವರಾಗುತ್ತಿದ್ದರು. ಸಮಾಧಿಯೋಗ-ಬಲದಿಂದ ಯಾರ ದೇಹವು ಕಟ್ಟಿಗೆಯೋಪಾದಿಯಲ್ಲಿ ಪರಿಣಮಿಸಿತ್ತೋ. ಮತ್ತು ಯೋಗಮೂಲಕ ಯಾರ ಶರೀರದ ಮೇಲೆ ಪಕ್ಷಿಗಳು ತಮ್ಮ ಗೂಡನ್ನು ಕಟ್ಟಿಕೊಂಡಿದ್ದವೋ, ಅಂತಹ ಅಗ್ನಿಯಂತೆ ತೇಜಸ್ವಿಗಳಾದ ಋಷಿಗಳ ಧ್ಯಾನದಲ್ಲಿ ವಿಘ್ನವುಂಟಾಗಿ ಅವರ ಮುಂದೆ ಸ್ತ್ರೀರೂಪವು ನಿಲ್ಲಹತ್ತಿತು.

ಹೀಗಾದ್ದರಿಂದ ಸರ್ವ ಋಷಿಗಳು ನವೀನ ಪ್ರಕಾರದ ಈ ಮನೋವಿಕಾರವನ್ನು ನೋಡಿ ಆಶ್ಚರ್ಯಯುಕ್ತರಾಗಿ, ಇದಾಗಲಿಕ್ಕೆ ಕಾರಣವೇನು? ಇದರ ಪರಿಹಾರದ ಉಪಾಯವ್ಯಾವದು? ಎಂದು ಚಿಂತಾಕ್ರಾಂತರಾಗಿದ್ದ ಸಮಯದಲ್ಲಿ, ಶಿವದೀಕ್ಷಾ ಸಂಪನ್ನನಾದ ಶಿವಾಚಾರ ಪರಾಯಣನಾದ ಮುನಿಶ್ರೇಷ್ಠನಾದ ದುರ್ವಾಸಯತೀಶ್ವರನು ಶಿವಾಜ್ಞೆಯಿಂದ ಅಲ್ಲಿಗೆ ಬಂದನು. ಆತನನ್ನು ಕಂಡಾಕ್ಷಣವೇ ಸರ್ವ ಮುನೀಶ್ವರರು ಆತನ ಚರಣಕಮಲಗಳಿಗೆ ದಂಡ ಪ್ರಣಾಮಗಳನ್ನು ಮಾಡಿ, ತಮಗುಂಟಾದ ಮನೋವಿಕಾರವನ್ನು ವಿಜ್ಞಾಪಿಸಿ ನಾನಾವಿಧವಾಗಿ ಪ್ರಾರ್ಥಿಸಲು, ಮಹಾತೇಜಸ್ವಿಯಾದ ಆ ದುರ್ವಾಸ ಮುನಿಯು ತನ್ನ ಕಯ್ಯಿಂದ ಅವರನ್ನು ಹಿಡಿದೆತ್ತಿ ಅಂಜಬೇಡಿರಿ ಎಂದು ಅವರಿಗೆ ಆಶ್ವಾಸನವನ್ನು ಕೊಟ್ಟು ಪರಮೋಲ್ಲಾಸವದನನಾಗಿ— ಎಲೈ ತಪಸ್ವಿಗಳಿರಾ ನಾನು ಹೇಳುವದನ್ನು ಲಕ್ಷ್ಯವಿಟ್ಟು ಕೇಳಿರಿ. ಯಾವ ಮಾಯಾ ಬಲದಿಂದ ನಿಮ್ಮಲ್ಲಿ ವಿಕಾರವುಂಟಾಗಿದೆಯೋ ಅಂತಹ ಸಾತ್ವಿಕ ರಾಜಸ ತಾಮಸವೆಂಬ ತ್ರಿಗುಣಾತ್ಮಕವಾದ ವೇದಾಂತದಲ್ಲಿ ಹೇಳಲ್ಪಟ್ಟ ಮಾಯೆಯು ಎರಡು ಪ್ರಕಾರದ್ದು ಅದೆ. ಒಂದನೇದ್ದು ಅವಿದ್ಯಾರೂಪವು ಎರಡನೇದ್ದು ಮಾಯಾರೂಪವು. ಇವೆರಡರಲ್ಲಿ ತಮೋಗುಣ ಪ್ರಧಾನವಾದದ್ದೂ ಮಲಿನ ಸ್ವಭಾವವುಳ್ಳದ್ದೂ ಯಾವದೋ ಅದು ಅವಿದ್ಯಾ ಎಂಬದಾಗಿ ಕರೆಯಲ್ಪಡುತ್ತದೆ. ಕನ್ನಡಿ

ಯುಂತೆ ನಿರ್ಮಲವಾದದ್ದೂ ಶುದ್ಧ ಸತ್ವಗುಣ ಪ್ರಧಾನವಾದದ್ದೂ ಯಾವದೋ, ಅದನ್ನು ಮಾಯೆಯೆಂದು ಹೇಳುವರು. ಅವಿದ್ಯೆಯು ಜೀವನಿಗೆ ಉಪಾಧಿಯಾಗಿರುವದು. ಮಾಯೆಯು ಈಶ್ವರನಿಗೆ ಉಪಾಧಿಯಾಗಿದೆ. ಈ ಮಾಯೆಯು ವಿಚಿತ್ರವಾದದ್ದೂ ಬಲವುಳ್ಳದ್ದೂ ಅನೇಕ ಅಂಕುರಗಳಿಂದ ಯುಕ್ತವಾದದ್ದೂ ಅದೆ. ಎಲೈ ಬ್ರಾಹ್ಮಣರುಗಳಿರಾ, ಈ ಮಾಯೆಯು ಅಗಾಧವಾಗಿದ್ದರೂ ಯಾರು ಈಶ್ವರನ ಅವತಾರಿಗಳೋ ಅವರು ಮಾತ್ರ ಅದನ್ನು ವಶಮಾಡಿಕೊಂಡು ಸ್ವಚ್ಛಂದ ರೀತಿಯಿಂದ ವರ್ತಿಸುತ್ತಿರುವರು. ಪ್ರಭುವು ನಿರಂಜನ ಮೂರ್ತಿಯಾಗಿದ್ದು ಸರ್ವಜಗತ್ತಿಗೂ ಗುರುವಾದ ಕಾರಣ ಆತನು ಮಾಯೆಗೆ ಎಂದೂ ವಶನಾಗುವದಿಲ್ಲ. ಬ್ರಹ್ಮವಿಷ್ಣ್ವಾದಿ ದೇವತೆಗಳು ಒಮ್ಮೊಮ್ಮೆ ಮಾಯಾ ಪಾಶಕ್ಕೆ ಒಳಗಾಗಿ ಮೋಸಹೊಂದುವರು ಆದಾಗ್ಯೂ ಅವರು ಪ್ರಭು ಕೃಪೆಯಿಂದ ಯಥಾರ್ಥ ಸ್ವರೂಪವನ್ನು ತಿಳಿಯುವರು. ಯಾರು ಬಹಿರಂಗದಲ್ಲಿ ತಾವು ಮಾಯೆಯನ್ನು ಸೋಲಿಸಿದ್ದೇವೆಂಬದಾಗಿ ಬಾಯಿಂದ ಮಾತಾಡುತ್ತಾರೋ, ಅವರನ್ನೇ ಮಾಯೆಯು ವಶಮಾಡಿಕೊಂಡಿರುವದೆಂದು ತಿಳಿಯಬೇಕು. ಆದ್ದರಿಂದ ಜ್ಞಾನಿಗಳು ಮಾಯೆಯನ್ನು ಗೆಲ್ಲುವ ವಿಷಯದಲ್ಲಿ ಜಾಗ್ರತರಾಗಿರಬೇಕು; ಅವರು ಎಂದೂ ಉದಾಸೀನರಾಗಕೂಡದು. ಜೀವನಿಗೆ ಪಶುವೆಂದೂ, ಶಿವನಿಗೆ ಪಶುಪತಿಯೆಂದೂ ಹೇಳಲ್ಪಟ್ಟದೆ, ಅಂದರೆ ಪಾಶಬದ್ಧನೇ ಜೀವನು; ಪಾಶಮುಕ್ತನೇ ಶಿವನು. ಗುರು ಕೃಪೆಯಿಂದ ಪ್ರಾಪ್ತವಾದ " ಪಶುಪಾಶವಿಮೋಚನೀ " ಎಂಬ ಶಿವದೀಕ್ಷೆಯಿಂದ ಅನುಗ್ರಹಿಸಲ್ಪಟ್ಟ ಜೀವನು ಶಿವಪದಕ್ಕೆ ಸಲ್ಲುವನು. ವಿದ್ಯೆಯೂ ಶ್ರೇಷ್ಠವಂಶವೂ ಮಾತ್ರ ಶಿವದೀಕ್ಷೆಗೆ ಕಾರಣೀಭೂತವಾಗುವದಿಲ್ಲ. ಆದಕ್ಕೆ ಗುರು ಕೃಪೆಯು ಅವಶ್ಯವಾಗಿಬೇಕು. ಕಷ್ಟದಿಂದಲೂ ಸಹ ಗೆಲ್ಲಲಸಾಧ್ಯವಾದ, ಸರ್ವ ಪ್ರಾಣಿಗಳನ್ನು ಮುರಿದು ಬಿಡುವ ಮತ್ತು ಯಾವದರ ಮುಖ್ಯ ವಿಷಯವು ಕಾಮತಂತ್ರವಾಗಿದೆಯೋ ಅಂಥ ಬಲವುಳ್ಳ ತಾಮಸೀ ಮಾಯೆಯು ಈ ಮಮಕಾರ ರಾಜನ ಮಗಳಾಗಿ ಒಂದು ನಿಮಿತ್ತದಿಂದ ಜನಿಸಿರುವಳು. ಯಕ್ಷಕಿನ್ನರ ಗರುಡಗಂಧರ್ವ ಸಿದ್ಧವಿದ್ಯಾಧರ ದೇವ ದಾನವ ಮಾನವ ಮುಂತಾದವರನ್ನೂ ದೊಡ್ಡ ದೊಡ್ಡ ಮುನೀಶ್ವರನೂ ಮಾಯೆಯು ತನ್ನ ನೇತ್ರವಿಕ್ಷೇಪಣಮಾತ್ರದಿಂದ ಬಿಗಿದು ಕಟ್ಟಿ ಲೀಲಾಮಾತ್ರದಿಂದ ಅವರನ್ನು ತನ್ನ ದಾಸರಾಗಿ ಮಾಡುವಳು.

ಮಾಯೆಯು ಶುದ್ಧ ವೇಶ್ಯಾ ಸ್ತ್ರೀಯಳಿದ್ದು ಅವಿಚಾರದ ಮೂಲಕ ಹುಟ್ಟುವಳು. ಅವಳಿಂದ ನಾನಾತರದ ಕೆಟ್ಟ ಕೆಟ್ಟ ವಿಚಾರಗಳು ಮನಸ್ಸಿನಲ್ಲಿ ಉತ್ಪನ್ನವಾಗುವವು. ಈ ಮಾಯೆಯಿಂದ ಮನುಷ್ಯನ ಸ್ಥಿತಿಯು ಯಾವ ಕಾಲಕ್ಕೆ ಏನಾದೀತು, ಏನಾಗಲಿಕ್ಕಿಲ್ಲೆಂಬ ನಿಯಮವಿಲ್ಲ; ಒಮ್ಮೊಮ್ಮೆ ಇವಳು ತಾಯಿ, ಇವಳು ಮಗಳು,

ಇವಳು ಸಹೋದರಿ, ಇವಳು ಸೊಸೆ, ಇವಳು ಹೆಂಡತಿ ಎಂಬ ತಿಳುವಳಿಕೆಯು ಸಹ ತಪ್ಪಿ ಮೋಹಜಾಲದಲ್ಲಿ ಬೀಳುವನು. ಎಲೈ ತಾಪಸೋತ್ತಮರೆ, ಇಂತಹ ಕಪಟ ವರ್ತನದ ಮಾಯೆಯನ್ನು ಗೆಲ್ಲಲಿಕ್ಕೆ ನಿಜವಾದ ಒಂದು ಉಪಾಯವನ್ನು ತಿಳಿಸುವೆನು. ಸಾವಧಾನದಿಂದ ಕೇಳಿರಿ. ನಿರಂಜನ ಮೂರ್ತಿಯಾದ ಮಹಾದೇವನು, ಗುರುವಿಗೂ ಗುರುವಾಗಿರುವನು. ಅತನು ಸರ್ವಜ್ಞನೂ ಸರ್ವಸಾಕ್ಷೀಭೂತನೂ ಆಗಿ ಅಲ್ಲಮಪ್ರಭುವೆಂಬ ಹೆಸರಿನಿಂದ ಮಾನವ ಶರೀರವನ್ನು ಧರಿಸಿ ಲೋಕ ರಕ್ಷಣಾರ್ಥವಾಗಿ ಪೃಥ್ವಿಯ ಮೇಲೆ ಸಂಚರಿಸುತ್ತಾನೆ. ಇಂಥ ಅಲ್ಲಮಪ್ರಭುವನ್ನು ನೀವು ಮನಸ್ಸಿನಲ್ಲಿ ಸ್ಮರಿಸಲು, ಆತನು ನಿಮಗುಂಟಾದ ಮಾಯಾಪಾಶವನ್ನು ಹರಿದು, ಶಿವಭಕ್ತಿಯನ್ನು ನಿಮ್ಮ ಮನಸ್ಸಿನಲ್ಲಿ ಬಿತ್ತಿ, ನಿಮ್ಮನ್ನು ಶಿವಜ್ಞಾನಕ್ಕೆ ಯೋಗ್ಯರಾಗುವಂತೆ ಮಾಡುವನು. ಆದ್ದರಿಂದ ಯಾವಾಗಲೂ ವಿಶ್ವವ್ಯಾಪಕನಾದ ಅಲ್ಲಮಪ್ರಭುವಿನ ನಾಮವನ್ನು ಸ್ಮರಿಸುತ್ತ ಆತನನ್ನು ಭಕ್ತಿಪೂರ್ವಕವಾಗಿ ಪೂಜಿಸಲು ಅವನು ನಿಮಗೆ ಪ್ರಸನ್ನನಾಗಿ ನಿಮ್ಮ ಮಾಯೆಯನ್ನು ನಿರ್ಮೂಲವಾಗಿ ಸುಟ್ಟು ಬಿಡುವನು ಎಂದು ಆ ದುರ್ವಾಸ ಮುನಿಶ್ರೇಷ್ಠನು ಏಕಾಂತದಲ್ಲಿ ಅವರಿಗೆ ಉಪದೇಶಮಾಡಿ, ತಾನು ಮೇರುಪರ್ವತ ಮಾರ್ಗವಾಗಿ ನಡೆದನು. ಅವನ ಉಪದೇಶದಂತೆ ಆ ಮುನಿ ನಿಕರವು ನಡೆದುಕೊಳ್ಳುತ್ತಿರಲು ಅವರ ಮಾಯಾ ವಿಕಾರವೆಲ್ಲ ನಾಶವಾಗಿ ಪುನಃ ಅವರು ನಿಶ್ಚಲತೆಯನ್ನು ಹೊಂದಿ, ಸ್ವಸ್ಥ ಮನಸ್ಕರಾಗಿದ್ದರು.

ಇತ್ತ ಮಮಕಾರ ರಾಜನೂ ಮೋಹಿನೀ ರಾಣಿಯೂ ತಮ್ಮ ಮಗಳ ಸೌಂದರ್ಯಾತಿಶಯವನ್ನು ನೋಡಿ ಆನಂದ ಪರವಶರಾಗಿ ಅವಳನ್ನು ಬಳ್ಳೆ ಪ್ರೇಮದಿಂದ ಜೋಪಾನ ಮಾಡುತ್ತಿದ್ದರು. ಅವಳ ಬಾಲಲೀಲೆಗಳಿಗೆ ಮೋಹಿತರಾಗಿ ಅವಳನ್ನು ಅಗಲಿರುತ್ತಿದ್ದಿಲ್ಲ. ಮಗಳನ್ನು ಉತ್ತಮೋತ್ತಮ ವಸ್ತ್ರಾಲಂಕಾರಗಳಿಂದ ಸುಶೋಭಿತಳಾಗುವಂತೆ ಸಿಂಗರಿಸುತ್ತಿದ್ದರು. ಈ ರೀತಿಯಿಂದ ಮಾಯೆಯು ಬಾಲ್ಯಾವಸ್ಥೆಯನ್ನು ದಾಟ ಕೌಮಾರ್ಯಾವಸ್ಥೆಗೆ ಬರಲು ತನ್ನ ನಡಿಗೆಯಿಂದ ಹಂಸಪಕ್ಷಿಗಳನ್ನೂ ಆನೆಯನ್ನೂ ಸೋಲಿಸಿದಳು. ಕೋಕಿಲೆಯಂತೆ ಅವಳ ಕಂಠವು ಮಂಜುಳವೂ ಗಿಳಿಯಂತೆ ಅವಳ ಶಬ್ದಗಳು ಮಧುರವೂ ಆಗಿದ್ದವು- ಕ್ರಮೇಣ ಅವಳ ಹಾವಭಾವ ವಿಲಾಸವಿಭ್ರಮ--ಭೃಕುಟವಿಕ್ಷೇಪಣ ಮೊದಲಾದವುಗಳು ಜನರನ್ನು ಮೋಹಪಾಶದಲ್ಲಿ ಬೀಳುವಂತೆ ಮಾಡುತ್ತಿದ್ದವು. ಈ ಹಾವಭಾವಗಳಿಂದ ಅವಳ ಮನೋಗತವಾದ ಅಭಿಪ್ರಾಯಗಳನ್ನೂ ಮಿಶ್ರಭಾವಗಳನ್ನೂ ನೋಡುತ್ತಿರುವ ಜನರು ಮೂರ್ಖರಿರಲಿ ನಪುಂಸಕರಿರಲಿ ಅರಸಿಕರಿರಲಿ ಅಥವಾ ಮುನಿಗಳಿರಲಿ ಇವರೆಲ್ಲರೂ ನಿಮಿಷಮಾತ್ರ ಅವಳ ದರ್ಶನ ಮಾಡಿದಲ್ಲಿ ಮೋಹಿತರಾಗುತ್ತಿದರು. ಅಂದಮೇಲೆ ಶೃಂಗಾರರಸದಲ್ಲಿ ಪ್ರವೀಣರಾದ ಯುವಕರು ಮರುಳಾಗುವದೇನಾ

ಶ್ವರ್ಯ? ತ್ರೈಲೋಕ್ಯಸುಂದರಿಯಾದ ತಮ್ಮ ಮಗಳ ಉದಯದಿಂದ ತಾಯಿತಂದೆಗಳು ತಾವು ಕೃತಾರ್ಥರಾದೆವೆಂದು ನಂಬಿಕೊಂಡಿದ್ದರು. ಅವಳು ಇರುವದಕ್ಕಾಗಿ ಒಂದು ಅರಮನೆಯನ್ನೂ ಒಂದು ಕ್ರೀಡಾಮಂಟಪವನ್ನೂ ಕಟ್ಟಿಸಿದರು. ಸೇವೆಗಾಗಿ ಅನೇಕ ಜನ ದಾಸದಾಸಿಯರನ್ನು ನಿಯಮಿಸಿದರು. ಸಕಲ ವಿದ್ಯೆಗಳಲ್ಲಿಯೂ ಭಾಷೆಗಳಲ್ಲಿಯೂ ನಿಪುಣರಾದ ಅಧ್ಯಾಪಕರಿಂದ ಸಂಗೀತ, ನಾಟ್ಯ, ವೀಣಾ, ವಾದನ, ಕಾವ್ಯ, ವ್ಯಾಕರಣ, ನ್ಯಾಯ ಮುಂತಾದ ಕಲೆಗಳಲ್ಲಿಯೂ ಸಂಸ್ಕೃತ, ಕನ್ನಡ, ತಮಿಳು, ಅರವು ಮುಂತಾದ ಹಲವು ಭಾಷೆಗಳಲ್ಲಿಯೂ ಅವಳು ಪ್ರವೀಣಳಾಗುವಂತೆ ಮಾಡಿಸಿದರು. ಬಳಿಕ ಅವಳು ವಿವಾಹಕ್ಕೆ ಪ್ರಾಪ್ತವಯಸ್ಕಳಾಗಲು ಮಮಕಾರ ರಾಜನು ಮಗಳ ಲಗ್ನ ಮಾಡಬೇಕೆಂದು ಕುಲ ಶೀಲ ಕಲಾ ವಯ ಸೌಂದರ್ಯ ಸದ್ಗುಣಗಳಿಂದ ಮಾಯೆಗೆ ಯೋಗ್ಯನಾದ ವರನನ್ನು ಶೋಧ ಮಾಡತೊಡಗಿದನು. ಆದರೆ ತತ್ಕಾಲಕ್ಕೆ ತಕ್ಕ ವರನು ದೊರೆಯದ್ದರಿಂದ ಅರಸನು ಚಿಂತೆಗೊಳಗಾದನು. ಆ ಸಮಯದಲ್ಲಿ ಅಹಂಕಾರನೆಂಬ ಆತನ ಗುರುವರ್ಯನು ಅಕಸ್ಮಾತ್ತಾಗಿ ಅರಸನೆಡೆಗೆ ಬರಲು, ಆತನಿಗೆ ಯಥಾವಿಧಿ ಪೂಜೋಪಚಾರಗಳನ್ನು ಮಾಡಿ, ತನ್ನ ಮಗಳ ಸೌಂದರ್ಯವನ್ನು ಕೊಂಡಾಡಿ, ಕಡೆಗೆ ಅರಸನು—ಗುರುವೆ, ನನ್ನ ಮಗಳಿಗೆ ಸದೃಶನಾದ ಪತಿಯು ಎಷ್ಟು ಪ್ರಯತ್ನಪಟ್ಟರೂ ಈ ವರೆಗೂ ದೊರೆಯಲಿಲ್ಲ. ಈ ಬಗ್ಗೆ ನಾನು ಹಗಲಿರಳು ಚಿಂತೆಮಾಡುತ್ತೇನೆ. ಈ ವಿಷಯದಲ್ಲಿ ತಾವು ಏನು ಅಪ್ಪಣೆ ಕೊಡಿಸುವಿರಿ?

ಗುರು—ರಾಜನೆ, ಕೋಗಿಲೆಗೆ ಮಾವು, ಭ್ರಮರಿಗೆ ಪುಷ್ಪವು, ಹಂಸಿಗೆ ಕಮಲವು ಯೋಗ್ಯವಾಗಿರುವಂತೆ ನಿನ್ನ ಮಗಳಿಗೆ ಪರಮೇಶ್ವರನೇ ಪತಿಯಾಗಲು ಯೋಗ್ಯನು.

ರಾಜ—ಗುರುವೆ ವೇದಕ್ಕೂ ವೇದಾಂತಕ್ಕೂ ಸಿಲುಕದ ಶಿವನೆಲ್ಲಿ! ನನ್ನಂಥ ಕ್ಷುದ್ರ ಮನುಷ್ಯನೆಲ್ಲಿ! ಆತನ ದರ್ಶನವಾಗುವದೇ ನಮಗೆ ದುರ್ಲಭವಿರುವಲ್ಲಿ ಆತನು ನನ್ನ ಮಗಳಿಗೆ ಪತಿಯಾಗಬೇಕೆಂಬ ಮಾತೆಲ್ಲಿಯದು? ಆದ್ದರಿಂದ ತಾವು ಅಪ್ಪಣೆ ಕೊಡಿಸಿದ್ದು ದುಸ್ಸಾಧ್ಯವೆಂದು ನನಗೆ ತೋರುತ್ತದೆ.

ಗುರು—ರಾಜನೆ, ನೀನು ಹೇಳವದೆಲ್ಲ ನಿಜವು. ಆದರೆ ವೇದಾಂತದ ತಾತ್ಪರ್ಯವೇನಂದರೆ—ಜಾತಿಯಿಂದ ಚಾಂಡಾಲನಾಗಿದ್ದರೂ ಶಿವನಲ್ಲಿ ದೃಢಭಕ್ತಿಯನ್ನಿಟ್ಟರೆ, ಸರ್ವಾಂತರ್ಯಾಮಿಯಾದ ಆ ಪರಮಾತ್ಮನು ಅವನ ಮೇಲೆ ಕೃಪೆಮಾಡುವನು. ಆದ್ದರಿಂದ ಭಕ್ತಿಪೂರ್ವಕವಾಗಿ ನೀನು ಶಂಕರನನ್ನು ಆರಾಧಿಸು. ನಾಗಭೂಷಣನೂ ಭಕ್ತ ಪೋಷಣನೂ ಆದ ಪರಶಿವನು ನಿನಗೆ ಪ್ರಸನ್ನನಾಗುವನು. , ಇದರಲ್ಲಿ ಏನೂ ಸಂದೇಹವಿಲ್ಲ.

ಹೀಗೆ ರಾಜನಿಗೆ ಹೇಳಿ, ಅವನಿಗೆ ಅಶ್ವಾಸನವನ್ನು ಕೊಟ್ಟು ಅವನ ಸಮ್ಮತಿ ಯಿಂದ ಅವನ ಮಗಳ ರತ್ನಮಂದಿರವನ್ನು ಪ್ರವೇಶ ಮಾಡಿದನು. ಅಲ್ಲಿ ಅವಳಿಗೆ ಶಿವ ಧರ್ಮವನ್ನೂ ಶಿವಪೂಜಾ ವಿಧಿಯನ್ನೂ ಮತ್ತು ಶಿವಭಕ್ತಿಯ ಫಲವನ್ನೂ ಹೇಳಿದ್ದಲ್ಲದೆ ಶಿವನು, ಶಿವಭಕ್ತಿಯನ್ನು ಮನಮುಟ್ಟಿ ಮಾಡುವವರಿಗೆ ಅವರ ಇಷ್ಟಾರ್ಥಗಳನ್ನು ಸಲ್ಲಿಸುವದು ಸತ್ಯವೆಂದೂ ಶಿವಪೂಜೆಯಿಂದಲೇ ಇಚ್ಛಿತ ಪ್ರಾಪ್ತಿಯಾಗುವದೆಂದೂ ಹೇಳಿ ಅವಳಿಗೆ ಮಧುಕೇಶ್ವರ ಲಿಂಗವನ್ನು ಇಷ್ಟಸಿದ್ಧಿಗಾಗಿ ಆರಾಧನೆ ಮಾಡ ಹೇಳಿದನು.

ಅವಳಾದರೂ ಗುರುವಿನ ಅಪ್ಪಣೆಯಂತೆ ತನಗೆ ಶಿವನೇ ಪತಿಯಾಗಬೇಕೆಂದು ಸರ್ವರ ಹೃದಯ ಕಮಲದಲ್ಲಿರುವ ದೇವಾಧಿದೇವನಾದ ಮಹಾದೇವನನ್ನು ಭಜಿಸುವದರಲ್ಲಿ ತತ್ಪರಳಾದಳು.



# ೩ನೆಯ ಅಧ್ಯಾಯ.




## ಮಾಯೆಗೆ ಒಳಗಾಗದಿರುವಿಕೆ.




ಹಂಕಾರ ಗುರುವು ಪತಿಪ್ರಾಪ್ತಿಗಾಗಿ ಮಧುಕೇಶ್ವರ ಲಿಂಗವನ್ನು ಪೂಜಿಸಬೇಕೆಂದು ಮಾಯೆಗೆ ಹೇಳಿ ಹೋದನಂತರ ಅವಳು ಧೃಢನಿಶ್ಚಯದಿಂದ ಶಿವಪೂಜೆಯನ್ನು ಮಾಡಹತ್ತಿದಳು. ಇತ್ತ ಅದೇ ಸಮಯದಲ್ಲಿ ಸರ್ವಾನುಗ್ರಾಹಕನೂ, ಸಚ್ಚಿದಾನಂದ ಸ್ವರೂಪನೂ, ಮಹಿಮಾ ಸಮುದ್ರನೂ ಆದ ಅಲ್ಲಮಪ್ರಭುವು ಮಾಯೆಯ ಉದ್ಧತ ಮಾರ್ಗವನ್ನು ನಿವಾರಣೆ ಮಾಡಬೇಕೆಂದು, ತಾನು ಸ್ವತಃ ನಿರ್ಗುಣನೂ ನಿರಾಕಾರನೂ ಇದ್ದಾಗ್ಗೂ ಮಾಯೆಯು ಉಪಾಸನೆ ಮಾಡುತ್ತಿದ್ದ ಮೂರ್ತಿಯೇ ಸಾಕಾರ ರೂಪವನ್ನು ಧರಿಸಿ ಬಂದಿರುವದೋ ಏನೋ ಎಂಬಂತೆ ಬನವಶೀ ಪಟ್ಟಣವನ್ನು ಪ್ರವೇಶಮಾಡಿದನು. ಅತನು ಶೃಂಗಾರ ರಸದ ಮೂರ್ತಿಯಾಗಿದ್ದು ಸೌಂದರ್ಯದಲ್ಲಿ ಮನ್ಮಥನನ್ನು ಸಹ ನಾಚಿಸುತ್ತಿದ್ದನು. ಹದಿನಾರು ವರುಷ ಪ್ರಾಯವುಳ್ಳಾತನಾಗಿ ತನ್ನನ್ನು ನೋಡಿದ ಸ್ತ್ರೀಸಮೂಹವನ್ನು ಮೋಹಿತರಾಗುವಂತೆ ಮಾಡುವ ಉತ್ತಮ ವೇಷದೊಡನೆ ಭೂಷಿತನಾಗಿದ್ದನು. ಆತನ ಪಾದನಖಕಾಂತಿ ಬಿದ್ದ ಸ್ಥಳವು ಪದ್ಮರಾಗ ಮಣಿಯಿಂದ ಕೂಡ್ರಿಸಲ್ಪಟ್ಟಿರುವದೋ ಏನೋ ಎಂಬಂತೆ ಶೋಭಿಸುತ್ತಿತ್ತು. ಆತನ ದರ್ಶನದಿಂದ ಬನವಸೀ ನಗರ ವಾಸಿಗಳು ಪರಮಾಹ್ಲಾದಭರಿತರಾದರು. ಆತನು ಆ ನಗರ ಮಧ್ಯದಲ್ಲಿರುವ ಮಧುಕೇಶ್ವರ ಶಿವಾಲಯಕ್ಕೆ ಬಂದು ಅಲ್ಲಿದ್ದ ಒಂದು ಅತಿಶಯ ಜಡವಾದ ಮತ್ತು ಹಿಂದೆಯಾರಿಂದಲೂ ಬಾರಿಸದೆ ಇದ್ದ ಪುರಾತನ ಮೃದಂಗವನ್ನು ಅರಳಿಯ ಚಂಡನ್ನೆತ್ತುವಂತೆ ಹಿಡಿದೆತ್ತಿ ತೊಡೆಯ ಮೇಲಿರಿಸಿ, ಅದನ್ನು ವ್ಯವಸ್ಥಿತಗೊಳಿಸಿ ತಾಳಕ್ಕೂ ರಾಗಕ್ಕೂ, ಪ್ರಾಮಾಣಕ್ಕೂ ಅನುಸರಿಸಿ ಬಾರಿಸಲಾಗಿ, ಸಾಕ್ಷಾತ್ ನಂದಿಕೇಶ್ವರನು ಬಾರಿಸುತ್ತಾನೋ ಏನೋ ಎಂಬಂತೆ ಜನರಿಗೆ ಭಾಸವಾಯಿತು. ಬಾರಿಸುವದರಲ್ಲಿ ಆತನ ಜಾಣತನವನ್ನು ನೋಡಿ ಸರ್ವರೂ ಆತನನ್ನು ಕೊಂಡಾಡಹತ್ತಿದರು.

ಮಧುಕೇಶ್ವರದೇವಾಲಯದಲ್ಲಿ ಶಿವಧ್ಯಾನ ಪರಳಾದ ಮಾಯೆಯು ಈ ಸಂಗತಿಯನ್ನು ಕೇಳಿ ಶಿವಧ್ಯಾನವನ್ನು ಬಿಟ್ಟು ತನ್ನ ಸಖಿಯರನ್ನು ಕರೆದು "ಸಖಿಯರೇ, ಮೇಘದ ಶಬ್ದವನ್ನು ಕೇಳಿ ನವಿಲು ಸಂತೋಷದಿಂದ ನರ್ತನ ಮಾಡುವಂತೆ ಈ

ಮಂಜುಳರವವನ್ನು ಕೇಳಿ ನಾನೂ ನರ್ತನ ಮಾಡಲಿಚ್ಛಿಸುತ್ತೇನೆ. ಕಾರಣ ನೀವು ಹೋಗಿ ಇದರ ಪೂರ್ವಾಪರ ಸಂಗತಿಯನ್ನು ತಿಳಿದುಕೊಂಡು ಬರಬೇಕು" ಎಂದು ಹೇಳಿ ಸಖಿಯರನ್ನು ಬೇಗನೆ ಕಳಿಸಿದಳು. ಅವರು ಬಂದು ಅಲ್ಲಮನ ಸೌಂದರ್ಯಾತಿಶಯವನ್ನು ನೋಡಿ ಚಕಿತರಾಗಿ ತಮ್ಮ ಮಿತ್ರಳೆಡೆಗೆ ಬಂದು "ಪ್ರಿಯಸಖಿ, ನಿನ್ನ ಶಿವಪೂಜೆಯು ಇಂದು ಸಫಲವಾಯಿತು" ಎಂದು ಅಲ್ಲಮಪ್ರಭುವಿನ ಸೌಂದರ್ಯ, ಚಾತುರ್ಯ, ಸೌಜನ್ಯ, ಸೌಶೀಲ್ಯ, ವಯಸ್ಸು, ಸೊಬಗು ಮುಂತಾದವುಗಳನ್ನು ಸವಿಸ್ತರವಾಗಿ ಬಣ್ಣಿಸಲು ಮಾಯೆಗೂ ಸಹ ಅವನನ್ನು ನೋಡಬೇಕೆಂಬ ಉತ್ಸುಕತೆಯುಂಟಾಗಿ ಅವಳು ತನ್ನ ಸಖಿಯರೊಂದಿಗೆ ಬಂದು ಅಲ್ಲಮನ ಸುಂದರ ಕಾಂತಿಯನ್ನು ನೋಡಿ ಮೋಹಿತಳಾದಳು. ಹಾಗೂ ಮಾಯೆಯು ತನ್ನ ಪ್ರಿಯ ಸಖಿಯಳ ಮುಖವನ್ನು ದಿಟ್ಟಿಸಿ ನೋಡಲು, ಸಖಿಯು ಅವಳ ಮನೋಗತವನ್ನು ಊಹಿಸಿ ಅಲ್ಲಮನಿಗೆ ನೀವು ಯಾರು? ಎಲ್ಲಿಂದ ಬಂದಿರಿ? ಎಂದು ಕೇಳಿದಳು. ಆಗ ಆತನು ಹಸನ್ಮುಖದಿಂದ "ಎಲೌ ಸ್ತ್ರೀಯಳೇ, ನಾನು ಸರ್ವ ದೇಶಗಳಲ್ಲಿಯೂ ಸಂಚರಿಸುತ್ತಲಿರುತ್ತೇನೆ. ಆದಕಾರಣ ನಾನಿರುವ ಸ್ಥಳವು ಇಂಥಾದ್ದೇ ಎಂದು ನಿರ್ದಿಷ್ಟಮಾಡಿ ಹೇಳಲಾಗುವದಿಲ್ಲ. ನನ್ನಲ್ಲಿ ಅಲ್ಪ ಸ್ವಲ್ಪ ವಿದ್ಯೆಯೂ ಸಾಮರ್ಥ್ಯವೂ ಇರುವದಲ್ಲದೆ ಕೆಲವು ಅಲೌಕಿಕ ಗುಣಗಳಿರುವವು. ಆದ್ದರಿಂದ ನಾನು ಹೋದತ್ತ ಜನರು ನನ್ನನ್ನು ಮನ್ನಿಸುತ್ತಾರೆ. ಯಾವನಾದರೊಬ್ಬನು ನನ್ನೊಡನೆ ವಾದಪ್ರಸಂಗವೆಸಗಿದಲ್ಲಿ ಆತನನ್ನು ನಾನು ಸೋಲಿಸಿದನಂತರ ನನಗೆ "ಅಲಂಮಾ" ಅಂದರೆ ಸಾಕು, ಇನ್ನೇನು ಹೇಳುವದು ಬೇಡ ಎಂಬರ್ಥದ ಶಬ್ದಗಳನ್ನು ಆತನು ಉಚ್ಚರಿಸುವದರಿಂದ, ನನಗೆ ಪ್ರಾಕೃತ ಜನರಿಂದ ವಾಡಿಕೆಯಾಗಿ ಅಲ್ಲಮನೆಂಬ ಹೆಸರು ಬಂದಿದೆ. ಮತ್ತು ಅಲ್ಲಮ ಶಬ್ದವು ಶಿವವಾಚಕವೆಂದು ಸಾಧುಗಳ ಅಭಿಪ್ರಾಯವದೆ. ನಾನೊಬ್ಬನೇ ಜಗತ್ತಿನಲ್ಲಿ ಸಂಚರಿಸುತ್ತೇನೆ ನನಗೆ ಭಯವಿಲ್ಲ. ಅಭಿಮಾನವಂತೂ ಇಲ್ಲೇ ಇಲ್ಲ. ನನಗೆ ಸಂತೋಷಕರವಲ್ಲದ ಸ್ಥಾನವನ್ನು ಬಿಟ್ಟು ತೆರಳುತ್ತೇನೆ. ಸ್ತ್ರೀಯಳೆ, ನನ್ನ ವೃತ್ತಾಂತವು ಈ ರೀತಿಯಾಗಿರುವದು" ಎಂದು ಹೇಳಲು, ಸಖಿಯು ಮಾಯೆಯ ವರ್ಣನೆಯನ್ನು ಆ ಮೂಲಾಗ್ರವಾಗಿ ಮಾಡಿ ಅವಳ ರೂಪಲಾವಣ್ಯದ ವಿಷಯವಾಗಿಯೂ ವಿದ್ಯಾಸಂಪನ್ನತೆಯ ವಿಷಯವಾಗಿಯೂ ಅವಳ ಪ್ರಶಂಸೆಯನ್ನು ಅಧಿಕವಾಗಿ ಮಾಡಿ "ಎಲೈ ಅಲ್ಲಮನೆ, ರಾಜಕನ್ನಿಕೆಯಾದ ಮಾಯೆಯು ನಿನ್ನಂಥ ಗುಣವಂತನೊಡನೆ ನಿಷ್ಕಪಟದಿಂದ ವರ್ತಿಸುವಳು; ಈ ಸುಂದರಿಯನ್ನು ಆಶ್ರಯಿಸಲು ಬಂಗಾರಕ್ಕೆ ಕುಂದನವನ್ನಿಟ್ಟಂತೆ ನೀನು ಅಧಿಕವಾಗಿ ಶೋಭಿಸುವಿ: ನಿನಗೆ ಬೇಕಾದ ಪದಾರ್ಥಗಳನ್ನು ಅವಳು ಒದಗಿಸಿ ಕೊಡುವಳು; ಆದ್ದರಿಂದ ಈ ಕನ್ಯಾಮಣಿಯನ್ನು ಹೊಂದಿ ವಿಲಾಸಕ್ಕೆ ಮಂದಿರವಾದ ನಿನ್ನ ತಾರುಣ್ಯವನ್ನು ಸಾರ್ಥಕಮಾಡಿಕೋ" ಎಂದು ಹೇಳಲು ಅಲ್ಲಮನು ಏನೊಂದೂ ಉತ್ತರ ಕೊಡದೆ ಸುಮ್ಮನಿದ್ದನು.

ಅಷ್ಟರಲ್ಲಿ ಸಖಿಯರಲ್ಲೊಬ್ಬಳು ರಾಜನ ಕಡೆಗೆ ಹೋಗಿ, ಅಲ್ಲಮನ ಗುಣ ಪ್ರಶಂಸೆಯನ್ನು ಮಾಡಿ, ಸ್ತ್ರೀಯರ ನಾಟ್ಯ ಶಾಲೆಯ ಅಧ್ಯಾಪಕ ಸ್ಥಾನವನ್ನು ಆತನಿಗೆ ಕೊಡುವಂತೆ ಮಾಡಿಸಿ, ಇರುವದಕ್ಕಾಗಿ ಒಂದು ಮನೆಯನ್ನೂ ಕೊಡಿಸಿದಳು. ಈ ನರ್ತನ ಶಾಲೆಗೆ ದಿನಾಲು ಮಾಯೆಯು ಹೋಗಿ ನಾಟ್ಯವನ್ನು ಕಲಿಸುತ್ತಿದ್ದಳು, ಅಲ್ಲಮನ ಮೇಲೆ ಅವಳ ಮನಸ್ಸು ಕೂತದ್ದರಿಂದ ಉಶ್ಶ್ವಾಸ ಬಿಡಹತ್ತಿ ವಿರಹ ವ್ಯಥೆಯನ್ನು ತೋರಿಸಹತ್ತಿದಳು. ಮನಥ್ಮನ ಬಾಣಗಳಿಗೆ ಸೈರಿಸದ್ದರಿಂದ ಅವಳ ಧೈರ್ಯವೆಲ್ಲ ನಷ್ಟವಾಯಿತು. ಹಾಗೂ ಅಲ್ಲಮನಿಂದ ಅಗಲಿರಲು ಅವಳ ಮನಸ್ಸಿಗೆ ಬರುತ್ತಿರಲಿಲ್ಲ. ಆತನು ಕಣ್ಣುಮರೆಯಾದ ಕೂಡಲೆ ತನ್ನ ಹತ್ತರಿರುವ ಸಖಿಯರನ್ನು ಕರೆದು ಅಲ್ಲಮನು ಎಲ್ಲಿರುವನು? ಆತನ ದರ್ಶನವು ಯಾವಾಗ್ಗೆ ಆದೀತೆಂಬದಾಗಿ ಮೇಲಿಂದ ಮೇಲೆ ಕೇಳುತ್ತಿದ್ದಳು. ಮಾಯೆಯ ಅವಸ್ಥೆಯನ್ನು ನೋಡಿ ಸಖಿಯರು, ಅವಳು ಅಲ್ಲಮನಲ್ಲಿ ಅನುರಕ್ತಳಾಗಿರುವದು ನಿಶ್ಚಯವೆಂದು ಭಾವಿಸಿದರು. ಆದರೂ ಮಾಯೆಯು ತನ್ನ ಇಂಗಿತವನ್ನು ಸಖಿಯರಿಗೆ ಹೇಳಲಿಕ್ಕೆ ಧೈರ್ಯಗೊಳ್ಳಲಿಲ್ಲ. ತನ್ನ ಇಚ್ಛಾಪೂರ್ತಿಗಾಗಿ ತಾನು ಏನಾದರೊಂದು ಅವಿಚಾರದ ಕಾರ್ಯ ಮಾಡಿದರೆ ತನ್ನ ತಾಯಿತಂದೆಗಳಿಗೆ ಅಪವಾದವು ಪ್ರಾಪ್ತವಾದೀತೆಂಬದಾಗಿ ಅವಳು ಮನಸ್ಸಿನಲ್ಲಿ ಬಹಳವಾಗಿ ಚಿಂತಿಸಹತ್ತಿದಳು. ಆ ವೇಳೆಯಲ್ಲಿ ಅವಳ ಸಖಿಯರಲ್ಲಿ ಅತ್ಯಂತ ಚತುರಳಾದ ಮಧುಮಾನಿನಿ ಎಂಬಾಕೆಯು ಕುಶಲತನದಿಂದ ಮಾಯೆಯ ಹೃದ್ಗತವನ್ನು ಗೊತ್ತುಮಾಡಿಕೊಂಡು, ನಿನ್ನ ಪ್ರಿಯತಮನನ್ನು ತಂದು ಕೊಡುವೆನು ಎಂದು ಮಾಯೆಗೆ ಆಶ್ವಾಸನ ಕೊಟ್ಟು, ಬಹು ವೇಗದಿಂದ ಅಲ್ಲಮನಿದ್ದೆಡೆಗೆ ಬಂದು ಅವನಿಗೆ ನಮಸ್ಕರಿಸಿ, ಮಧುರವಾಣಿಯಿಂದ " ಮಹಾನುಭಾವರೆ, ಇನ್ನು ನೀವು ಈ ಮನೆಯಲ್ಲಿರುವ ಅವಶ್ಯವಿಲ್ಲ. ನನ್ನ ಪ್ರಿಯ ಮೈತ್ರಿಣಿಯಾದ ಮಾಯೆಯು ನಿಮ್ಮ ಪ್ರೇಮಪಾಶದಲ್ಲಿ ಬಿದ್ದಿರುವಳು; ಅವಳು ನಿಮ್ಮನ್ನು ಸರ್ವದಾ ಸ್ಮರಿಸುತ್ತಿರುವಳು. ನಿಮ್ಮಿಂದ ಅಗಲಿ ಅವಳು ಕ್ಷಣಹೊತ್ತು ಇರಲಾರಳು; ಬಹಳ ಮಾತೇನು ನಿಮಗೆ ಅವಳು ತನ್ನ ಶರೀರವನ್ನೇ ಸಮರ್ಪಿಸಿರುವಳು. ಆದ್ದರಿಂದ ನಾನು ನಿಮ್ಮ ಕಾಲ ಮೇಲೆ ಬೀಳುತ್ತೇನೆ; ನನ್ನ ಪ್ರಿಯ ಸಖಿಯಳ ರಕ್ಷಣೆ ಮಾಡಿರಿ; ಅವಳ ಪತಿಯಾಗಿರಿ; ನಾವೆಲ್ಲರು ಮನಃಪೂರ್ವಕವಾಗಿ ನಿಮ್ಮ ಸೇವೆಯನ್ನು ಮಾಡುವೆವು; ನೀವು ಇನ್ನುಮೇಲೆ ಈ ಕ್ಷುದ್ರವಾದ ಮಂದಿರವನ್ನೂ ನರ್ತನ ಕಲಿಸುವ ಈ ನೀಚ ಉದ್ಯೋಗವನ್ನೂ ಬಿಟ್ಟು, ಇಂದ್ರಭವನದಂತಿರುವ ರತ್ನ ಖಚಿತವಾದ ಮಾಯೆಯ ಮಂದಿರಕ್ಕೆ ಬಂದು, ಅನೇಕ ಪ್ರಕಾರದ ಸುಖೋಪಭೋಗಗಳನ್ನು ಭೋಗಿಸುತ್ತ ಆನಂದಸಮುದ್ರದಲ್ಲಿ ಮಗ್ನರಾಗಿರಬೇಕು. " ಎಂದು ಅನೇಕ ಪ್ರಕಾರದಿಂದ ಅವನ ಮನಸ್ಸು ಕರಗುವಂತೆ ಹೇಳಿಕೊಳ್ಳಲು, ಅಲ್ಲಮನು ಸರ್ವಜ್ಞನಿದ್ದರೂ ಅವಳ

ಇಂಗಿತವನ್ನು ಅರಿಯದವನಂತೆ "ಎಲೈ ಚತುರಳೆ, ಮಾಯೆಯು ತ್ರೈಲೋಕ್ಯ ಸುಂದರಿಯುಷ್ಟೆ ಅಲ್ಲ, ಅರಸನ ಪ್ರೀತಿಯ ಮಗಳು. ಇಂತಹ ಕನ್ಯಾರತ್ನವನ್ನು ಪರದೇಶದಿಂದ ಬಂದು ಉಪಜೀವನಕ್ಕಾಗಿ ರಾಜನನ್ನು ಆಶ್ರಯಿಸಿದ ನನ್ನಂಥ ಕ್ಷುದ್ರನಿಗೆ ಯೋಜನೆಮಾಡುವದು ಎಂಥ ಹೊಲ್ಲದ ಕೆಲಸವು! ಇದಕ್ಕೆ ನಿನ್ನ ಮನಸ್ಸಾದರೂ ಹ್ಯಾಗೆ ಒಪ್ಪುವದು. ನೀನು ಸೇವಕರ ನಡಾವಳಿಯನ್ನರಿಯದವಳೆ? ಸೇವಕರು ಎಂದೂ ರಾಣಿವಾಸದಲ್ಲಿ ಸರಸವಾಡದೆ ಬಹು ಎಚ್ಚರದಿಂದಿರಬೇಕು. ಸೇವಾಸಮಯದಲ್ಲಿ ಅವರ ಹತ್ತಿರ ದ್ದುಕೊಂಡು ವಿನಯದಿಂದ ಅವರಿಗೆ ಹಿತವಾಗುವಂತೆ ವರ್ತಿಸಬೇಕು, ಅಂದರೆ ಸೇವಕರು ಪ್ರಾಶಸ್ತ್ಯವನ್ನು ಹೊಂದಿ ಘನತೆಗೇರುವರು' ಇದಕ್ಕೆ ವಿರುದ್ಧವಾಗಿ ನಡೆದರೆ ನಿಶ್ಚಯವಾಗಿ ಅವರಿಗೆ ಹಾನಿ ತಟ್ಟುವದು. ಇದೆಲ್ಲವು ತಿಳಿದಿದ್ದು ನೀನು ಹೀಗೆ ಮಾತಾಡುವದು ನನಗೆ ಆಶ್ಚರ್ಯವಾಗಿ ತೋರುತ್ತದೆ; ಇದರ ಮೇಲೆ ನಿನ್ನ ಮನಬಲ್ಲಂತೆ ಮಾಡಬಹುದು" ಎಂದು ಅಲ್ಲಮನು ಉತ್ತರ ಕೊಡಲು ಮಧುಮಾನಿನಿಯು ಪುನಃ ತನ್ನ ಪ್ರಿಯ ಸಖಿಯಳಿಗೆ ಪತಿಯಾಗಿ ಅವಳನ್ನು ಶೃಂಗಾರ ರಸದಲ್ಲಿ ಕ್ರೀಡಿಸುವಂತೆ ಮಾಡಬೇಕೆಂದೂ ತನ್ನ ವೈರಾಗ್ಯ ದರ್ಶಕ ವರ್ತನೆಯನ್ನು ಬಿದು ಕಾಮಕೇಳಿಗೆ ಮನಸ್ಸುಗೊಡಬೇಕೆಂದೂ ದೀನವಾಣಿಯಿಂದ ಬೇಡಿಕೊಳ್ಳಲು, ಆದಕ್ಕೆ ಅಲ್ಲಮನು "ಎಲೈ ಕುಶಲ ಸ್ತ್ರೀಯಳೆ ನಿನ್ನ ಪ್ರಿಯಸಖಿಯಳಾದ ಮಾಯೆಯು. ನಮ್ಮಂಥ ಸೇವಕಜನರೊಂದಿಗೆ ಮಿತ್ರತ್ವವನ್ನು ಬಯಿಸಿದರೆ ಅವಳ ಉದ್ದೇಶವು ನಿಷ್ಫಲವಾಗುವದು. ಯಾವನೊಬ್ಬ ಸೇವಕನು ಯಜಮಾನನ ಅಭಿಪ್ರಾಯವನ್ನು ಗೊತ್ತುಮಾಡಿಕೊಳ್ಳದಲೆ ತನಗೊಂದು ಅಧಿಕಾರವು ಪ್ರಾಪ್ತವಾಗಿದೆ ಎಂದು ಉಬ್ಬಿ ಮನಬಲ್ಲಂತೆ ಕೆಟ್ಟಕಾರ್ಯಗಳನ್ನು ಮಾಡತೊಡಗಿದರೆ ಅವನ ಸ್ಥಿತಿಯು ತಲೆ ಕೆಳಗೆ ಮಾಡಿ ಗುಡ್ಡದ ತುದಿಯಿಂದ ಚಲ್ಲಿಕೊಟ್ಟವನಂತೆ ಆಗುವದು. ಹೀಗೆ ನೀತಿ ಶಾಸ್ತ್ರಗಳು ಹೇಳುತ್ತಿರಲು ಅವುಗಳನ್ನು ದುರ್ಲಕ್ಷ್ಯ ಮಾಡಿ ನಡೆಯುವದು ಹೇಗೆ? ಆದ್ದರಿಂದ ನೀನು ಇನ್ನುಮೇಲೆ ಇಂತಹ ಅಸಹ್ಯವಾದ ಸಂಭಾಷಣೆಯನ್ನು ನನ್ನ ಮುಂದೆ ಮಾಡಬೇಡ" ಎಂದು ಹೇಳಿದನು.

ಮಧುಮಾನಿನಿ—ಎಲೈ ತರುಣ ಶ್ರೇಷ್ಠರೆ, ನಿಮ್ಮ ಮನಸ್ಸು ಮೊದಲೇ ಮಾಯೆಯ ಮೇಲೆ ಆಸಕ್ತವಾದದ್ದು, ಯಾಕೆ ನನ್ನನ್ನು ವ್ಯರ್ಥವಾಗಿ ಶ್ರಮಗೊಳಿಸುವಿರಿ? ದೇವದಾನವ ಸಿದ್ಧವಿದ್ಯಾಧರ ಮನುಷ್ಯ ಮುಂತಾದವರು ಮಾಯೆಯಪಾಶದಿಂದ ಬಗಿಯಲ್ಪಟ್ಟಿದ್ದಾರೆ, ಯಾಕಂದರೆ, ಅವಳ ಸೌಂದರ್ಯವು ಅಷ್ಟು ಮೋಹಕವಾಗಿದೆ. ಆದ್ದರಿಂದ ನನ್ನ ಮೇಲೆ ಕೃಪೆ ಮಾಡಿ ನನ್ನೊಡನೆ ಬರಬೇಕು.

ಅಲ್ಲಮ—ಎಲೈ ಸ್ತ್ರೀಯಳೆ, ಸುಮ್ಮನೆ ಮಾತಿಗೆ ಮಾತುಕೊಟ್ಟು ಮಾತಾಡುವದರಿಂದೇನು ಪ್ರಯೋಜನವಿಲ್ಲ. ನಾನು ಹೇಳತಕ್ಕದ್ದನ್ನೆಲ್ಲ ಮೊದಲೇ ನಿನಗೆ ಹೇಳಿ

ದ್ದೇನೆ. ನಿನ್ನ ಮಿತ್ರಳಾದ ಮಾಯೆಯು ಯಾವ ತರದ ವಿಚಾರದವಳೆಂಬದನ್ನು ನೀನು ಚನ್ನಾಗಿ ತಿಳಿದಿರುವಿ, (ಮುಂದೆ ಅವಳೊಡನೆ ಹೆಚ್ಚಿನ ಮಾತು ಬಳಸಲಿಕ್ಕೆ ಮನಸ್ಸಿಲ್ಲದೆ ತನ್ನ ಸಾಮರ್ಥ್ಯದಿಂದ ಮಾಯೆಗೆ ಕಷ್ಟ ಕೊಡಲಿಕ್ಕೆ ಸಿದ್ಧನಾಗಿ ನಗೆ ಮುಖದಿಂದ) ಎಲಾ ಕುಶಲಳೆ, ನನ್ನ ಮೇಲೆ ಏನೊಂದೂ ದೋಷಾರೋಪಣೆಯನ್ನು ಮಾಡದಿದ್ದರಾಯಿತು.–"ಎಂದು ಹೇಳಿ ಅಲ್ಲಮನು ಸಂಗಿಯಂತೆ ನಟಿಸಿ ನಿಸ್ಸಂಗಿಯಾಗಿರುವ ರೀತಿಯನ್ನು ಲೋಕದ ಜನರಿಗೆ ತೋರಿಸಬೇಕೆಂದು ನಿಶ್ಚಯಿಸಿ ಸ್ತಬ್ಧನಾಗಲು, ಮಧು ಮಾನಿನಿಯು ತನ್ನ ಕಪಟೋಕ್ತಿಗಳಿಗೆ ಅಲ್ಲಮನು ವಶವಾದನೆಂದು ಸಂತೋಷದಿಂದ ಆತನ ಅಪ್ಪಣೆಯನ್ನು ಪಡಕೊಂಡು, ಮಾಯೆಯಿದ್ದೆಡೆಗೆ ಬಂದು ನಡೆದ ಸಂಗತಿಯನ್ನು ಸವಿಸ್ತಾರವಾಗಿ ಹೇಳಿ ಅವಳಿಂದ ಹದಿನಾರು ಸಾವಿರ ಮೋಹರಗಳನ್ನು ಸಂಭಾವನೆಯಾಗಿ ಪಡೆದು, ಮರುದಿನ ರಾತ್ರಿ ಅಲ್ಲಮನಿದ್ದೆಡೆಗೆ ಪುನಃ ಬಂದು ಮಧುರ ವಚನಗಳಿಂದ ಮಾತಾಡುತ್ತ ಆತನಿಗೆ ಸುವಾಸಿಕ ಪದಾರ್ಥಗಳನ್ನೂ ಉತ್ತಮ ವಸ್ತ್ರಗಳನ್ನೂ ಧರಿಸಲಿಕ್ಕೆ ಕೊಟ್ಟು, ನಿಜವಾದ ಸಂಗತಿಯನ್ನು ಆತನಿಗೆ ತಿಳಿಸದೆ ಅವನನ್ನು ಯುಕ್ತಿಯಿಂದ ಮಾಯೆಯ ಮಂದಿರಕ್ಕೆ ಕರಕೊಂಡು ಬಂದಳು. ಇತ್ತ ಮಾಯೆಗೆ ಉತ್ತಮ ವಸ್ತ್ರಾಭರಣಗಳನ್ನು ತೊಡಿಸಿ ಶೃಂಗರಿಸಿ ಅವಳ ಮೈಗೆಲ್ಲ ಸುವಾಸಿಕ ಪದಾರ್ಥಗಳನ್ನು ಪೂಸಿ ಮಾಯೆಯನ್ನು ಕರತಂದು ಅಲ್ಲಮನ ತೊಡೆಯ ಮೇಲೆ ಕೂಡ್ರಿಸಿದಳು. ಬಳಿಕ ಯಾವದೋ ಒಂದು ಪದಾರ್ಥವನ್ನು ತರುವ ನೆವ ಮಾಡಿ ಅಲ್ಲಿಂದ ಹೊರಟು ಉಳಿದ ಸಖಿಯರಿಗೂ ದೂರ ಹೋಗಲಿಕ್ಕೆ ಸಂಜ್ಞೆ ಮಾಡಿ ತಾನೇ ಕ್ರೀಡಾಗ್ರಹವನ್ನು ಮುಚ್ಚಿ ಹೊರಟು ಹೋದಳು. ಇತ್ತ ಕ್ರೀಡಾಮಂದಿರದಲ್ಲಿ ಮಾಯೆಯು ಅತ್ಯಂತ ಕಾಮಾತುರಳಾಗಿ ಅಲ್ಲಮನನ್ನು ಆಲಿಂಗನ ಮಾಡುತ್ತಾಳೆ. ಆದರೆ ಅವನು ಮೇಘ ಮಂಡಲದಲ್ಲಿ ಚಮಕಿಸುವ ಮಿಂಚಿನಂತೆ ಅವಳ ಕೈಗೆ ಸಿಗದಾದನು? ಆಕಾಶವದೆ ಮತ್ತೂ ಅದು ನೀಲಿ ವರ್ಣದ್ದದೆ. ಎಂಬುವದರಿಂದ ಆಕಾಶವು ನೀಲಿ ಬಣ್ಣದ್ದದೆ. ಎಂದು ಜನರು ಅನ್ನುತ್ತಾರೆ. ಇದು ಕೇವಲ ಭ್ರಮಾತ್ಮಕವಾದ ಮಾತು. ನಿಜವಾಗಿ ಆಕಾಶಕ್ಕೆ ವರ್ಣವೇ ಇಲ್ಲ. ಅದರಂತೆ ಅಲ್ಲಮ ಪ್ರಭುವು ಸಾಕಾರವಾಗಿ ಕಣ್ಣಿಗೆ ಕಂಡರೂ ಈ ವೇಳೆಯಲ್ಲಿ ಆತನು ನಿರಾಕಾರವಾದನು; ಯಾಕಂದರೆ, ಆತನು ವಾಸ್ತವಿಕವಾಗಿ ನಿರಾಕಾರನೇ ಇರುವನು. ಮಲ್ಲಿಗೆಯ ಮೊಗ್ಗಿಗಳಂತೆ ದಂತಪಂಕ್ತಿಯುಳ್ಳ ಮಾಯೆಯು ಅಲ್ಲಮನ ಅಧರಾಮೃತ ಪಾನಕ್ಕೆಳಸಿ ಚುಂಬಿಸ ಹೋಗುತ್ತಾಳೆ. ಆದರೆ ಅಧರವೇ ದೊರಕವಲ್ಲದು!! ತನ್ನ ಕಯ್ಯಿಂದ ಅಲ್ಲಮನ ಕೈಗಳನ್ನು ಹಿಡಿಯಲಿಚ್ಛಿಸಿ ಅವನ ಕೈಗಳನ್ನು ಹಿಡಿಯ ಹೋದರೆ ಅವೂ ಸಿಗಲಿಲ್ಲ. ಆದ್ದರಿಂದ ಯಾವ ಯಾವದನ್ನು ಆಕೆಯು ಮಾಡಬೇಕೆನ್ನು

ತ್ತಿದ್ದಳೋ ಅದೆಲ್ಲ ಆಕಾಶವನ್ನು ಹಿಡಿಯ ಹೋದರೆ ವ್ಯರ್ಥವಾಗುವಂತೆ, ಅವಳಿಗೆ ನಿಷ್ಫಲವಾಯಿತು. ಆದಕಾರಣ ಅವಳಿಗೆ ನಾಚಿಕೆ ಹುಟ್ಟಿದ್ದಲ್ಲದೆ ಮತ್ತಿಷ್ಟು ದುಃಖ ವಾಯಿತು. ಈ ರೀತಿಯಾಗಿ ಮದನಾತುರಳಾದ ಮಾಯೆಯು ಅಲ್ಲಮನೊಡನೆ ಕ್ರೀಡಿಸಬೇಕೆಂದು ಅನೇಕ ಉಪಾಯಗಳನ್ನು ಮಾಡಿದರೂ ಅವೆಲ್ಲ ವ್ಯರ್ಥವಾದವು. ಅಲ್ಲಮಪ್ರಭುವು ಜಗಚ್ಚರಿತನಾದ್ದರಿಂದ ಮಾಯೆಯು ಕಾಮತಂತ್ರಗಳಿಂದ ಅವನಿಗೇನೂ ವಿಕಾರವಾಗಲಿಲ್ಲ. ಮತ್ತು ಆತನು ಜೀವನ್ಮುಕ್ತನಾದ್ದರಿಂದ ಮದನ ಬಾಧೆಗೆ ಸಿಲುಕಲಿಲ್ಲ.

ಅಲ್ಲಮಪ್ರಭುವು ಸರ್ವಾಂತರ್ಯಾಮಿಯೂ ಚಿತ್ಸ್ವರೂಪನೂ ಪರಮ ಜಗದ್ಗುರುವೂ ಸರ್ವರಿಗೂ ಶ್ರೇಷ್ಠನೂ ಆಗಿರುವದರಿಂದ ಸಾಮಾನ್ಯ ಮನುಷ್ಯರಂತೆ ಕರ್ಮದ ತೊಡಕಿನಲ್ಲಿ ಹ್ಯಾಗೆ ಸಿಲುಕುವನು? ಮಾಯೆಯು ಸರ್ವ ಜಗತ್ತನ್ನು ವಶ ಮಾಡಿಕೊಳ್ಳುವಂಥ ಸಾಮರ್ಥ್ಯವುಳ್ಳವಳೂ ಬೇಕಾದ ಸಾಹಸ ಕರ್ಮವನ್ನು ಮಾಡಲಿಕ್ಕೆ ಬಲಿಷ್ಠಳೂ ಇರುವದು ನಿಜ. ಆದರೆ ಮಾಡತಕ್ಕದ್ದೇನು? ಪ್ರತಿಯಾಗಿ ಅಲ್ಲಮನಿಗೇನೇ ವಶವಾದಳು. ಮತ್ತು ತನ್ನ ಧಾರ್ಷ್ಟ್ಯಕ್ಕಾಗಿ ತಾನೇ ಪಶ್ಚಾತ್ತಾಪ ಪಟ್ಟಳು. ಮಾಯೆಗೆ ಅಲ್ಲಮನ ಶರೀರದ ಅವಯವಗಳು ಸ್ಪಷ್ಟವಾಗಿ ಕಾಣಿಸುತ್ತಿದ್ದುದರಿಂದ, ಹಿಮಕಲೆಯಂತೆ ಅವು ಅವಳನ್ನು ಮೋಹದಲ್ಲಿ ಕೆಡವಲಿಕ್ಕೆ ಕಾರಣವಾದವು. ಭ್ರಮರವು ಬಂಗಾರವನ್ನು ನೋಡಿ ಅದು ಯಾವದಾದರೊಂದು ಹಳದೀ ಬಣ್ಣದ ಹೂವಿರಬಹುದೆಂದು ಊಹಿಸಿ ಮೇಲಿಂದಮೇಲೆ ಅದಕ್ಕೆರಗಿ ಕಷ್ಟಪಡುವಂತೆ, ನಿರಂಜನ ಮೂರ್ತಿಯಾದ ಅಲ್ಲಮನಿಗೆ ಮನ ಸೋತು ಮಾಯೆಯು ಶ್ರಮಪಟ್ಟು ಕೃಶ ಶರೀರಿಯಾಗಿ ತನ್ನ ಮನದಲ್ಲಿಯೇ ಬಹು ಚಿಂತಿಸಹತ್ತಿದಳು:— " ಪರಾಕ್ರಮಶಾಲಿಯು ಅಶಕ್ತನನ್ನೂ, ವಿದ್ವಾಂಸನು ಮಂದ ಬುದ್ಧಿಯುಳ್ಳವನನ್ನೂ ಪರಾಜಯಪಡಿಸುವಂತೆ ಅಲ್ಲಮನು ನನ್ನನ್ನು ಸೋಲಿಸಿದನು ನಾನಂತೂ ಅತನನ್ನೂ ಗೆಲ್ಲುವ ಹವ್ಯಾಸದಲ್ಲಿ ಬಿದ್ದು ವ್ಯರ್ಥ ಶ್ರಮಗೊಂಡೆನು. ಕಯ್ಯಿಂದ ಕಯ್ಯನ್ನು, ಶರೀರದಿಂದ ಶರೀರವನ್ನು, ಕಾಲಿನಿಂದ ಕಾಲನ್ನು, ತುಟಿಯಿಂದ ತುಟಿಯನ್ನು ಹಿಡಿಯಲೆತ್ನಿಸಿದರೂ ಯಾವದೂ ಸಿಗಲೊಲ್ಲದು. ಇದೇನಾಶ್ಚರ್ಯ! ಹೀಗೆ ವಿಚಾರ ಮಾಡಿ ಮಾಡಿ ಅವಳ ಮುಖಕಮಲವು ಬಾಡಿತು ಮೇಲಿಂದಮೇಲೆ ಬರುತ್ತಿರುವ ಶ್ವಾಸೋಚ್ಛ್ವಾಸದಿಂದ ಮೂರ್ಛಿತಳಾದಳು. ಅನಂತರ ಮೂರ್ಛೆಯುತಿಳಿದು ಅವಳು ನಿದ್ರಾಪರವಶಳಾದಳು. ಅಷ್ಟರಲ್ಲಿ ಬೆಳಗಾಯಿತು. ಹಾಸಿಗೆಯಿಂದೆದ್ದು ತನ್ನ ಸಖಿಯರ ಬಳಿಗೆ ಬಂದು ರಾತ್ರಿಯಲ್ಲಿ ನಡೆದ ಸಂಗತಿಯನ್ನೂ ಅಲ್ಲಮನ ವಿರಹವ್ಯಥೆಯಿಂದ ತನಗಾದ ದುರವಸ್ಥೆಯನ್ನೂ ಅವರಿಗೆ ತಿಳಿಸಿ, ಕಡೆಗೆ ಅಲ್ಲಮನು ಯಾವನಾದರೊಬ್ಬ ದೇವಾಂಶ ಪುರುಷನಾಗಲೀ ಸಿದ್ಧನಾಗಲೀ ಅಥವಾ ಸಾಕ್ಷಾತ ಶಂಕರನಾಗ

ಲೀ ಇರಬಹುದು. ಆದ್ದರಿಂದಲೇ ಆತನು ಇಷ್ಟು ಕಾಮದ್ವೇಷಿಯಾಗಿರುವನು. ಅಯ್ಯೋ! ಇನ್ನೇನುಮಾಡಲಿ! ಕಾಮನು ನನ್ನ ಅಂತಃಕರಣವನ್ನೆಲ್ಲ ಸುಡುತ್ತಿರುವ ನಲ್ಲಾ!! ಯಾರಿಗೆ ಶರಣು ಹೋಗಲಿ? ಎಂದು ಆಕ್ರೋಶದಿಂದ ವಿಲಾಪಿಸಹತ್ತಿದಳು.

ತನ್ನ ಪ್ರೇಮದ ಮಗಳಿಗಾದ ಸಂಕಟಸ್ಥಿತಿಯನ್ನು ಕೇಳಿ ತಾಯಿಯು ಮಗಳ ಮಂದಿರಕ್ಕೆ ಬಂದು ಏಕಾಂತದಲ್ಲಿ ಅವಳನ್ನೂ ಅವಳ ಸಖಿಯರನ್ನೂ ಕರೆದು ತನ್ನ ಮಗಳ ಮ್ಲಾನ ಮುಖವನ್ನು ನೋಡಿ ಅವಳು ಕಾಮನಬಾಣಗಳಿಂದ ಜರ್ಜರಿತ ಳಾಗಿರುವದನ್ನರಿತು—“ ಮಗಳೇ, ನೀನು ರಾಜಕುಲಕ್ಕೆ ಕಲಂಕ ತರುವ ಕೆಲಸ ವನ್ನು ನಡಿಸಿದಿ; ಇದು ನಿನ್ನ ತಂದೆಗೆ ತಿಳಿದರೆ ಅವರಿಗೆಷ್ಟು ಮುನಿಸು ಉಂಟಾಗಲಿ ಕ್ಕಿಲ್ಲ? ಜನರನಗೆಗೀಡುಮಾಡುವ ಈ ಕಾರ್ಯವನ್ನು ನೀನು ಮಾಡಹೊಡಗಿದ್ದು ಯುಕ್ತವೆ? ” ಎಂದು ಅನ್ನುತ್ತ ಸಖಿಯರಕಡೆಗೆ ತಿರುಗಿ—“ ಎಲೌ ತೊತ್ತುಗಳಿರಾ, ಇದೆಲ್ಲ ನಿಮ್ಮ ಕೆಲಸವಲ್ಲದೆ ನನ್ನ ಮಗಳಿಂದಾಗತಕ್ಕದ್ದಲ್ಲ. ” ಎಂದು ಕೋಪಿಸಿ ನುಡಿಯಲು ಅವರೆಲ್ಲರು “ ಮಾಯಯೇ ಅಲ್ಲಮನನ್ನು ಕಾಣುತ್ತಲೆ ಕಾಮತಾಪ ದಿಂದ ಮರುಳುಗೊಂಡು ಆತನಿಗೆ ಮೋಹಿಸಿದಳೆಂದು ” ದಿಟ್ಟತನದಿಂದ ಉತ್ತರಕೊ ಟ್ಟರು. ಆದನ್ನು ಕೇಳಿ ಮೋಹಿನಿ ರಾಣಿಯು ದುಃಖಿಸುತ್ತ ತನ್ನ ಮಗಳ ಮನೋ ಗತವನ್ನು ಚನ್ನಾಗಿ ಶೋಧಿಸಿ ನೋಡಿ ನಿರುಪಾಯಳಾಗಿ ಅವಳು ಅಲ್ಲಮನೊಡನೆ ಕೂಡುವ ಬಗೆಯನ್ನು ದಾಸೀ ಜನರಿಗೆ ಹೇಳಿ ಅವರಿಗೆ ಉತ್ತೇಜನಕೊಟ್ಟು ಈ ಕಾರ್ಯವನ್ನು ತನ್ನ ಪತಿಯಾದ ಮಮಕಾರ ರಾಜನಿಗೆ ತಿಳಿಯಗೊಡದಂತೆ ಮಾಡ ಬೇಕೆಂದು ಕಟ್ಟು ಮಾಡಿ ತನ್ನಮನೆಗೆ ತೆರಳಿದಳು.

ತಾಯಿಯು ಹೋದ ನಂತರ ಮಾಯಾದೇವಿಯು ತಾನು ಅಲ್ಲಮನ ಕೂಡ ಸುರತ ಸುಖವನ್ನು ಬಯಿಸಿ ಮೊದಲು ನೀತಿಯನ್ನು ಮೀರಿ ನಡೆದದ್ದೊಂದು ತಪ್ಪು; ಮತ್ತೂ ತಾನೆಸಗಿದ ಅವಿಚಾರ ಕಾರ್ಯವು ತನ್ನತಾಯಿಯ ಕಿವಿಗೆ ಬಿದ್ದದ್ದೊಂದು ತಪ್ಪು. ಹೀಗೆ ತನ್ನ ತಪ್ಪಿನ ಕೃತ್ಯಗಳಿಗಾಗಿ ಮನದಲ್ಲಿನೊಂದು ಮುಂದೆ ತಾನು ನೀ ತಿಯನ್ನು ಮೀರಿ ನಡೆಯಬಾರದೆಂದು ಯೋಚಿಸಿ, ತನ್ನ ಸಖಿಯರನ್ನು ಕರೆದು ಇನ್ನು ಮೇಲೆ ತಾವು ಮಾಡಿದ ಕಾರ್ಯವು ಅರಸನಿಗೆ ಗೊತ್ತಾಗದಂತೆ ಮಾಡತ ಕ್ಕದ್ದೆಂದು ಹೇಳಿ ತಾನು ಯಥಾಪ್ರಕಾರ ದಿನಾಲು ಮಧುಕೇಶ್ವರ ದೇವಾಲಯಕ್ಕೆ ದರ್ಶನ ನೆವದಿಂದ ಹೋಗಿ ಅಲ್ಲಮನ ವಿಲಾಸಕ್ಕೆ ಮೆಚ್ಚಿ, ಬೇಕಾದ ಸಾಹಸಗ ಳನ್ನು ಮಾಡಲು ಪ್ರವೀಣಳಿದ್ದಾಗ್ಯೂ ಅದು ಸಾಗದ್ದರಿಂದ ತಾನೇ ಕಾಮಾತುರ ದಿಂದ ಮೋಸಹೊಂದಿ, ಪಾರ್ವತಿಯೊಡನೆ ಮಾಡಿದ ಪ್ರತಿಜ್ಞೆಯನ್ನು ಮರೆತು ಬಿಟ್ಟಳು.

## ೪ನೆಯ ಅಧ್ಯಾಯ.



ಪ್ರತಿಜ್ಞಾ ಸ್ಮರಣ.



ಮಾಯಾದೇವಿಯು ಕೈಕೊಂಡ ಕಾರ್ಯದಲ್ಲಿ ಪರಾಜಿತಳಾದ ಸಂಗತಿಯನ್ನರಿತು ಪಾರ್ವತೀದೇವಿಯು ವಿಮಲೆಯನ್ನು ಏಕಾಂತದಲ್ಲಿ ಕರೆದು— "ವಿಮಲೇ, ತಾಮಸೀ ಮಾಯೆಯು ಅಲ್ಲಮ ಪ್ರಭುವನ್ನು ತನ್ನ ವಿಲಾಸದಿಂದ ವಶ ಮಾಡಿಕೊಳ್ಳುವೆನೆಂದು ಪ್ರತಿಜ್ಞೆ ಮಾಡಿ ಭೂಮಿಯಲ್ಲಿ ಜನಿಸಿದಳು. ಆದರೆ ಮಾಡುವದೇನು? ಅಲ್ಲಮನ ಮಹಿಮಾತಿಶಯದಿಂದ ತಾನೇ ಮೋಹಪಾಶದಲ್ಲಿ ಬಿದ್ದಿರುವಳು. ಹೀಗೆ ಮೋಸಹೊಂದಿ ಅವಳು ತನ್ನ ಕರ್ತವ್ಯವನ್ನು ಮರೆತು ಬಿಟ್ಟು ನನ್ನಾಜ್ಞೆಯನ್ನುಲ್ಲಂಘನ ಮಾಡಿರುವಳು. ಆದ್ದರಿಂದ ನೀನು ಭೂಲೋಕಕ್ಕೆ ಹೋಗಿ ಮಾಯೆಗೆ ಅವಳ ಸ್ವರೂಪಜ್ಞಾನ ಮಾಡಿಕೊಟ್ಟು ನಿನ್ನ ಸಂಗಡ ಕರೆದುಕೊಂಡು ಬಾ" ಎಂದು ಹೇಳಿದಳು. ಜಗಜ್ಜನನಿಯ ಅಪ್ಪಣೆಯನ್ನು ಶಿರಸಾವಹಿಸಿ ವಿಮಲೆಯು ಮಮಕಾರ ರಾಜನ ನಗರಕ್ಕೆ ಬರುವಂಥವಳಾದಳು. ಸೌಂದರ್ಯರಸದ ಕಣಿಯಂತಿರುವ ವಿಮಲೆಯ ಸುಕುಮಾರ ಶರೀರವನ್ನು ಆ ಊರ ಜನರು ನೋಡಿ ಆಶ್ಚರ್ಯದಿಂದ ಅವಳ ಲಾವಣ್ಯವನ್ನು ಸ್ತುತಿಮಾಡ ಹತ್ತಿದರು. ಹೀಗೆ ವಿಮಲೆಯು ಆ ಬನವಸಿ ಪಟ್ಟಣದ ಬೀದಿಗಳಲ್ಲಿ ಬರುತ್ತ ಮಧುಕೇಶ್ವರ ದೇವಾಲಯವನ್ನು ಕಂಡಳು. ವಿಮಲೆಯು ಬರುವದನ್ನು ಮಾಯಾದೇವಿಯು ನೋಡಿ ಅವಳನ್ನು ತನ್ನ ಮಂದಿರಕ್ಕೆ ಕರೆತಂದು ಸರ್ವೋಪಚಾರಗಳಿಂದ ಪೂಜಿಸಿ ಸಂತೋಷಗೊಳಿಸಿದಳು. ಬಳಿಕ ಮಾಯಾದೇವಿಯು ಅವಳನ್ನು ಕುರಿತು— "ತಾಯಿ, ನೀವು ಯಾವ ದೇಶದವರು? ನಿಮ್ಮ ಮಂಗಲಕಾರಕ ನಾಮವೇನು? ಇಲ್ಲಿಗೆ ಯಾವ ಉದ್ದೇಶದಿಂದ ಬರೋಣವಾಯಿತು? ಎಂದು ಕೇಳಲು ವಿಮಲೆಯು— "ಎಲೌ ಮಾಯೆಯೆ, ನಾನು ಹೇಳುವದನ್ನು ನೀನು ಗುಪ್ತರೀತಿಯಿಂದ ಕೇಳಬೇಕಾಗಿದೆ. ಆದ್ದರಿಂದ ಇಲ್ಲಿರತಕ್ಕ ಸರ್ವಪರಿವಾರವನ್ನು ದೂರ ಕಳಿಸಿ ಬಿಡು—

ಎಂದು ಕಿವಿಯಲ್ಲಿ ಹೇಳಲು ವಿಮಲೆಯು ಆಜ್ಞೆಯ ಮೇರೆಗೆ ಮಾಯೆಯು ಸರ್ವರನ್ನು ಕಳಿಸಲು ಬಳಿಕ ವಿಮಲೆಯು—“ ಎಲೌ ಸಮರ್ಥಳಾದ ಮಾಯಾದೇವಿಯೆ, ಶಿವನ ನಾಲ್ಕನೆಯ ಅವತಾರನಾದ * ಅಲ್ಲಮ ಪ್ರಭುವು ಸರ್ವಜ್ಞನೂ ನಿರ್ಮಾಯನೂ ನಿರಂಜನನೂ ಇದ್ದು ಸ್ವೇಚ್ಛೆಯಿಂದ ಲೋಕ ಕಲ್ಯಾಣಕ್ಕಾಗಿ ಜಗತ್ತಿನ ಮೇಲೆ ಸಂಚರಿಸುತ್ತ ಇಲ್ಲಿಯ ಮಧುಕೇಶ್ವರ ದೇವಾಲಕ್ಕೆ ಬಂದಿರುವನು. ಆತನ ಲೋಕೋತ್ತರವಾದ ಮೃದಂಗ ಬಾರಿಸುವ ರೀತಿಗೆ ನೀನು ಮೋಹಿತಳಾಗಿ ಈ ಭೂಮಿಯ ಮೇಲೆ ಮಾಡತಕ್ಕ ಕಾರ್ಯವನ್ನು ಮಾಡದೆ ಮರೆತು ಬಿಟ್ಟಿರುವಿ. ನೀನು ನಿನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಲಿಲ್ಲ. ಆದ್ದರಿಂದ ಪಾರ್ವತೀ ದೇವಿಗೆ ವ್ಯಾಕುಲವುಂಟಾಗಿ ನನ್ನನ್ನು ನಿನ್ನ ಬಳಿಗೆ ಕಳಿಸಿ ಕೊಟ್ಟಿರುವಳು. ” ಎಂದು ಹೇಳಿದಳು. ಆಮೇಲೆ

ಮಾಯಾದೇವಿಯು-- “ ವಿಮಲೆ, ನನಗೂ ಅಂಬಿಕಾ ದೇವಿಗೂ ಇರುವ ಸಂಬಂಧವೇನು? ನಾನು ಅಲ್ಲಮನಿಗೆ ವಶವಾಗಿದ್ದೆನೆಂಬುದು ಪಾರ್ವತಿಗೆ ಹ್ಯಾಗೆ ತಿಳಿಯಿತು? ಈ ಆಶ್ಚರ್ಯಕಾರಕ ಸಂಗತಿಯನ್ನು ನನಗೆ ಸವಿಸ್ತರವಾಗಿ ಹೇಳಬೇಕು. ” ಎಂದು ಸವಿನಯದಿಂದ ಕೇಳಿದಳು.

ಆ ಮಾತಿಗೆ ವಿಮಲೆಯು—“ ಸಖಿಯಳೆ, ನೀನು ಚಿತ್ರವಿಚಿತ್ರಗಳಾದ ಅಲ್ಲಮನ ತಂತ್ರಗಳಲ್ಲಿ ಸಿಲುಕಿ ಮೋಸ ಹೊಂದಿ ನಿನ್ನ ಕರ್ತವ್ಯವೇನೆಂಬದನ್ನು ಅರಿಯದಿರುವಿ. ನಿನ್ನದೇನು ಪಾಡು !! ವಿಷ್ಣುಬ್ರಹ್ಮೇಂದ್ರಾದಿಗಳು ಶಿವಾಜ್ಞೆಯಿಂದ ಭೂಮಿಯಮೇಲೆ ಹುಟ್ಟಿ ತಮ್ಮ ತಮ್ಮ ನಿಜಶಕ್ತಿಯನ್ನು ಮರೆತು ಬಿಡುತ್ತಾರೆ. ಮತ್ತು ಸಾಮಾನ್ಯ ಜನರಂತೆ ಸ್ತ್ರೀಯರ ಮೋಹಪಾಶದಲ್ಲಿ ಸಿಲುಕಿ ದುಃಖಬಡುತ್ತಾರೆ. ತಾವು ಯಾರೆಂಬದು ಅಂಥವರಿಗೆ ಗೊತ್ತಾಗದಿರುವಾಗ ಸ್ತ್ರೀಯಳಾದ ನಿನ್ನಲ್ಲಿ ಮರಿವೆಯುಂಟಾಗುವದೇನಾಶ್ಚರ್ಯ ? ” ಎಂದು ನುಡಿದು ಮಾಯೆಗೆ ಅವಳ ಸ್ವರೂಪಜ್ಞಾನ ಮಾಡಿಕೊಡಬೇಕೆಂದು ಚಿಂತಿಸಿ ಕೈಲಾಸದಲ್ಲಿ ಪಾರ್ವತೀ ಪರಮೇಶ್ವರರೊಳಗೆ ಅಲ್ಲಮ ಪ್ರಭುವಿನ ಸಲುವಾಗಿ ನಡೆದ ಸಂವಾದವನ್ನು ಸವಿ

* ಟಿಪ್ಪಣಿ— ಕೃತಯುಗದಲ್ಲಿ ಸ್ಥೂಲಕಾಯನೆಂಬ ಗಣೇಶ್ವರನಾಗಿ, ತ್ರೇತಾಯುಗದಲ್ಲಿ ಶೂನ್ಯಕಾಯನೆಂಬ ಗಣೇಶ್ವರನಾಗಿ, ದ್ವಾಪರಯುಗದಲ್ಲಿ ಅನಿಮಿಷನೆಂಬ ಗಣೇಶ್ವರನಾಗಿ, ಕಲಿಯುಗದಲ್ಲಿ ಪ್ರಭುವೆಂಬ ಜಂಗಮನಾಗಿ ಶಿವನು ನಾಲ್ಕು ಯುಗಗಳಲ್ಲಿ ಬೇರೆ ಬೇರೆ ಹೆಸರಿನಿಂದ ಶಿವಭಕ್ತಿಯನ್ನು ವೃದ್ಧಿಗೊಳಿಸುವದಕ್ಕಾಗಿ ಭೂಮಿಯಲ್ಲಿ ಅವತರಿಸಿದನೆಂದು ಮೂಲಗ್ರಂಥದಲ್ಲಿ ಹೇಳಿದೆ.

ಸ್ತಾರವಾಗಿ ತಿಳಿಸಿದ್ದಲ್ಲದೆ, ಅವಳನ್ನು ಪಾರ್ವತಿಯು ಯಾವ ಹೇತುವಿನಿಂದ ಇಲ್ಲಿಗೆ ಕಳಿಸಿದಳೆಂಬದನ್ನೂ ಹೇಳಲಾಗಿ ಮಾಯೆಗೆ ಅವಳ ಕರ್ತವ್ಯದ ನೆನಪು ಕೂಡಲೆ ಉಂಟಾಯಿತು, ವಿಮಲೆಯ ಭಾಷಣದಿಂದ ಮಾಯೆಗೆ ಪರಮಾನಂದವಾಯಿತು. ಆಪಳಲ್ಲುಂಟಾದ ಚಂಚಲತ್ವವೂ ಭ್ರಮೆಯೂ ಸಂಪೂರ್ಣವಾಗಿ ನಾಶಹೊಂದಿತು. ಇದೆಲ್ಲ ವಿಮಲೆಯ ಸತ್ಸಹವಾಸದಿಂದಾಯಿತೆಂದು ಅವಳನ್ನು ಬಹಳವಾಗಿ ಕೊಂಡಾಡಿ ತನಗೆ ಅಲ್ಲಮಪ್ರಭುವಿನ ಆದ್ಯಂತ ಚರಿತ್ರವನ್ನು ಹೇಳಬೇಕೆಂಬದಾಗಿ ಪ್ರಾರ್ಥಿಸಲು, ದಯಾರ್ದ್ರ ಹೃದಯಳಾದ ವಿಮಲೆಯು ಅಲ್ಲಮನ ವೃತ್ತಾಂತವನ್ನು ಹೇಳತೊಡಗಿದಳು– " ಸಖಿಯಳೆ, ಈ ಜಗತ್ತಿನಲ್ಲಿ ಬಸವನ ಮತ್ತು ಬಳ್ಳಿಗಾವೆ (ವಲ್ಲಿಗಾವಿ) ಎಂಬೆರಡು ಸುಶೋಭಿತವಾದ ಪಟ್ಟಣಗಳುಂಟು. ಇವೆರಡರೊಳಗೆ ಬಳ್ಳಿಗಾವೆಯ ಜನರು ಸದ್ಗುಣಿಗಳೂ, ಸದಾಚಾರಿಗಳೂ, ಧಾರ್ಮಿಕರೂ, ಧನಿಕರೂ ಆಗಿರುವರು. ಅವರೊಳಗೆ ಧನಿಕರೂ ಶಿವಧ್ಯಾನಪರರೂ ವೈರಾಗ್ಯಶೀಲರೂ, ಪರಮಾನಂದ ಸ್ವರೂಪರೂ ಸರ್ವತ್ರ ಸಮದೃಷ್ಟಿಯುಳ್ಳವರೂ ಆದ ದಂಪತಿಗಳಿರುವರು. ಅವರಲ್ಲಿ ಗಂಡನಿಗೆ ನಿರಹಂಕಾರನೆಂದೂ ಹೆಂಡತಿಗೆ ಸುಜ್ಞಾನಾಂಬೆಯೆಂದೂ ಹೆಸರುಗಳಿದ್ದವು. ಈ ದಂಪತಿಗಳು ಧನಕನಕ ವಸ್ತ್ರಾದಿಗಳ ಉಪಭೋಗಗಳನ್ನು ಅತಿಶಯವಾಗಿ ಭೋಗಿಸಿ ಆದರಿಂದ ಬೇಸರಪಟ್ಟು ತಮ್ಮಲ್ಲಿ ಎಣಿಸಲಾರದಷ್ಟು ಸಂಪತ್ತಿದ್ದರೂ ಸಂತಾನವಿಲ್ಲದ್ದರಿಂದ ಬಹಳ ದುಃಖಿತರಾಗಿದ್ದರು. ಒಂದು ದಿನ ಬೆಳಿಗ್ಗೆ ಎದ್ದು ವಿಚಾರ ಮಾಡುತ್ತ ನಿರಹಂಕಾರನು ತನ್ನ ಹೆಂಡತಿಯನ್ನು ಕುರಿತು– † " ನಾಚಿಕೆ, ವಸನ, ಮರ್ಯಾದೆಗಳಿಲ್ಲದ ಸ್ತ್ರೀಯಳಂತೆಯೂ, ದಾನಧರ್ಮಗಳಿಲ್ಲದ ಧನದಂತೆಯೂ, ಜ್ಞಾನಶೂನ್ಯರಿಂದ ಅತಿಶಯ ಮಾನಮರ್ಯಾದೆಯನ್ನು ಹೊಂದಿದ ಮನುಷ್ಯನ ಮಹತ್ವದಂತೆಯೂ ಶರತ್ಕಾಲದ ಕಾನನದ ಬೆಳದಿಂಗಳಂತೆಯೂ ಸಂತಾನವಿಲ್ಲದ ಸಂಪತ್ತು ನಿಷ್ಫಲವಾಗಿರುವದು. ಆದ್ದರಿಂದ ನಮಗೊಬ್ಬ ಬುದ್ಧಿವಂತ ಮಗನು ಉದಯಿಸಿದರೆ ಅವನಿಂದ ನಾವು ಈ ಸಂಸಾರ ಸಮುದ್ರವನ್ನು ದಾಟಲು ಶಕ್ತರಾಗುವೆವು. " ಪುತ್ರನಿಲ್ಲದವನಿಗೆ ಸದ್ಗತಿಯಿಲ್ಲವೆಂದು ವೇದಗಳು ಸಾರುವದಿಲ್ಲವೇ ? ಎಂದು ನುಡಿಯಲು ಸುಜ್ಞಾನಾಂಬೆಯು:– ' ಮಹಾರಾಜರೆ, ವಿಚಾರಶೀಲರಾದ ತಮಗೆ ಇಂತಹ ಪುತ್ರಾಭಿಲಾಷೆಯು ಸಲ್ಲುವದೇ ? ಈ ದೃಷ್ಟ ಪ್ರಪಂಚದಲ್ಲಿ ಆಶೆಯೆಂಬ ಬಲಿಯು ಸರ್ವತ್ರ ವ್ಯಾಪಿಸಿರುವದು. ಸಂಸಾ

---

† ಟೀಪ– ದಾನವಿಲ್ಲದ ಧರ್ಮವಿಷಯ । ಧ್ಯಾನವಿಲ್ಲದ ತಪವು ಜೀವ । ಸ್ನಾನದ ನರಸಂಧಾನವಲ್ಲದ ಯೋಗದಭ್ಯಾಸ ॥ ಜ್ಞಾನವಿಲ್ಲದ ಸಿದ್ಧವರಸಂತಾನವಿಲ್ಲದ ಬಾಳ್ಕೆಯಲಿ ಸುಖ । ವೇನು ದೊರಕುವುದೇನು ತನಿರಹಂಕಾರ ಚಿಂತಿಸಿದ ॥

ರವೆಂಬುದು ಮಾಯೆಯ ಮೋಹಕವಾದ ಕ್ರೀಡಾ ಭೂಮಿಯು. ಅದರಲ್ಲಿ ಸತ್ಯಾಂಶವು ಸ್ವಲ್ಪಾದರೂ ಇಲ್ಲ. ಸ್ವಭಾವತಃ ಕ್ಷಣಭಂಗುರವಾದದ್ದು. ಆದರೆ ಶಿವ ಭಕ್ತಿಯೊಂದೇ ಶಾಶ್ವತವಾದದ್ದು, ನಿರ್ದೋಷವಾದದ್ದು ಇರುತ್ತದೆ. ಅನಾದಿಕಾಲದಿಂದ ಅವ್ಯಾಹತವಾಗಿ ನಡೆದು ಬಂದ ಮಾಯಾರೂಪವಾದ ಕತ್ತಲೆಯಿಂದ (ಅಜ್ಞಾನದಿಂದ) ಚಿತ್ಸ್ವರೂಪಜ್ಞಾನವು ಮುಸುಕಿರುವ ಕಾರಣ, ಕಂಠದಲ್ಲಿ ಕಂಗೊಳಿಸುವ ಬಂಗಾರದ ಹಾರವು ಕಾಣಿಸದಂತೆ, ಜೀವನಿಗೆ ಶಿವತ್ವವು ಗೋಚರಿಸುವದಿಲ್ಲ. ಈ ಅಜ್ಞಾನವೆಂಬ ಕತ್ತಲೆಯು ದೆಸೆಯಿಂದ ಮನುಷ್ಯನು ಪಶುವೆನಿಸುವನು. ಆದ್ದರಿಂದ ಶಿವಜ್ಞಾನವನ್ನು ಪಡೆದು ಶಿವನ ವಿಷಯವಾಗಿ ಅಖಂಡ ಭಕ್ತಿಯನ್ನು ನಮ್ಮ ಹೃದಯದಲ್ಲಿ ನೆಲಗೊಳಿಸಬೇಕು. ಪುತ್ರಾದಿ ವಿಷಯಗಳಿಗೆ ಮನಸ್ಸಿನಲ್ಲಿ ಸ್ವಲ್ಪಾದರೂ ಆಶ್ರಯ ಕೊಡಬಾರದು. ಅಂತ್ಯದಲ್ಲಿ ಅವೆಲ್ಲ ವ್ಯರ್ಥವೆ" ಎಂದು ಹೇಳಲು ನಿರಹಂಕಾರರಾಜನು,

ಪತಿವ್ರತಾ ಶಿರೋಮಣಿಯಾದ ತನ್ನ ಪತ್ನಿಯು ಮಾತನ್ನು ಕೇಳಿ ಲೋಕರಕ್ಷಣಾರ್ಥವಾಗಿಯಾದರೂ ತನಗೆ ಸಾಕ್ಷಾತ್ ಶಿವನೇ ಮಗನಾಗಬೇಕೆಂದು ಚಿಂತಿಸಿ ಅದರ ಸಿದ್ಧಿಗಾಗಿ ತಾವು ಸರ್ವೇಶ್ವರನಾದ ಶಿವನನ್ನು ಆರಾಧಿಸಬೇಕೆಂದು ತನ್ನ ಸ್ತ್ರೀಯಳನ್ನು ಒಡಂಬಡಿಸಿದನು. ಬಳಿಕ ದಂಪತಿಗಳೀರ್ವರೂ ಶಿವಾಗಮದಲ್ಲಿ ಹೇಳಿದಂತೆ ದರ್ಭಾಸನಾರೂಢವಾಗಿ ಏಕಾಗ್ರಚಿತ್ತದಿಂದ ಶಿವಧ್ಯಾನದಲ್ಲಿ ಮಗ್ನರಾಗಲು ಹಸಿವು ನೀರಡಿಕೆ, ಸುಖ-ದುಃಖ-ಮೋಹ, ಹಾಗೂ ಹಗಲು ರಾತ್ರಿ ಮೊದಲಾದವುಗಳೆಲ್ಲವೂ ತಿಳಿಯದಾದವು. ಸರ್ವತ್ರ ಪರಮಾತ್ಮನು ಪರಿಪೂರ್ಣವಾಗಿ ತುಂಬಿಕೊಂಡಿರುವನೆಂದು ತಿಳಿದ ಬಳಿಕ ಭೇದಜ್ಞಾನವು ಸಂಭವಿಸುವದುಂಟೆ?*

ಶಿವನೇ ಮಗನಾಗಬೇಕೆಂದು ಶಿವಧ್ಯಾನದಲ್ಲಿ ತತ್ಪರರಾದ ದಂಪತಿಗಳ ಮನದಲ್ಲಿ ಶಿವಸ್ವರೂಪವು ತಮ್ಮ ಹಸ್ತಗತ ಇಷ್ಟಲಿಂಗದ ಪ್ರಕಾಶದಂತೆ ಹೊಳೆಯಿತು. ಈ ಬ್ರಹ್ಮ ತೇಜಸ್ಸೇ ಸ್ಫಟಕದಂತೆ ಪೂರ್ಣ ಪ್ರಕಾಶತ್ವವನ್ನು ಹೊಂದಿ ಹೊರಗೆ ವ್ಯಾಪಿಸಿ ನೋಡನೋಡುವಷ್ಟರಲ್ಲಿಯೇ ಏಕತ್ರವಾಗಿ ಕೂಡಿಕೊಳ್ಳಲು, ದಂಪತಿಗಳೀರ್ವರೂ ತಮ್ಮೆದುರಿಗೆ ಕಾಣುವ ದೇದೀಪ್ಯಮಾನವಾದ ಜ್ಯೋತಿಯನ್ನು ನೋಡಿ,

* ಟೀಪ-ಯಾರು ಧನಿಕರನ್ನು ಕಂಡು ಮೇಲಕ್ಕೆ ಕೂಡ್ರಿಸಿ ಉಪಚರಿಸುತ್ತ, ಬಡವರನ್ನು ನೋಡಿ ಅನಾದರ ಮಾಡುತ್ತ ಒಮ್ಮೊಮ್ಮೆ ತಮ್ಮ ವಾಸಸ್ಥಾನದಿಂದ ಹೊರಗೆ ದಬ್ಬಿಕೊಡುತ್ತ ತಾವು ಸಾಧುಗಳೆಂದೂ ನಿರಂಜನ ಜಂಗಮರೆಂದೂ ಹೊಗಳಿಸಿಕೊಳ್ಳುತ್ತಿರುವರೋ ಅವರಿಗೆ ಪರಿಪೂರ್ಣ ಜ್ಞಾನವಾಗಿಲೇನ್ನ ಬೇಕಲ್ಲವೇ!

ಶಿವನೇ ಈ ರೂಪದಿಂದ ತಮಗೆ ಮಗನಾಗಿ ಬಂದನೆಂದು ಭಾವಿಸಿ ಸುಖಸಮು ದ್ರದಲ್ಲಿ ಮುಳುಗಿದರು. ಮತ್ತು ಕಣ್ದೆರೆದು ಪುತ್ರರೂಪದಿಂದ ಬಂದ ಶಿವನನ್ನು ನೋಡಿ ಪುನಃ ಅವುಗಳನ್ನು ಮುಚ್ಚಿ ಒಳಗೆ ತಮ್ಮ ಹೃದಯ ಕಮಲದಲ್ಲಿದ್ದ ಶಿವ ನನ್ನು ಆತ್ಮಜ್ಞಾನದಿಂದ ಕಂಡು, ಎರಡೂ ಒಂದೇ ಎಂದು ನಿಶ್ಚಯಿಸಿ ನಿರಹಂಕಾ ರನು ತನ್ನ ಪತ್ನಿಯನ್ನು ಕುರಿತು "ಸ್ತ್ರೀಯಳೇ, ನಮ್ಮ ಪುಣ್ಯಪರಿಪಾಕದಿಂದ ಶಿವನೇ ನಮಗೆ ಮಗನಾಗಿ ಉದಯಿಸಿದನು. ಇವನು ಸರ್ವಭೂತಾಂತರ್ಯಾ ಮಿಯಾದ ಪರಮೇಶ್ವರನಿರುವನು; ಇವನನ್ನು ವರ್ಣಿಸುವದು ಆದಿಶೇಷನಿಗೂ ಸಹ ಅಸದಳವು. ಇವನನ್ನು ಸಾಕಾರನೆಂದೂ ಅಥವಾ ನಿರಾಕಾರನೆಂದೂ ಹೇಳಲಿಕ್ಕಾಗ ದು; ಇವನು ಸಗುಣನೂ ಅಲ್ಲ; ನಿರ್ಗುಣನೂ ಅಲ್ಲ; ಹೇತುದೃಷ್ಟಾಂತಗಳಿಗೆ ಇವನು ಸಂಬಂಧಿಸಲ್ಪಡುವದಿಲ್ಲ. ಇವನನ್ನು ನೆಲ, ನೀರು ಮುಂತಾದ ಪಂಚಮಹಾಭೂ ತಗಳು ಮುಟ್ಟಲರಿಯವು; ದೇಶಕಾಲಗಳ ಬಾಧೆಯಿಂದ ಈತನು ದೂರನಾಗಿದ್ದಾನೆ; ಇವನ ಯಥಾರ್ಥ ಜ್ಞಾನವು ಇವನಿಗಲ್ಲದೆ ಇನ್ನೊಬ್ಬನಿಗೆ ತಿಳಿಯದು. ಈತನು ಸೂಕ್ಷ್ಮಕ್ಕಿಂತ ಸೂಕ್ಷ್ಮನೂ ಮಹತ್ತಿಗಿಂತ ಮಹತ್ತನೂ ಇದ್ದು ತಾನೇ ಸ್ವತಃ ಕಾರ ಣನೂ ಕಾರ್ಯನೂ ಆಗಿದ್ದಾನೆ. ಇವನು ಸರ್ವೇಂದ್ರಿಯಗಳಿಂದ ಕೂಡಿದವ ನೆಂದು ತೋರಿದರೂ ಅವುಗಳಲ್ಲಿ ಆಸಕ್ತನಾಗಿಲ್ಲ. ಇವನು ಮಾಯೆಗೆ ವಶವಾ ಗದೆ ಪ್ರತಿಯಾಗಿ ಮಾಯೆಯನ್ನೇ ತನ್ನ ಅಂಕಿನಲ್ಲಿಟ್ಟುಕೊಂಡಿದ್ದಾನೆ. ಜಗತ್ತಿನ ಮರ್ಮವನ್ನು ಈತನು ತಿಳಿಯುತ್ತಿದ್ದರೂ ಈತನ ಮರ್ಮವನ್ನು ಜಗತ್ತು ತಿಳಿಯ ಲಾರದು. ಈತನು ಸಾಕಾರನಾಗಿದ್ದರೂ ಆಕಾಶದಂತೆ ನಿರಾಕಾರನಾಗಿ ಯಾರಿಂ ದಲೂ ಮುಟ್ಟಲ್ಪಡನು. ವೇದಗಳೂ, ಸರ್ವಶಾಸ್ತ್ರಗಳೂ ಈತನನ್ನು ಅರಿಯವು. ವಿಷ್ಣು ಬ್ರಹ್ಮಾದಿ ದೇವತೆಗಳಿಗೂ ಸಹ ಈತನು ದುರ್ಲಭನು. ಇಂಥ ಮಹಿಮನು ನಮ್ಮ ಸುಕೃತ ವಿಶೇಷದಿಂದ ನಮ್ಮನ್ನು ಉದ್ಧರಿಸುವದಕ್ಕಾಗಿ ನಮಗೆ ಪುತ್ರನಾಗಿ ಅವತರಿಸಿ ಪ್ರತ್ಯಕ್ಷನಾಗಿರುವನು." ಎಂದು ಹೇಳಿದನು. ಬಳಿಕ ದಂಪತಿಗಳೀ ರ್ವರು ಶಿವಾಜ್ಞೆಯ ಮೇರೆಗೆ ಪುತ್ರೋತ್ಸವವನ್ನು ಬಹು ವಿಜೃಂಭಣೆಯಿಂದ ಮಾಡಿ ಅವನಿಗೆ ಅಲ್ಲಮನೆಂಬ ಹೆಸರನ್ನಿಟ್ಟರು. ಆತನು ಚಿಕ್ಕಂದಿನಲ್ಲಿಯೇ ತನ್ನ ದೀವ್ಯತ ರವಾದ ಬುದ್ಧಿ ಚಾತುರ್ಯದಿಂದ ವಿದ್ವಾಂಸರನ್ನು ಚಕಿತರಾಗಿ ಮಾಡಿದನು. ವಿನೋ ದಾರ್ಥವಾಗಿ ಅಲ್ಲಮನು ಒಮ್ಮೊಮ್ಮೆ ಪಾತಾಳಕ್ಕಿಳಿದು ಅಲ್ಲಿಂದ ಮಹಾಶೇಷನ ಮಸ್ತ ಕದ ಮೇಲಿರುವ ಮಣಿಯನ್ನು ತರುತ್ತಿದ್ದನು ಒಮ್ಮೊಮ್ಮೆ ಇಂದ್ರನಗರಕ್ಕೆ ಜಿಗಿ ದು ಅಲ್ಲಿರುವ ನಂದನವನದ ಹೂವನ್ನೂ ತಕ್ಕೊಂಡು ದೇವಗಂಗೆಯ ನಿರ್ಮಲ ಪ್ರವಾ ಹದಲ್ಲಿ ಸ್ನಾನ ಮಾಡಿ ಬರುತ್ತಿದ್ದನು. ಒಮ್ಮೊಮ್ಮೆ ಸೂರ್ಯ ಚಂದ್ರರನ್ನು ಚಂಡು ಗಳಂತೆ ಕಯ್ಯಲ್ಲಿ ಹಿಡಿದು ಆನಂದದಿಂದ ತಾಳ ಹಾಕುತ್ತ ಕುಣಿಯುತ್ತಿದ್ದನು.

ಹೀಗೆ ಚಿತ್ರ ವಿಚಿತ್ರವಾದ ಆತನ ಅದ್ಭುತ ಶಕ್ತಿಯನ್ನು ಕಂಡು ತಂದೆ ತಾಯಿಗಳು ಅತ್ಯಾನಂದ ಭರಿತರಾಗಿ ಆತನನ್ನು ವೇದವಚನಗಳಿಂದ ಸ್ತುತಿಸಿದರು. ಹಾಗೂ ಜ್ಞಾನೋಪದೇಶದಿಂದ ಅಜ್ಞಾನಾಂಧಕಾರವನ್ನು ಸಮೂಲವಾಗಿ ನಾಶಗೊಳಿಸಿ ತಮ್ಮನ್ನು ರಕ್ಷಿಸಬೇಕೆಂದು ನಮಸ್ಕರಿಸಿ ಅನೇಕ ವಿಧವಾಗಿ ಪ್ರಾರ್ಥಿಸಿದರು. + ಅದಕ್ಕೆ ಅಲ್ಲಮನು ಅವರನ್ನು ಕೃಪಾದೃಷ್ಟಿಯಿಂದ ನೋಡಿ— "ಎನಿರೈ, ತಂದೆ ತಾಯಿಗಳೇ, ನಾನು ಗುಪ್ತ ರೀತಿಯಿಂದ ನಿಮಗೆ ತತ್ವೋಪದೇಶಮಾಡುತ್ತೇನೆ. ಅದನ್ನು ಲಕ್ಷ್ಯವಿಟ್ಟು ಕೇಳಿರಿ, ನಾನು ಹೇಳುವದು ವೇದಕ್ಕೂ ಯುಕ್ತಿಗೂ ಸಮ್ಮತವಾಗಿದೆ. ನಿಮ್ಮ ಮನಸ್ಸಿನೊಳಗಿನ ಸರ್ವ ವಿಚಾರಗಳನ್ನು ತೆಗೆದು ಹಾಕಿ ಇಷ್ಟಲಿಂಗದಲ್ಲಿ ದೃಢ ವಿಶ್ವಾಸವನ್ನಿರಿಸಿ ಲಿಂಗವ್ರತ ಧಾರಣ ಮಾಡಿದರೆ, ಜನನ-ಮರಣಾತ್ಮಕವಾದೀ-ಸಂಸಾರ-ಚಕ್ರದಿಂದ ನೀವು ಬಿಡುಗಡೆಯನ್ನು ಹೊಂದುವಿರಿ, ಎಂದು ಅವರಿಗೆ ಭೋಧಿಸಿ ಅವರನ್ನು ಆನಂದಸಾಗರದಲ್ಲಿ ಮುಳುಗಿಸಿದನು. ಹೀಗೆ ಶಿವನು ಪಾರ್ವತಿಗೆ ಅಲ್ಲಮನ ಚರಿತ್ರವನ್ನು ಹೇಳಿದ್ದನ್ನು ನಾನುಕೇಳಿ ನಿನಗೆ ಹೇಳಿದೆನು." ಎಂದು ವಿಮಲೆಯು ನುಡಿಯಲು ಮಾಯೆಯು ವಿಮಲೆಯ ಮುಖದಿಂದ ಅಲ್ಲಮನ ಆದ್ಯಂತ ವೃತ್ತಾಂತವನ್ನು ಕೇಳಿದ ಕೂಡಲೆ ಅವಳಿಗೆ ತನ್ನ ಪ್ರತಿಜ್ಞೆಯ ಸ್ಮರಣೆಯುಂಟಾಗಿ "ಅಹಹಾ ನಾನು ಎಂಥ ಮೂಢಳು. ಆ ಮಹಾದೇವಿಯ ಆಜ್ಞೆಗೆ ಭಂಗವನ್ನು ತಂದೆನಲ್ಲ! ಅಯ್ಯೋ ಏನು ಮಾಡಲಿ! ಅಲ್ಲಮನನ್ನು ಜಯಿಸುವದು ಹಾಗಿರಲಿ. ನಾನೇ ಪುನಃ ಸರ್ವ ಸಾಮಾನ್ಯ ಸ್ತ್ರೀಯರಂತೆ ಅವನಿಗೆ ವಶಳಾದೆನು. ನಾನು ಎಷ್ಟು ದುರ್ಭಾಗ್ಯಳು! ಈ ಸಂಗತಿಯನ್ನು ಕೇಳಿ ಜನರು ನನಗೇನನ್ನುತ್ತಿರಬಹುದು!" ಎಂದು ಬಹಳ ಪಶ್ಚಾತ್ತಾಪ ಹೊಂದಿ ಸ್ವಲ್ಪ ಹೊತ್ತು ಮೌನದಿಂದ ಕುಳಿತುಕೊಂಡಳು. ಅನಂತರ ಧೈರ್ಯದಿಂದ "ಆದದ್ದಾಯಿತು. ಇನ್ನಮುಂದೆ ಆ ಅಲ್ಲಮನನ್ನು ಸೋಲಿಸಿ ಜಗನ್ಮಾತೆಯ ಆಜ್ಞೆಯನ್ನು ಪೂರ್ಣಮಾಡದೆ ಎಂದೂ ಬಿಡಲಿಕ್ಕಿಲ್ಲ" ವೆಂದು ಒಳ್ಳೇ ದೃಢಮನಸ್ಸಿನಿಂದ ನಿಶ್ಚಯಿಸಿ ಅಜ್ಞಾನದಿಂದ ಹಾಗೂ ಅಹಂಕಾರದಿಂದ ಅಲ್ಲಮನನ್ನು ಸೋಲಿಸುವ ಕಾರ್ಯದಲ್ಲಿ ಪುನಃ ತೊಡಗುವವಳಾದಳು.

---

+ ಟೀಪು—"ನಬಾಲವೃದ್ಧಭೇದೋಸ್ತಿ ನಮಸ್ಕಾರಾದಿ ಪೂಜನೆ।
ಸರ್ವೇಪಿವಂದನೀಯಾಹಿ ಶಿವರೂಪಾಯ ತಚ್ಛಿವವೆ॥"

ಅಂದರೆ ಶಿವಸ್ವರೂಪಿಗಳು ಬಾಲರೇ ಇರಲಿ, ವೃದ್ಧರೇ ಇರಲಿ ಅವರು ನಮಸ್ಕಾರ ಪೂಜಾದಿಗಳಿಗೆ ಯೋಗ್ಯರೆಂಬ ತಾತ್ಪರ್ಯ.

# ೫ನೆಯ ಅಧ್ಯಾಯ.



## ಪ್ರಭುದೇವರನ್ನು ಮೋಹಗೊಳಿಸಬೇಕೆಂಬ ಮಾಯೆಯ ಪ್ರಯತ್ನವು, ಪುನಃ ನಿರರ್ಥಕವಾಯಿತು.



ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ವಿಮಲೆಯು ಮುಖದಿಂದ ಅಲ್ಲಮನ ಅಲೌಕಿಕ ಸಾಮರ್ಥ್ಯವನ್ನು ಕೇಳಿ ಮಾಯಾದೇವಿಯು—"ವಿಮಲೆ, ಯಾವ ಮಹಾತ್ಮನಾದ ಅಲ್ಲಮನ ವಿಷಯವಾಗಿ ನೀನು ನನಗೆ ಹೇಳಿದಿ ಆತನು ಸಾಕ್ಷಾತ್ ಪರಮಾತ್ಮನೇ ಇದ್ದ ಪಕ್ಷಕ್ಕೆ ಆತನ ಉಪಾಸನೆಯನ್ನು ಮಾಡಿದಾಗ್ಯೂ ನನ್ನ ಅಭೀಷ್ಟ ಫಲ ಪ್ರಾಪ್ತಿಯು ಈ ವರೆಗೂ ಆಗಲಿಲ್ಲ. ಹೀಗಾಗಲಿಕ್ಕೆ ಕಾರಣವೇನು? ಎಂದು ಕೇಳಲು ವಿಮಲೆಯು—"ಮಾಯೆಯೆ ನೀನು ತ್ರೈಲೋಕ್ಯ ಸುಂದರಿಯಾಗಿರುವದರ ಕಾರಣವನ್ನು ಬಲ್ಲೆಯಾ? ಕೇಳು ಹೇಳುತ್ತೇನೆ. ನಿನ್ನನ್ನು ಗೆಲ್ಲಬೇಕೆಂದೇ ಅಲ್ಲಮಪ್ರಭುವು ಭೂಮಿಯಲ್ಲಿ ಅವತರಿಸಿರುವನು. ಆತನ ಸಾಮರ್ಥ್ಯವು ಅಚಿಂತ್ಯವಾದದ್ದೂ ದುರವಗಾಹವಾದದ್ದೂ ಇರುವದರಿಂದ, ಆತನ ಮನಸ್ಸಿನಂತೆ ಯಾರು ಆತನನ್ನು ಸೇವಿಸುವರೋ ಅವರಿಗೆ ಅಸಾಧ್ಯವಾದದ್ದು ಯಾವದೂ ಇಲ್ಲ. ದೇವಾಧಿದೇವನಾದ ಮಹಾದೇವನಲ್ಲಿ ಅನನ್ಯ ಮತ್ತು ನಿಷ್ಕಾಮ ಭಕ್ತಿಯನಿಟ್ಟು ಪೂಜಿಸಿದರೆ ಪೂಜಕನಿಗೆ ಇಹದಲ್ಲಿ ವಿಷಯೋಪ ಭೋಗಗಳ ಸುಖವುಂಟಾಗಿ ಮರಣಾನಂತರ ಮೋಕ್ಷ ಸುಖವು ಅನಾಯಾಸವಾಗಿ ಪ್ರಾಪ್ತವಾಗುವದು. ಪ್ರಭುವಿನ ಚರಣಕಮಲಗಳನ್ನು ಭಕ್ತಿಯಿಂದ ಆರಾಧಿಸುವವಂಗೆ ಇಹಲೋಕದ ಸುಖವು ತೃಣಪ್ರಾಯವೆನಿಸುವದು" ಎಂದು ಹೇಳಲು ಅದನ್ನು ಕೇಳಿದೊಡನೆಯೆ ಮಾಯೆಯು ಅಂದದ್ದು"ನಾನು ಯಾವರೀತಿಯಿಂದ ಅಲ್ಲಮನನ್ನು ಆರಾಧಿಸಿದರೆ ನನಗೆ ಆತನು ವಶವಾಗುವನು? ಅದನ್ನು ಹೇಳಬೇಕೆಂದು ಬೇಡಿಕೊಳ್ಳಲು, ವಿಮಲೆಯು—"ಭಕ್ತಿಪೂರ್ವಕವಾಗಿ ಶಿವನನ್ನು ಅರ್ಚಿಸಬೇಕೆಂದು ಉತ್ತರ ಕೊಟ್ಟಳು. ಇದನ್ನು ಕೇಳಿ ಮಾಯೆಯು ತಾನು ನಿತ್ಯವೂ ಮಧುಕೇಶ್ವರ ದೇವಾಲಯದಲ್ಲಿ ಶಿವನನ್ನು ಪೂಜಿಸಿದರೂ ತನ್ನ ಅಭೀಷ್ಟವು ಇನ್ನೂ ಸಿದ್ಧಿಸಲಿಲ್ಲ. ಆದ್ದರಿಂದ ಈಶ್ವರೋಪಾಸನೆಯನ್ನು ಬಿಟ್ಟು ಇತರ ದೇವತೆಗಳ ಉಪಾಸನೆಯನ್ನು ಹೇಳತಕ್ಕದಿ

ದ್ದರೆ ಹೇಳಬೇಕೆಂದು ಸಿಟ್ಟಿನಿಂದ ವಿಮಲೆಯನ್ನು ನೋಡಿ ನುಡಿಯಲು ಆ ಮಾತಿಗೆ ವಿಮಲೆಯು—"ಮಾಯೆಯೆ, ನೀನು ವ್ಯರ್ಥವಾಗಿ ಶಿವನಿಂದಾ ಪಾಪಕ್ಕೆ ಗುರಿಯಾಗುವಿ. ಯಾಕಂದರೆ-ಯಾವ ಭಕ್ತರು ನಿರ್ಮಲಾಂತಃಕರಣದಿಂದ ಶಿವೋಪಾಸನೆಯನ್ನು ಮಾಡುವರೋ ಅವರಿಗೆ ಶಿವನು ಅವರ ಕಯ್ಯಲ್ಲಿದ್ದ ಸುವರ್ಣ ಕಡಗದಂತೆ ತೋರುವನು ಶಿವನು ಅವರ ಅಂಗಣದಲ್ಲಿ ಹೂಳಿಟ್ಟ ನಿಧಿಯೂ ಕಾಮಧೇನವೂ ಕಲ್ಪವೃಕ್ಷವೂ ಚಿಂತಾರತ್ನವೂ ಆಗಿರುವನು. ಇದು ಲೋಕಪ್ರಸಿದ್ಧವಾದ ಮಾತು ಶಿವಾರ್ಚನೆಯಿಂದ ಯಾರು ತಮ್ಮ ಇಷ್ಟಾರ್ಥವನ್ನು ದೊರಕಿಸಿಲ್ಲ ಹೇಳು? ಜ್ಞಾನಪೂರ್ವಕವಾದ ಶಿವಭಕ್ತಿಯಿಂದ ಶಿವನ ಸೇವೆಯನ್ನು ಮಾಡಿದರೆ, ಆತನು ಭಕ್ತರನ್ನು ಶೀಘ್ರದಲ್ಲಿಯೇ ಅನುಗ್ರಹಿಸುವನು. ಆದರೆ ಶಿವಭಕ್ತಿಯ ರೀತಿ ಶಿವಪೂಜಾವಿಧಿ ಇವುಗಳ ಪರಿಚಯವಿಲ್ಲದೆ ಶಿವಭಕ್ತಿಯನ್ನೂ ಶಿವಪೂಜೆಯನ್ನೂ ಮಾಡಿದರೆ, ಆ ಭಕ್ತಿಯೂ ಪೂಜೆಯೂ ವ್ಯರ್ಥವಾಗುವವು. ಆದ್ದರಿಂದ ಕಮಲದಂತೆ ನೇತ್ರವುಳ್ಳ ಮಾಯಾದೇವಿಯೆ, ನಾನು ನಿನಗೆ ಶಾಸ್ತ್ರದಲ್ಲಿ ಹೇಳಿದ ಶಿವಭಕ್ತಿಯ ರೀತಿಯನ್ನೂ ಶಿವಪೂಜಾವಿಧಿಯನ್ನೂ ಹೇಳುತ್ತೇನೆ. ಅದನ್ನು ಕೇಳಿ ಅದರಂತೆ ನೀನು ವರ್ತಿಸಿದರೆ, ಇಹಪರವೆರಡರಲ್ಲಿಯೂ ಕೂಡಿ ನಿನಗೆ ಸುಖವಾಗುವದು. ಮೊತ್ತ ಮೊದಲು ಸದ್ಗುಣಸಂಪನ್ನನಾದ ಸ್ವಮತಾಚಾರ ನಿರತನಾದ ಗುರುನಾಥನನ್ನು ಆಶ್ರಯಿಸಬೇಕು. ಯಾಕಂದರೆ, ಗುರುವಿನಿಂದ ಕಲಿತ ವಿದ್ಯೆಯು ಶೀಘ್ರದಲ್ಲಿಯೇ ಫಲದ್ರೂಪವಾಗುವದು.+ ಆದರೆ ಸದ್ಗುರುವನ್ನು ಆಶ್ರಯಿಸದೆ ಗುರೂಕ್ತ ಪ್ರಕಾರ ಶಿವಪೂಜೆಯನ್ನು ಮಾಡದಿದ್ದರೆ ಆ ಭಕ್ತಿಯು ನಿಷ್ಪ್ರಯೋಜಕವಾಗಿ ಸಿಂಹನಮೇಲೆ ಏರಿಹೋದ ಆನೆಯು ಮರಣ ಹೊಂದುವಂತೆ, ನಿಶ್ಚಯವಾಗಿ ಕೇಡು ಸಂಭವಿಸುವದು, ಶಿವಾಗಮಗಳಲ್ಲಿ ಹೇಳಿದಂತೆ ಶಿವಪೂಜಾಪಾತ್ರೆಗಳನ್ನೂ ಶಿವಪೂಜಾದ್ರವ್ಯಗಳನ್ನೂ ಶುದ್ಧಮಾಡಬೇಕು. ಇಷ್ಟಲಿಂಗದಲ್ಲಿ ಶಿವನ ಅಂಗ, ಮುಖ, ಹಸ್ತ ಮೊದಲಾದ ಅವಯವಗಳನ್ನು ಗುರುಮುಖದಿಂದ ಅರಿತುಕೊಂಡು ಶಿವಪೂಜೆಯಲ್ಲಿ ತೊಡಗಬೇಕು. ಆದರೆ ಗುರೂಪದೇಶವನ್ನು ದುರ್ಲಕ್ಷ್ಯಮಾಡಿ ಪೂಜಾವಿಧಾನವನ್ನರಿಯದೆ ಶಿವನನ್ನು ಪೂಜಿಸಿದರೆ ಅದು ತಾಮಸ ಪೂಜೆಯೆನಿಸುವದು.

---

+ ಟೀಪು.-ಯಾವನನ್ನು ಆಶ್ರಯಿಸುವದರಿಂದ ನಮ್ಮಲ್ಲಿಯ ದುರ್ವಾಸನೆ, ದುರ್ನಡತೆ ಮೊದಲಾದವುಗಳು ನಷ್ಟವಾಗದೆ ಪ್ರತಿಯಾಗಿ ನಮ್ಮಲ್ಲಿಯ ದುಷ್ಟಾಚಾರಗಳೂ ಅಪ್ರಮಾಣಿಕ ವರ್ತನಗಳೂ ನೆಲಿಸುವವೋ ಅಂಥವನನ್ನು ಗುರುವೆಂದು ಕರೆಯಲಾಗದು.

ಆದರಿಂದ ಪೂಜಕನಿಗೆ ಏನೂ ಪ್ರಯೋಜನವಿಲ್ಲ. ಇಂತಹ ತಾಮಸ ಪೂಜೆಯು ನಿಜವಾಗಿ ಪೂಜೆಯೇ ಅಲ್ಲ. ಪೂಜಾಭಾಸವು ಅಂದರೆ ಪೂಜೆಯಂತೆ ತೋರುವ ಕಾರ್ಯವು. ಈ ತರದ ಪೂಜೆಯಿಂದ ಶಿವನು ಎಂದೂ ಪ್ರಸನ್ನನಾಗುವದಿಲ್ಲ. ಆದ್ದರಿಂದ ಜಾಣರು ಗುರುಮುಖದಿಂದ ಶಿವನ ಅಂಗ, ಮುಖ, ಹಸ್ತ ಮುಂತಾದವುಗಳನ್ನು ಚನ್ನಾಗಿ ತಿಳಿದುಕೊಂಡು ವಿಚಾರಪೂರ್ವಕವಾಗಿ ಭಕ್ತಿಭಾವದಿಂದ ಪರಮೇಶ್ವರನ ಪೂಜೆಯನ್ನು ಮಾಡಬೇಕು. ಹೀಗೆ ಶಾಸ್ತ್ರ ತಾತ್ಪರ್ಯವದೆ. ಯಾವನು ಗುರೂಪದೇಶದಲ್ಲಿ ವಿಶ್ವಾಸವಿಡದೆ, ಸಾಮಾನ್ಯ ಸೇವಕರಿಂದ ಬಿಲ್ವಪತ್ರೆ ಮುಂತಾದವುಗಳನ್ನು ತರಿಸಿಕೊಂಡು, ಕೆಟ್ಟರೀತಿಯಿಂದ ಮಾಡಿದ ಪದಾರ್ಥಗಳನ್ನು ಶಿವನಿಗರ್ಪಿಸಿ, ವಿಶ್ವಾಸಹೀನನಾಗಿ ಶಿವಪೂಜೆಯನ್ನು ಮಾಡುತ್ತಾನೆಯೋ ಅಂಥವನ ಪೂಜೆಯು ರಾಜಸ ಪೂಜೆಯೆನಿಸುವದು, ಇಂತಹ ಪೂಜೆಯು ಶಿವನಿಗೆ ಸಮ್ಮತವಾಗುವದಿಲ್ಲ. ಯಾವನು ಜನ್ಮದಲ್ಲಿ ಅಂದರೆ ಹುಟ್ಟಿದಾರಭ್ಯ ದಾನಧರ್ಮವನ್ನರಿಯದೆ ಜ್ಞಾನಸಂಪನ್ನರನ್ನೂ, ಅಧಿಕಾರಸಂಪನ್ನರನ್ನೂ ನಿಂದಿಸುತ್ತ ಗುರುವು ಹೇಳಿದ ಉಪದೇಶವನ್ನೂ ಶಾಸ್ತ್ರಮರ್ಯಾದೆಯನ್ನೂ ಬಿಟ್ಟು ಸ್ವೇಚ್ಛೆಯಿಂದ ಶಿವಪೂಜೆಯನ್ನು ಮಾಡುತ್ತಾನೆಯೋ ಅದಾದರೂ ಹಿಂದೆ ಹೇಳಿದಂತೆ ತಾಮಸಪೂಜೆಯನಿಸುವದು. + ಈತರದ ಪೂಜೆಯನ್ನು ಶಿವನು ಎಂದೂ ಸ್ವೀಕರಿಸುವದಿಲ್ಲ. ಶಿವನ ಯಥಾರ್ಥಜ್ಞಾನಕ್ಕೋಸುಗ ಯಾವನು ವೇದಾಗಮ ಶಾಸ್ತ್ರಪುರಾಣಗಳನ್ನು ಓದಿ ಅವುಗಳ ನಿಜವಾದ ಅರ್ಥಜ್ಞಾನ ಮಾಡಿಕೊಂಡಿರುವನೋ ಅವನೇ ಸದ್ಗುರುವು. ಹೀಗೆ ಯಥಾರ್ಥ ಜ್ಞಾನ ಸಂಪನ್ನನಾದ,

---

+ ಟೀಪು ಇತ್ತಿತ್ತಲಾಗಿ ಕೆಲವು ಹೊಟ್ಟೆಬಾಕರೂ ಜ್ಞಾನಲವದುರ್ವಿದಗ್ಧರೂ, ವೈಗಳ್ಳರೂ ಮುಂತಾದವರು ಕಾಷಾಯಾಂಬರ ಧಾರಿಗಳಾಗಿ ತಾವು ಸಾಧುಗಳೆಂದೂ ತಾವು ಅವಧೂತರೆಂದೂ ಹೇಳಿಸಿಕೊಂಡು ಮರುಳ ಮಾನವರಿಂದ ಪೂಜೆಗೊಂಬುವರು. ಈ ಸಾಧುಗಳು ಮಡಿ ಮೈಲಿಗೆಯ ಕಲ್ಪನೆಯಿಲ್ಲದೆ ಕುಲ ಹದಿನೆಂಟು ಜಾತಿಯವರಿಂದ ಉಪಯೋಗಿಸಲ್ಪಡುವ ಯಾನಗಳಲ್ಲಿ (ಟಾಂಗಾ ಡಮಣಿ ಮುಂತಾದವುಗಳಲ್ಲಿ) ಕುಳಿತುಕೊಂಡು ಬಂದು ಹಾಗೆಯೇ ಅವರ ನಡುಮನೆಯಲ್ಲಿ ಅಥವಾ ದೇವರ ಮನೆಗಳಲ್ಲಿ ಸೇರಿ ಅವರಿಂದ ತಮ್ಮ ಕಾಲುಗಳನ್ನು ಪೂಜಿಸಿಕೊಳ್ಳುವರಂತೆ! ಅವರಿಗೆ ತಮ್ಮ ಎಂಜಲವನ್ನು ಕೊಟ್ಟು ಪ್ರಸಾದವೆಂದು ಹೇಳುವರಂತೆ!! ಮತ್ತು ಎಲೆ ಅಡಿಕೆಗಳನ್ನು ತಕ್ಕೊಂಡು ಅವರಿಗೆ ಆಶೀರ್ವದಿಸುವರಂತೆ!!! ಇದು ಯಾವತರದ ಪೂಜೆಯನಿಸುವದೋ ದೇವರೇ ಬಲ್ಲ.

ದಯಾಳುವಾದ, ಶಿಷ್ಯನ ಮನಸ್ಸು ಅಂತಃಕರುಣಭಾವ ಮುಂತಾದವುಗಳನ್ನು ತಿಳಿದುಕೊಳ್ಳಲು ಸಮರ್ಥನಾದ ಮತ್ತು ವಿದ್ವಾಂಸನಾದ ಸದ್ಗುರುವನ್ನು ಶರಣು ಹೊಕ್ಕು ಅವನಾಜ್ಞೆಯು ಮೇರೆಗೆ ಶಿವನಲ್ಲಿ ಏಕಾಗ್ರಚಿತ್ತದಿಂದ ಭಕ್ತಿಯನ್ನಿಡ ಬೇಕು. ಮತ್ತು ತನ್ನಾಶ್ರಮಕ್ಕೆ ಸರಿಯಾದ ಆಚಾರವುಳ್ಳಂಥ ಜಂಗಮರನ್ನು ಪೂಜಿಸಬೇಕು. ತಮ್ಮ ಯಾವತ್ತೂ ಇಂದ್ರಿಯುಗಳನ್ನು ತಮ್ಮ ವಶದಲ್ಲಿಟ್ಟುಕೊಂಡು ಯಥಾವಿಧಿ ಶಿವಪೂಜೆಯನ್ನು ಮಾಡಬೇಕು. ಯಾವ ಮಹಾತ್ಮನು ಏಕಾಗ್ರಚಿತ್ತದಿಂದ ಸರ್ವೇಶ್ವರನಾದ ಶಿವನನ್ನು ಯಾವದೊಂದು ಫಲಾಪೇಕ್ಷೆಯಿಲ್ಲದೆ ಆರಾಧಿಸುತ್ತಾನೆಯೋ, ಅವನಿಗೆ ಸುಲುಭವಾಗಿ ಮೋಕ್ಷ ಲಕ್ಷ್ಮಿಯು ದೊರಕುವಳು. ಮತ್ತು ಯಾವನಾದರೊಂದು ಕಾಂಕ್ಷೆಯಿಂದ ಶಿವಪೂಜೆಯನ್ನು ಮಾಡುವನಾದರೆ, ಅವನಿಗೆ ಇಹದಲ್ಲಿ ವಿಷಯೋಪಭೋಗ ಸುಖವು ಲಭಿಸುವದು. ಆದರೆ ಕೇವಲ ವಿಷಯೇಚ್ಛೆಯಿಂದ ಶಿವಪೂಜೆಯಲ್ಲಿ ಆಸಕ್ತನಾದರೆ ಅವನಿಗೆ ಮೋಕ್ಷವೆಂದಿಗೂ ದೊರಕದು. ಮೋಕ್ಷಪ್ರಾಪ್ತಿಗಾಗಿ ಶಿವಪೂಜೆಯನ್ನೆಸಗಿದರೆ ಅದರಿಂದ ಈ ಲೋಕದಲ್ಲಿ ಸುಖವೂ ಪರಲೋಕದಲ್ಲಿ ಮೋಕ್ಷವೂ ಉಂಟಾಗುವದು. ಇದೇ ಸಾತ್ವಿಕ ಪೂಜೆಯೆನಿಸುವದು. ವಿಷ್ಣು ಬ್ರಹ್ಮಾದಿ ದೇವತೆಗಳು ಶಿವನನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿ ಮೂರು ಲೋಕಗಳ ಅಧಿಕಾರವನ್ನು ಪಡೆದರು; ಹಾಗೂ ಅಧಿಕೈಶ್ವರ್ಯ ಸಂಪನ್ನರೂ ಆದರು. ಶರೀರದ ಸರ್ವ ಅವಯುವಗಳ ಚನ್ನಾಗಿದ್ದು ಪ್ರಾಣವೊಂದಿಲ್ಲದಿದ್ದರೆ ಅದು ಹ್ಯಾಗೆ ಅಪ್ರಯೋಜಕವೋ, ಅದರಂತೆ ಸದ್ಗುರುವಿನ ಉಪದೇಶ ಆತನ ಕೃಪೆ ಮುಂತಾದವುಗಳಿಲ್ಲದ ಜನರು ಹುಟ್ಟಿದರೂ ಅಥವಾ ಹುಟ್ಟದಿದ್ದಗೂ ಒಂದೇ. ಈ ಕಾರಣದಿಂದ ಸದ್ಗುರುವಿನ ಕೃಪಾಕಟಾಕ್ಷವನ್ನು ಹೊಂದಿ ಶಿವದೀಕ್ಷಾ ಸಂಪನ್ನನಾಗಿ, ಪಾಪರಹಿತನಾಗಿ ನಿರ್ಮಲ ಮನಸ್ಸಿನಿಂದ ಶಿವಪೂಜೆಯಲ್ಲಿ ಆಸಕ್ತನಾದರೆ, ಅವನಿಗೆ ಸರ್ವವೂ ಲಭ್ಯವಾಗುವದು. ಯಕ್ಷ--ರಾಕ್ಷಸ ಭೂತ–ಪಿಶಾಚಿ ಮೊದಲಾದ ಕ್ಷುದ್ರ ದೇವತೆಗಳ ಪೂಜೆಯನ್ನು ಬಿಟ್ಟು, ದೇವಾಧಿ ದೇವನಾದ ಮಹದೇವನನ್ನು ಭಕ್ತಿಪೂರ್ವಕವಾಗಿ ಪೂಜಿಸಿದ ಸಜ್ಜನರಿಗೆ ಇಷ್ಟ ಪ್ರಾಪ್ತಿಯು ಆಗದೆ ಇರುವದೇ? ಕುರುಡನು ತನ್ನ ಕೈಯ್ಯಲ್ಲಿ ಕನ್ನಡಿಯನ್ನು ಹಿಡಿದಾಗ್ಯೂ ತನ್ನ ರೂಪವು ಹ್ಯಾಗೆ ಆತನಿಗೆ ಕಾಣುವದಿಲ್ಲವೋ, ಅದರಂತೆಯೇ ಗುರೂಪದೇಶವಿಲ್ಲದೆ ಶಿವಪೂಜೆಯನ್ನು ಮಾಡಿದರೆ ಫಲಪ್ರದವಾಗದು. ಆದ್ದರಿಂದ ಮಾಯೆಯೆ, ನಿನ್ನ ಶಿವಪೂಜೆಯಲ್ಲಿ ಏನಾದರೊಂದು ದೋಷವಿರಲಿಕ್ಕೆ ಬೇಕು. ಇಲ್ಲದಿದ್ದರೆ ಅವರಿಂದ ಇಷ್ಟ ಸಿದ್ಧಿಯಾಗಲಿಕ್ಕೆ ಯಾವ ಪ್ರತ್ಯವಾಯವೂ ಇರುವದಿಲ್ಲ, ಎಂದು ಹೇಳಿದಳು. ಹೀಗೆ ಪ್ರಮಾಣಪೂರ್ವಕವಾಗಿ ವಿಮಲೆಯು ಹೇಳುವಾಗ, ಮಾಯಾದೇವಿಯು ತಾರಣ್ಯಮದದಿಂದ ಉನ್ಮತ್ತಳಾಗಿ

ಅವಳ ಮಾತನ್ನು ತಿರಸ್ಕರಿಸಿ, ಶಿವಪೂಜೆಯಿಂದಲೂ, ಗುರೂಪದೇಶದಿಂದಲೂ ಏನೂ ಪ್ರಯೋಜನವಿಲ್ಲ. ಜಗತ್ತನ್ನು ಗೆಲ್ಲುವದಾದರೆ ತನ್ನ ಸ್ವಂತ ಸಾಮರ್ಥ್ಯದಿಂದ ಜಯಿಸಬೇಕೆಂದು ವಿಮಲೆಯನ್ನು ಮೂದಲಿಸಿ ನುಡಿಯಲು, ಅವಳು ಆ ಮಾತನ್ನು ಅಲ್ಲಿಗೆ ಕಯ್ಬಿಟ್ಟು ಮಾಯೆಯ ಕಲ್ಯಾಣವು ಯಾವದರಿಂದ ಆಗುವದೆಂದು ವಿಚಾರ ಮಾಡಿ ಗುಪ್ತರೀತಿಯಿಂದ ಅವಳ ಅಂತರಂಗವನ್ನು ತಿಳಕೊಂಡು, ಅವಳನ್ನು ಕರಕೊಂಡು ವಿಮಲೆಯು ಮಧುಕೇಶ್ವರ ದೇವಾಲಯಕ್ಕೆ ಬಂದಳು. ಅಲ್ಲಿ ಶಿವಪೂಜೆಯನ್ನು ತೀರಿಸಿಕೊಂಡು ಅಲ್ಲಮನಿದ್ದ ನಾಟ್ಯ ಶಾಲೆಗೆ ಅವಳೊಡನೆ ಬಂದು, ಮಾಯೆಯನ್ನು ನರ್ತನ ಮಾಡಲಿಕ್ಕೆ ಬಿಟ್ಟಳು. ಆದರೆ ಅಲ್ಲಿ ಮಾಯೆಯು ನರ್ತನ ಮಾಡುತ್ತ ಅಲ್ಲಮನರೂಪಕ್ಕೆ ಮೋಹಿತಳಾಗಿ, ಮದನನ ಬಾಣಗಳಿಂದ ಹೊಡಿಯಲ್ಪಟ್ಟು ಬಹಳ ವ್ಯಥೆಗೊಂಡಳು. ಇದನ್ನಂತು ವಿಮಲೆಯು 'ಮನಸ್ಸಿನಲ್ಲಿ-"ಮಾಯೆಯು ಇಲ್ಲಿ ನರ್ತನ ಮಾಡುತ್ತಿದ್ದರೂ ಇವಳ ಚಿತ್ತವು ಅಲ್ಲಮನಕಡೆಗೆ ಹೋಗಿದೆ. ಇವಳು ಇಲ್ಲಿ ಮಾತಾಡಿದರೂ ಅಂತಃಕರಣವು ಅಲ್ಲಮನಲ್ಲಿ ಕೂಡಿದೆ. ಇವಳ ದೃಷ್ಟಿಯು ಇಲ್ಲಿ ಇದ್ದಂತೆ ತೋರಿದರೂ ಅದು ಅಲ್ಲಮನಲ್ಲಿ ನಟ್ಟಿದೆ. ಏನಾಶ್ಚರ್ಯ! ಮೂರು ಲೋಕಗಳನ್ನು ಥೈ ಥೈ ಎಂದು ಕುಣಿಸುವಂಥ ಮಾಯೆಯು ತಾನೇ ಒಂದು ತರಗೆಲೆಯಂತೆ (ಹಗುರಾದ ಹುಲ್ಲಿನಂತೆ) ಅಲ್ಲಮನಿಂದ ಕುಣಿಸಲ್ಪಡುತ್ತಾಳೆ!! (ನರ್ತನ ಶಾಲೆಯಲ್ಲಿ ಅಲ್ಲಮನು ಹಾಸ್ಯವದನನಾಗಿದ್ದುದನ್ನು ನೋಡಿ) ಸ್ಫಟಿಕಮಣಿಯು ಸ್ವಚ್ಛವಾಗಿಯೂ ಶುಭ್ರವಾಗಿಯೂ ಇರುತ್ತದೆ. ಅದರ ಸಮೀಪಕ್ಕೆ ಕೆಂಪು ದಾಸ್ವಾಳದ ಹೂವನ್ನಿಟ್ಟರೆ ಅದು ರಕ್ತವರ್ಣದ್ದಾಗಿ ತೋರುವಂತೆ, ಅಲ್ಲಮನು ಸ್ವಭಾವತಃ ನಿರ್ಗುಣನಿದ್ದರೂ ಮಾಯೆಯ ಸಂನಿಧಿಯಿಂದ ಸುಗುಣನಾಗಿ ತೋರುತ್ತಾನೆ. ಆದರೆ ಆ ದಾಸ್ವಾಳದ ಹೂವನ್ನು ಸ್ಫಟಿಕದಿಂದ ದೂರ ಮಾಡಿದರೆ ಅದು ಮೊದಲಿನಂತೆ ಸ್ವಚ್ಛವಾಗಿಯೂ, ನಿರ್ಮಲವಾಗಿಯೂ ತೋರುವಂತೆ, ಅಲ್ಲಮನು ಮಾಯೆಯಿಂದ ದೂರವಿದ್ದಲ್ಲಿ ಮೊದಲಿನಂತೆ ನಿರ್ಗುಣನಾಗಿ ತೋರುತ್ತಾನೆ." ಹೀಗೆ ವಿಚಾರಿಸಿ ಮಾಯೆಯು ನರ್ತನದ ಕಡೆಗೆ ಲಕ್ಷ್ಯವಿಟ್ಟು ನೋಡಲಾಗಿ ಅವಳು ತಾಳಮಾನ ಬಿಟ್ಟು ಕುಣಿಯುತ್ತಿದ್ದಳು. ಅದರಿಂದ ಮೇಳದವರಗತ್ತಿಗೂ ಅವಳ ಕುಣಿತಕ್ಕೂ ಸಂಬಂಧ ತಪ್ಪಿತು. ದೋಷಯುಕ್ತವಾದ ರಾಗದಿಂದ ಹಾಡಹತ್ತಿದಳು. ಅದನ್ನು ನೋಡಿ ಅಲ್ಲಮನು ಕಯ್ಯೊಳಗಿನ ಮದ್ದಲೆಯನ್ನು ಬೀಸಾಟ ಊರುಬಿಟ್ಟು ಎಲ್ಲಿಯೋ ಹೊರಟು ಹೋದನು.

ಬಳಿಕ ಮಾಯೆಯು ಅಲ್ಲಮನ ವಿರಹ ವ್ಯಥೆಯನ್ನು ತಾಳಲಾರದೆ ಎಲ್ಲ ತರದ ಮಾನ ಮರ್ಯಾದೆಯನ್ನು ಬಿಟ್ಟು ಅಲ್ಲಮಾ, ಅಲ್ಲಮಾ, ಎಂದು ಕೂಗುತ್ತ ತನ್ನ

ತಂದೆ ತಾಯಿಗಳಿಗೆ ಹೇಳದೆ ಅಲ್ಲಮನನ್ನು ಹುಡುಕುವದಕ್ಕಾಗಿ ವಿಮಲೆಯೊಡನೆ ಊರುಬಿಟ್ಟು ಹೊರಟು ಹೋದಳು. ಹೀಗೆ ತನ್ನ ಸಖಿಯರೊಂದಿಗೆ ಅಲ್ಲಮನನ್ನು ಹುಡುಕುತ್ತ ಒಂದಾನೊಂದು ಅರಣ್ಯಕ್ಕೆ ಮಾಯೆಯು ಬರಲು ಅಲ್ಲಿರುವ ಮುನಿಗಳು ಆವಳ ರೂಪಲಾವಣ್ಯಾತಿಶಯಗಳಿಗೆ ಮೋಹಿತರಾಗಿ, ತಮ್ಮ ತಪಸ್ಸನ್ನು ಬಿಟ್ಟು ಮೈಮೇಲೆ ಸ್ಮೃತಿಯಿಲ್ಲದೆ ಜಪಮಾಲಿಕೆಯನ್ನು ತೂರೆದು ಅವಳನ್ನು ಹಿಂಬಾಲಿಸಿದರು. ಇದನ್ನು ತಿಳಿದು ಅಲ್ಲಮ ಪ್ರಭುವು ಅವರನ್ನು ರಕ್ಷಿಸಬೇಕೆಂದು ಒಬ್ಬ ತಪಸ್ವಿಯ ರೂಪವನ್ನು ಧರಿಸಿ ಅವರಿಗೆ ಪ್ರತ್ಯಕ್ಷನಾಗಿ ಬ್ರಹ್ಮಜ್ಞಾನೋಪದೇಶವನ್ನು ಮಾಡಲು ಅವರ ಮನಸ್ಸು ಸಮಾಧಾನವಾಯಿತು. ಪುನಃ ತನ್ನನ್ನು ಹುಡುಕಲಿಕ್ಕೆ ಬರುವಂಥ ಮಾಯೆಯನ್ನು ವಂಚಿಸಬೇಕೆಂದು ಅವರ ಸಮೀಪಕ್ಕೆ ಬರಲು ಅವನನ್ನು ಕಂಡು ಮಾಯೆಗೂ, ಅವಳ ಸಖಿಯರಿಗೂ ದರಿದ್ರನಿಗೆ ದ್ರವ್ಯದ ರಾಶಿಯೂ ರೋಗಿಗೆ ತಕ್ಕ ಔಷಧವೂ ದೊರೆದಂತೆ ಅತಿಶಯ ಆನಂದವಾಯಿತು. ಅವರು ಆತನನ್ನುದ್ದೇಶಿಸಿ “ತಮ್ಮ ಸಖಿಯರನ್ನುಹೀಗೆ ವಂಚಿಸಿ ಹೋಗುವದು ಅಲ್ಲಮನಿಗೆ ಸರಿಯಲ್ಲ. ಕಾಪಟ್ಯ ವರ್ತನೆಯು ಮೋಸುಗಾರರಿಗೆ ಮಾತ್ರ ಸಲ್ಲುವದಲ್ಲದೆ ಅಲ್ಲಮನಂಥ ಸುಂದರ ಸುಗುಣ ತರುಣನಿಗೆ ಉಚಿತವಾದದ್ದಲ್ಲ” ವೆಂದು ನಡಿಯಲು ಆ ಮಾತಿಗೆ ಅಲ್ಲಮನು “ನನಗೆ ಇಲ್ಲದ ಅಪವಾದವನ್ನು ಕೊಟ್ಟು ಮಾತಾಡತಕ್ಕದ್ದಲ್ಲ. ನಾನೆಂದೂ ಮಾಯೆಗೆ ಮೋಹಿಸಿ ಅವಳನ್ನು ಅಂಗೀಕರಿಸಿಲ್ಲ. ಅವಳೇ ನನ್ನ ಸ್ವಭಾವವನ್ನು ಗೊತ್ತು ಮಾಡಿಕೊಳ್ಳದೆ ನನ್ನ ಮೇಲೆ ಪ್ರೇಮವಿಟ್ಟರೆ ಅದಕ್ಕೆ ನಾನೇನು ಮಾಡಲಿ. ನಾನು ಸಾಕ್ಷಾತ್ಪರಮೇಶ್ವರನೂ, ನಿರಂಜನ ಮೂರ್ತಿಯೂ ಇರುವದರಿಂದ ಪ್ರತ್ಯಕ್ಷ ರತಿದೇವಿಯು ನನ್ನನ್ನು ವಶಮಾಡಿಕೊಳ್ಳಲಿಕ್ಕೆ ಬಂದಾಗ್ಯೂ ಅವಳಿಗೆ ನಾನು ಒಳಗಾಗತಕ್ಕವನಲ್ಲ. ಇಂತಹ ಮಾಯೆಯು ಪಾಡೇನು ?” ಎಂದು ಅನೇಕ ಬಗೆಯಿಂದ ಮಾಯೆಗೆ ತನ್ನ ಸ್ಥಿತಿಯನ್ನು ವರ್ಣಿಸಿದಾಗ್ಗೂ ಮಾಯೆಯು ಮದೋನ್ಮತ್ತಳಂತೆ ತನ್ನ ಪೌರುಷವನ್ನು ತಾನೇ ಹೊಗಳುತ್ತ ಮತ್ತೆ ನಮ್ರಭಾವದಿಂದ ತನ್ನ ಕಾಮವಾಸನೆಯನ್ನು ಪೂರ್ತಿಗೊಳಿಸುವದಕ್ಕಾಗಿ ದಯಮಾಡಿ ತನ್ನನ್ನು ಅಂಗೀಕರಿಸಬೇಕೆಂದು ಪುನಃ ಪುನಃ ಅಲ್ಲಮನಿಗೆ ಬೇಡಿಕೊಳ್ಳಲು ಅಲ್ಲಮನು “ಎನೇ ಮಾಯೆಯೆ, ಹೀಗೆ ಲಜ್ಜಾಹೀನಳಂತೆ ಮಾತಾಡುವದು ನಿನಗೆ ಶೋಭಿಸುವದೇ? ನಾನು ಕಾಮವೆಂಬ ಬಳ್ಳಿಗೆಶಸ್ತ್ರಸ್ವರೂಪನಾಗಿರುವೆನೆಂಬದು ನಿನಗೆ ಗೊತ್ತಿಲ್ಲವೇ? ಭ್ರಾಂತಿಷ್ಟನಾದವನು ತನ್ನ ತಲೆಗೆ ಒನಿಕೆಯನ್ನು ಸುತ್ತು ಎಂದು ಮಾತಾಡುವಂತೆ; ನಾನು ನಿನ್ನನ್ನು ಅಂಗೀಕರಿಸಬೇಕೆಂದು ಅನ್ನುವಿ. ಇದರಿಂದ ನಿನಗೇನೂ ಪ್ರಯೋಜನವಾಗದು. ವಿಷಯೋಪಭೋಗವು ಪ್ರಥಮದಲ್ಲಿ ಸವಿಯಾಗಿ ತೋರುವದು. ವಿಷಪ್ರಾಯವಾದ ಹೂವಿನ

ಹಾರ ಗಂಧ ಮೊದಲಾದವುಗಳ ಮೇಲೆ ಮೊದಲು ಪ್ರೀತಿಯು ಹುಟ್ಟುವದು. ಮೂರ್ಖರು ಅದರಲ್ಲಿ ಬಿದ್ದು ವಿಷಯಗಳನ್ನಂಗೀಕರಿಸಿ ಅನಂತರ ನಾಶಹೊಂದುವರು. ಆದರೆ ಶಿವರೂಪದಲ್ಲಿ ಮಗ್ನರಾದವರು ಎಂದೂ ನಾಶಹೊಂದುವದಿಲ್ಲ. ಎಷ್ಟೋ ಜನರು ಯೋಗ ತಂತ್ರದಲ್ಲಿ ಹೇಳಿದ ಮೇರೆಗೆ ದೀಕ್ಷೆಯನ್ನು ಹೊಂದಿದಾಗ್ಗ್ಯೂ, ಕೆಟ್ಟ ಪರಿಣಾಮಕ್ಕೀಡು ಮಾಡುವಂಥ ವಿಷಯ ಸುಖಗಳನ್ನು ತ್ಯಜಿಸಲು ಸಮರ್ಥರಾಗುವದಿಲ್ಲ. † ಮತ್ತು ವಿಷಯ ಸುಖಗಳನ್ನು ಬಿಟ್ಟಿರುವದು ಅಸಕ್ಯವೆಂದು ತಮ್ಮ ಅನುಭವದಮೇಲಿಂದ ಮಾತ್ರ ಹೇಳುತ್ತಾರೆ. ಇಂಥವರು ನನಗೆ ಸಲ್ಲರು. ಉರಿಯುವ ಅಗ್ನಿಯಲ್ಲಿ ತುಪ್ಪವನ್ನು ಚಲ್ಲಲು ಅದು ಮೊದಲಿಗಿಂತಲೂ ಹೆಚ್ಚಾಗಿ ಪ್ರಜ್ವಲಿಸುವಂತೆ, ವಿಷಯೋಪಭೋಗದಿಂದ ವಿಷಯವಾಸನೆಯು ಕಡಿಮೆಯಾಗದೆ ಪ್ರತಿಯಾಗಿ ಹೆಚ್ಚುತ್ತ ಹೋಗುತ್ತದೆ. ಆದ್ದರಿಂದ ಮೂರ್ಖಳೆ, ವಿಷಯ ಸುಖಕ್ಕೆ ಮನಸ್ಸು ಹಾಕಬೇಡ. ಆ ಕ್ಷುದ್ರ ವಿಷಯೋಪಭೋಗದಿಂದ ನಿನಗೆ ತಿಲಮಾತ್ರ ಸುಖವುಂಟಾಗುವದಿಲ್ಲ. ಉನ್ಮತ್ತನಾದವನೊಬ್ಬನು ತಾನಿರುವ ಮನೆಯನ್ನು ಸುಟ್ಟರೆ ಆತನಿಗೆ ನಿಲ್ಲಲು ನೆರಳಿರದಂತೆ ತಿಳಿಗೇಡಿಗಳು ವಿಷಯ ಸುಖದ ನಾದಕ್ಕೆ ಬಿದ್ದು ಆತ್ಮಾನಾತ್ಮ ವಿವೇಕವನ್ನು ನಾಶ ಮಾಡಿಕೊಂಡರೆ ಅವರು ಮಾಯಾ ಜಾಲದಿಂದ ಪಾರಾಗುವ ಬಗೆ ಹೇಗೆ ? ” ಎಂದು ಹಲವು ಪರಿಯಿಂದ ಹೇಳಿದನು.

ಮಾಯಾದೇವಿ “ ಅಲ್ಲಮಾ, ಈ ವೈರಾಗ್ಯದ ಸೋಗನ್ನು ತೆಗೆದು ಹಾಕಿ ಸುಮ್ಮನೆ ನನ್ನೊಡನೆ ವಿಷಯ ಸುಖೋಪಭೋಗಕ್ಕೆ ಸಿದ್ಧನಾಗು.

ಅಲ್ಲಮ—ಸ್ತ್ರೀಯೆ, ಸುಮ್ಮನೆ ಬಡಬಡಿಸಬೇಡ. ಸ್ತ್ರೀಜನ್ಮಕ್ಕೆ ಭೂಷಣವಾದ ನಾಚಿಕೆಯನ್ನು ತೊರೆಯಬೇಡ. ಸ್ತ್ರೀಯರಾದವರು ಮಾನಮರ್ಯಾದೆ ವಿನಯ ಲಜ್ಜೆ ಮುಂತಾದ ಸದ್ಗುಣಗಳಿಂದ ಕೂಡಿರಬೇಕು. ಕಾಮವಾಸನೆಯು ಸ್ತ್ರೀಯರಿಗೆ ಮುಖ್ಯವಿಚಾರ ಕಾರ್ಯವಲ್ಲ. ಸೌಮ್ಯ ವರ್ತನೆಯೇ ಅವಳಿಗೆ ಆದ್ಯ ಕರ್ತವ್ಯವಾಗಿದೆ. ಲೋಕದಲ್ಲಿ ಸ್ತ್ರೀಯರ ಸದ್ವರ್ತನೆಯೇ ದೇಶೋನ್ನತಿಯ ಮುಖ್ಯ ಕುರುಹಾಗಿದೆ. ಸ್ತ್ರೀಯರ ವರ್ತನೆಯಲ್ಲಿ ಶಿಥಿಲತೆಯುಂಟಾಗಲು ಆದರಿಂದ

† ಟೀಪು– ಇದು ದೀಕ್ಷೆಯ ತಪ್ಪಲ್ಲ. ಶಿಷ್ಯನ ಮನೋವೃತ್ತಿಯನ್ನೂ ಆತನ ವೈರಾಗ್ಯ ಸಂಪನ್ನತೆಯನ್ನೂ ಲಕ್ಷೀಕರಿಸದೆ ಕಂಡವರಿಗೆ, ಗುರುಗಳೆನ್ನುವವರು ದೀಕ್ಷೆಯನ್ನು ಕೊಡುವದರಿಂದ ಇಂತಹ ಅನಾಚಾರಗಳು ಉಂಟಾಗುವವು.

ಉದಾರ ವಂಶಕ್ಕೆ ಭಂಗವುಂಟಾಗಿ, ಸಮಾಜಕ್ಕೆ ಸಾಂಕರ್ಯ ದೋಷವು ತಗಲಿ, ಅದು ಕ್ರಮೇಣ ಹೀನ ದೆಶೆಗೆ ಬರುವದು. ಅದ್ದರಿಂದ ಮಾಯೆ, ನೀನು ರಾಜ ಕನ್ನಿಕೆಯಿದ್ದು ನಿನ್ನ ತವರ ಮನೆಗೆ ಕಲಂಕವನ್ನುಂಟು ಮಾಡುವಂಥ ಕಾಮವಾಸನೆಗಳನ್ನು ಮನಸ್ಸಿನಿಂದ ಕಿತ್ತು ಹಾಕಿ, ನನ್ನ ವಿಷಯವಾದ ಹಂಬಲವನ್ನು ಬಿಟ್ಟು, ನಿರ್ಮಲ ಚಿತ್ತದಿಂದ ಶಿವಪೂಜಾಶಿವಧ್ಯಾನ ಮುಂತಾದ ಪವಿತ್ರ ಕ್ರಿಯೆಗಳಲ್ಲಿ ನಿನ್ನ ಮನಸ್ಸನ್ನು ನೆಲೆಗೊಳಿಸು.

ಮಾಯೆ—ಮನುಷ್ಯನು ಯಾವದೇ ರೀತಿಯಿಂದ ಶಿವಪೂಜೆಯನ್ನು ಮಾಡಲು ಅತನ ಇಷ್ಟಸಿದ್ಧಿಯುಂಟಾಗುವದೆಂದು ಹೇಳುವದೆಲ್ಲ ಸುಳ್ಳು. ಯಾಕೆಂದರೆ, ಅಲ್ಲಮನು ನನಗೆ ಪತಿಯಾಗಬೇಕೆಂದು ನಾನು ಶಿವಪೂಜೆಯನ್ನು ಅನೇಕ ಮಾಸಗಳವರೆಗೂ ಮಾಡುತ್ತ ಬಂದರೂ, ನನ್ನ ಮನೋರಥವು ಕೈಗೂಡದೆ ಪ್ರತಿಯಾಗಿ ಅದರಿಂದ ದುಃಖವೇ ಹೆಚ್ಚುತ್ತಲಿದೆ. ಅದ್ದರಿಂದ ಶಿವಪೂಜೆಯೂ ನಿರರ್ಥಕ ಕಾರ್ಯ. ಅದರ ವಿಷಯವಾಗಿ ನನಗೇನು ನೀನು ಹೇಳಬೇಡ.

ಅಲ್ಲಮ— ಸ್ತ್ರೀಯಳೆ, ಪರ್ವತವನ್ನೇ ಧನುಸ್ಸಾಗಿ ಮಾಡಿದ, ಸರ್ಪಾಲಂಕಾರ ಭೂಷಿತನಾದ ಆ ಪರಮಾತ್ಮನನ್ನು ಗೊತ್ತಿಲ್ಲದೆ ಸುಮ್ಮಸುಮ್ಮನೆ ನಿಂದಿಸಬೇಡ. ಇದರಿಂದ ನಿನಗೆ ಪಾಪ ತಟ್ಟುವದು. ನಿನ್ನ ನಿಂದೆಯಿಂದ ಅವನ ಮಹತ್ವಕ್ಕೆ ಎಳ್ಳಷ್ಟು ಕೊರತೆಯುಂಟಾಗದು. ಯಾರು ಸ್ವಭಾವಜನ್ಯವಾದ ಕಾಮಕ್ರೋಧಾದಿ ಶತ್ರುಗಳನ್ನು ಜಯಿಸಿ ನಿರ್ವಿಷಯರಾಗಿ ನೇಮದಿಂದ ಶಿವಪೂಜೆಯನ್ನು ಮಾಡುವರೋ ಅವರಿಗೆ ಮಾತ್ರ ಪರಮೇಶ್ವರನು ಸಂಪೂರ್ಣವಾದ ಸುಖಸಂತೋಷಗಳನ್ನು ಒದಗಿಸಿಕೊಡುವನು. ಆದರೆ ಯಾರು ತಾಮಸ ಸ್ವಭಾವವುಳ್ಳವರಾಗಿ ತಮ್ಮ ಮನಸ್ಸಿಗೆ ಬಂದಂತೆ ಶಿವೋಪಾಸನೆಯನ್ನು ಮಾಡುವರೋ ಅಂಥವರ ಅಂಗಹೀನ ಪೂಜೆಯಿಂದ ಅವರ ಮನೋರಥವು ಸಿದ್ಧಿಸುವದಿಲ್ಲ. ಹಾಗಾದಕೂಡಲೇ ನೀಚರು ದೇವಾಧಿ ದೇವನಾದ ಮಹಾದೇವನನ್ನು ನಿಂದಿಸುತ್ತಾರೆ. ಅದ್ದರಿಂದ ಎಲೈ ಮರುಳೆ, ಈ ನಿಂದೆಯಿಂದ ನಿನಗೆ ಬರುವದೇನು? ಅವಿಚಾರ ಶಿರೋಮಣಿಯಾದ ಮಾಯೆ, ನೀನೆತ್ತ? ಪೂರ್ಣ ವೈರಾಗ್ಯಶೀಲನಾದ ಸಚ್ಚಿದಾನಂದ ಸ್ವರೂಪನಾದ ನನ್ನ ಸಂಬಂಧವೆತ್ತ! ಅದ್ದರಿಂದ ನೀನು ನಿನ್ನ ಪಟ್ಟಣಕ್ಕೆ ತಿರುಗು. ನಾನು ದೃಢ ಮನಸ್ಸಿನವನು. ಒಮ್ಮೆ ಅಂದ ಮಾತನ್ನು ಎಂದೂ ತಿರುಗಿಸುವವನಲ್ಲ. ಹಾಗೂ ನಮ್ಮಂಥ ವೈರಾಗ್ಯ ಸಂಪನ್ನರು ನಿನ್ನ ಕಾಮಾತುರ ಕಾರ್ಯಕ್ಕೆ ಹ್ಯಾಗೆ ಒಪ್ಪುವರು? ಹಾಲಿನಲ್ಲಿ ಹೆಪ್ಪು ಹಾಕುವದರಿಂದ ಮೊಸರಾಗುವದು. ಆದರೆ ಒಮ್ಮೆ ಮೊಸರಾದ ನಂತರ ಅದು ಏನು ಮಾಡಿದರೂ ಹಾಲಾಗದು. ಅಜ್ಞಾನಿಗಳು ಮಾತ್ರ ನಿನ್ನ ಕಪಟೋಕ್ತಿಗಳಿಗೆ ಮೋಹಿತರಾಗುವದಲ್ಲದೆ ನಮ್ಮಂಥ

ವರು ಹಾಗ್ಯಾದರು ? ಇಂತಹ ಸುವಿಚಾರ ಸಂಪನ್ನವಾದ ಅಲ್ಲಮನ ಮಾತನ್ನು ಕೇಳಿ ವಿಮಲೆಯು, ಆತನು ವೈರಾಗ್ಯದಲ್ಲಿ ಪರಿಪೂರ್ಣನಿರವದನ್ನು ಮನಗಂಡಾಗೂ ತನ್ನ ಸಖಿಯಳ ಹಿತಕ್ಕಾಗಿ ಅಲ್ಲಮನನ್ನು ಕುರಿತು "ಎಲೈ ಕರುಣಾಶೀಲನೆ, ಮಾಯೆಯನ್ನು ಅಂಗೀಕರಿಸಿ ಅವಳನ್ನು ರಕ್ಷಿಸು. ಇದರಿಂದ ನಿನ್ನ ಕೀರ್ತಿಗೆ ಏನೂ ಕಲಂಕವುಂಟಾಗಲಾರದು. ನಿನಗೂ ಮಾಯೆಗೂ ಸಂಗವುಂಟಾಗಲು ಪಾರ್ವತೀಪರಮೇಶ್ವರರಿಗೆ ಆನಂದವಾಗುವದು." ಎಂದು ಕೈಜೋಡಿಸಿ ಬೇಡಿಕೊಂಡಳು. ಅದಕ್ಕೆ ಅಲ್ಲಮನು ಒಡಂಬಡದಿರಲು ಪುನಃ ವಿಮಲೆಯು— "ಎಲೈ ಶ್ರೇಷ್ಠನಾದ ಅಲ್ಲಮನೆ, ಪರಮೇಶ್ವರನು, ಅಲ್ಲಮನು ಮಾಯೆಗೆ ವಶವಾಗತಕ್ಕವನಲ್ಲವೆಂತಲೂ, ಪಾರ್ವತಿಯು, ಮಾಯೆಯು ಅಲ್ಲಮನಿಗೆ ವಶವಾಗತಕ್ಕವಳಲ್ಲವೆಂತಲೂವಾದ ವಿವಾದ ಮಾಡಿರಲು ಈಗ ನೀನು ಮಾಯೆಗೆ ಒಳಗಾಗುವದರಿಂದ ಪರಮೇಶ್ವರನಿಗೆ ಅಪಜಯವಾಗಿ ಅವನಿಗೆ ಅಪ್ರತಿಷ್ಠೆಯಾದೀತೆಂದು ತಿಳಿಯಬೇಡ. ಯಾಕಂದರೆ ತಾನು ಸೋತರೂ ಚಿಂತೆಯಿಲ್ಲ, ತನ್ನ ಹೆಂಡತಿಗೆ ಜಯವಾಗಬೇಕೆಂದು ಬಹಳ ಮಾಡಿ ಗಂಡರ ಆಶೆಯು ಇದ್ದೇ ಇರುವದು. ಹೆಂಡತಿಗೆ ಜಯವನ್ನು ಬಯಸುವದು ಗಂಡನಿಗೆ ಭೂಷಣವು. ಅಲ್ಲಮನೇ ನೀನು ವಿಚಾರವಂತನಿರುವಿ ನಾನು ಹೇಳಿದ್ದು ನಿಜವಿರುವದೋ ಹ್ಯಾಗೆಂಬದನ್ನು ಚನ್ನಾಗಿ ತಿಳಿದು ನೋಡಿ ನನ್ನ ಸಖಿಯಳಾದ ಮಾಯೆಯನ್ನು ರಕ್ಷಿಸು.

ಅಲ್ಲಮ—ವಿಮಲೆ, ಈ ಮಾಯೆಯು ಅಜ್ಞಾನದಿಂದ ಮೂರ್ಖಳಾಗಿರುವಳು. ಕಾಮಾತುರದಿಂದ ಲಜ್ಜೆಯನ್ನು ಬಿಟ್ಟಿರುವ ಕಾರಣ ಸ್ವಪ್ನದಲ್ಲಿ ಕೂಡ ಇವಳಿಗೆ ವಿಷಯ ಸುಖವೇ ತೋರುವದು. ಅದೇ ಇವಳಿಗೆ ಪರಮಾರ್ಥಪದವಾಗಿದೆ. ಸಮುದ್ರದ ಉಪ್ಪು ನೀರು ಒಂದು ವೇಳೆ ಶೀಯಾಗಬಹುದು; ಮೇರು ಪರ್ವತದ ಶಿಖರವು ಒಂದು ವೇಳೆ ಬಳ್ಳಿಯಂತೆ ಭೂಮಿಯಮೇಲೆ ಪಸರಾಯಿಸಬಹುದು; ಆದರೆ ಮಾಯೆಗೆ ಮಾತ್ರ ಆತ್ಮಸ್ವರೂಪಜ್ಞಾನವು ಎಂದೂ ಉದಯವಾಗದು.

ವಿಮಲೆ—ದೇವರ ಚಿತ್ತವೂ ಸ್ತ್ರೀಯರ ದೈವವೂ ಯಾರಿಂದಲೂ ತಿಳಿಯಲಾಗುವದಿಲ್ಲ. ಅಜ್ಞಳಾದ ನನ್ನ ಪಾಡೇನು! ಎಂದು ನುಡಿದು ಸುಮ್ಮನಾದಳು ಆದರೆ ಅಲ್ಲಮನು ಮಾಯೆಯಲ್ಲಿ ಸಂಸಾರ ವಿಷಯವಾಗಿ ವೈರಾಗ್ಯಭಾವವು ಹುಟ್ಟಬೇಕೆಂದು ಅನೇಕ ರೀತಿಯಿಂದ ಉಪದೇಶ ಮಾಡಿದರೂ, ಅವಳು ಅದನ್ನು ಲಕ್ಷಿಸದೆ ಅಲ್ಲಮನ ಸಮೀಪಕ್ಕೆ ಬಂದು—"ಅಲ್ಲಮನೆ, ಕಪಟಿಯಂತೆ ನೀನು ಸ್ವೇಚ್ಛೆಯಿಂದ ಎಲ್ಲಿ ಹೋದಾಗ್ಯೂ ನಾನೇನೂ ನಿನ್ನನ್ನು

ಬಿಡುವದಿಲ್ಲ. ನನ್ನ ಬಲದ ಜೋರಿನಿಂದ ನಿನ್ನನ್ನು ಹಿಡಿದು ನನ್ನ ಪಟ್ಟಣಕ್ಕೆ ಒಯ್ಯುವೆನು. ಇದಕ್ಕಾಗಿ ನನ್ನ ಪ್ರಾಣ ಹೋದರೂ ಹೋಗಲಿ ನಿನ್ನ ಕೀರ್ತಿಯೇ ಜಗತ್ತಿನಲ್ಲಿ ಹಬ್ಬಲಿ. ಪಾರ್ವತೀದೇವಿಯ ಪ್ರತಿಜ್ಞೆಯನ್ನು ಪೂರ್ಣ ಮಾಡದಿದ್ದರೆ ನಾನು ಶಾಂಬರೀ ಮಾಯೆಯೇ ಅಲ್ಲ,"ವೆಂದು ಶಪಥ ಮಾಡಿದಳು.

ಅಲ್ಲಮ—"ಎಲ್ಲೈ ಮಾಯೆಯೆ, ನೀನು ಈ ಮೊದಲು ಮನ್ಮಥನ ಬಾಣಗಳಿಂದ ಸಂತಾಪಿಸಲ್ಪಟ್ಟು ನಿನ್ನ ಮನೆಯಲ್ಲಿ ನನ್ನನ್ನು ಆಲಿಂಗಿಸಬೇಕೆಂದು ನನ್ನ ದೇಹವನ್ನು ಮುಟ್ಟ ಬಂದಾಗ್ಗೆ ಅದರ ಸ್ಪರ್ಶವಾಯಿತೇ? ಇದನ್ನು ನೀನು ಸ್ಮರಣೆಗೆ ತಂದುಕೊಂಡು ಸುಮ್ಮನೆ ನಿನ್ನ ಪಟ್ಟಣಕ್ಕೆ ಹೊರಟು ಹೋಗು" ಅಲ್ಲಮಪ್ರಭುವು ಅವಳಿಗೆ ಅನೇಕ ಪ್ರಕಾರದಿಂದ ಬುದ್ಧಿವಾದ ಹೇಳಿದರೂ ಅದಕ್ಕೆ ಕಿವಿಗೊಡದೆ ಮೊದಲೆ ಮಾಯೆಯು, ಕೇಳುವದೇನು! ಮೂರ್ಖಳಂತೆ ಸರ್ವಾಂತರ್ಯಾಮಿಯಾದ ಮತ್ತೂ ಪರಮೇಶ್ವರನಾದ ಅಲ್ಲಮಪ್ರಭುವನ್ನು ಆತುರದಿಂದ ಗಟ್ಟಿಯಾಗಿ ಹಿಡಿದುಕೊಳ್ಳಬೇಕೆಂದು ಪ್ರಯತ್ನಮಾಡುವಷ್ಟರಲ್ಲಿಯೇ ಅಲ್ಲಮನು ಮಾಯವಾದನು.

೫ನೆಯ ಅಧ್ಯಾಯ ಸಂಪೂರ್ಣ.

---



# ೬ನೇಯ ಅಧ್ಯಾಯ.



## ಭೂಲೋಕದಲ್ಲಿ ಪಾರ್ವತಿಯ ಸಾತ್ವಿಕ ಕಲೆಯೊದ ಮಹಾದೇವಿಯ ಅವತಾರ.



ಅಲ್ಲಮಪ್ರಭುವು ಗುಪ್ತವಾದ ಬಳಿಕ ಮಾಯೆಯು ದುಃಖ ಸಮುದ್ರದಲ್ಲಿ ಮುಳುಗಿ ದೈನ್ಯದಿಂದ ವಿಮಲೆಯನ್ನು ನೋಡಿ— "ವಿಮಲೆ, ನಾನು ಇನ್ನು ಮೇಲೆ ಪಾರ್ವತಿಯ ಬಳಿಗೆ ಹೇಗೆ ಹೋಗಲಿ? ನನ್ನ ಪ್ರತಿಜ್ಞೆಯು ಸಿದ್ಧಿಗೆ ಮುಟ್ಟದ್ದರಿಂದ ಪ್ರಾರ್ವತೀ ದೇವಿಗೆ ಎಷ್ಟು ಅಸಮಾಧಾನವಾಗುವದೋ? ಅಯ್ಯೋ! ನಾನು ಎಷ್ಟೆಷ್ಟು ರೀತಿಯಿಂದ ನಾಚಿಕೆಗೂ ಅಪಜಯಕ್ಕೂ ಗುರಿಯಾದೆನು! ಶಿವನ ಸಭೆಗೆ ಹೋಗುವ ಬಗೆ ಹೇಗೆ? ಪಾರ್ವತೀ ಸಭಾ ಮಂದಿರದಲ್ಲಿದ್ದ ಜನರು ನನ್ನನ್ನು ನೋಡಿ ನಗರೇ? "—ಎಂದು ಅನೇಕ ಪ್ರಕಾರದಿಂದ ಪ್ರಲಾಪಿಸುತ್ತ ಮೇಲಿಂದ ಮೇಲೆ ಹಾಹಾ ಎಂದು ಉಸುರು ಗರೆಯುತ್ತ ದುಃಖಾತಿರೇಕದಿಂದ ಮೂರ್ಛೆ ಹೊಂದಿದಳು. ಅದೇ ಸಮಯದಲ್ಲಿ ಅವಳ ತಂದೆ ತಾಯಿಗಳು ಅನೇಕ ಸೈನ್ಯದೊಂದಿಗೆ ತಮ್ಮ ಮಗಳನ್ನು ಹುಡುಕುತ್ತ ಮಾಯೆಯು ಮೂರ್ಛಿತಳಾಗಿ ಬಿದ್ದಿರುವ ಅರಣ್ಯವನ್ನು ಪ್ರವೇಶಿಸಿ ಅಲ್ಲಿ ತಮ್ಮ ಮಗಳನ್ನು ಕಂಡು ಅವಳನ್ನು ಎಬ್ಬಿಸಿ ಚೇತನಗೊಳಿಸಿ ತಮಗೆ ಹೇಳದೆ ಹೋದುದಕ್ಕಾಗಿಯೂ; ಲಜ್ಜಾಹೀನಳಾಗಿ ಮೃದಂಗ ಬಾರಿಸುವವನ ಬೆನ್ನು ಹತ್ತಿ ಬಂದುದಕ್ಕಾಗಿಯೂ, ತಮಗಾದ ಅಪಮಾನವನ್ನು ಅವಳಿಗೆ ಆಡಿ ತೋರಿಸಿ ಶಿಟ್ಟು ಮಾಡಿ ಅವಳನ್ನು ತಮ್ಮ ಮನೆಗೆ ಕರೆದೊಯ್ಯಬೇಕೆಂದು ಯತ್ನ ಮಾಡಲು ವಿಮಲೆಯು—"ಮಹಾರಾಜನೆ ಮಾಯೆಯು ನಿನ್ನ ಮಗಳೆಂದು ನೀನು ತಿಳಿದುಕೊಂಡಿರುವಿ. ನಿಜವಾಗಿ ಅವಳು ನಿನ್ನ ಮಗಳಲ್ಲ. ಪ್ರಾರ್ವತಿಯ ಶಾಂಬರೀ ಮೂರ್ತಿಯು. ಗೌರಿಯ ಅಗ್ರಹದ ಪ್ರತಿಜ್ಞೆಯುದೆಸೆಯಿಂದ ಅವಳು ತನ್ನ ಹಾವ

ಭಾವ ಸೌಂದರ್ಯಾತಿಶಯದಿಂದ ಅಲ್ಲಮಪ್ರಭುವನ್ನು ವಶಮಾಡಿಕೊಂಡು ಆತನನ್ನು ಕೈಲಾಸಕ್ಕೆ ತರುವೆನೆಂದು ಆ ಪಾರ್ವತಿಯ ಸಭೆಯಲ್ಲಿ ಶಪಥಮಾಡಿ ಬಂದಿರುವಳು. ಅದು ಈಗ ನಿರರ್ಥಕವಾದ್ದರಿಂದ ಪುನಃ ನಾವು ಕೈಲಾಸಕ್ಕೆ ಹೋಗುವೆವು. ಇನ್ನು ಮೇಲೆ ಇಲ್ಲಿರಲಿಕ್ಕೆ ನಮಗೆ ಯಾವ ಕಾರಣವೂ ಇಲ್ಲ"—ಎಂದು ಹೇಳುತ್ತ ಕ್ಷಣ ಮಾತ್ರದಲ್ಲಿಯೇ ತನು ದಿವ್ಯ ಸಾಮರ್ಥ್ಯದಿಂದ ಆಕಾಶಮಾರ್ಗವಾಗಿ ಕೈಲಾಸ ಪರ್ವತವನ್ನಡರಿದರು. ಮಮಕಾರರಾಜನೂ, ಮೋಹಿನೀ ರಾಣಿಯೂ ಅವನ್ನು ಕಂಡು ತಮ್ಮ ಮಗಳ ಮೇಲಿನ ಹಂಬಲದಿಂದ ದುಃಖಿಸುತ್ತಿರುವಾಗ ರಾಜನಗುರುವಾದ ಅಹಂಕಾರನು ಅಲ್ಲಿಗೆ ಬಂದು—"ಅರಸನೆ, ನೀನು ದುಃಖ ಮಾಡಲಿಕ್ಕೆ ಏನೂ ಕಾರಣವಿಲ್ಲ. ಶಿವನು ಜಗತ್ತಿಗೆ ರಕ್ಷಕನಾಗಿದ್ದಾನೆ. ಅವನಾಜ್ಞೆಯನ್ನು ಯಾರೂ ಮೀರಲಾರರು. ಯಾವದೋ ಒಂದು ನಿಮಿತ್ತದಿಂದ ಮಾಯೆಯು ನಿನ್ನ ಮನೆಯಲ್ಲಿ ಹುಟ್ಟಿದ್ದಳು. ಆ ಕಾರಣವು ತೀರಿದ ಕೂಡಲೆ ಅವಳು ನಿನ್ನನ್ನು ಬಿಟ್ಟು ಹೋದಳು. ಆದ್ದರಿಂದ ಶಿವಾಜ್ಞೆಯಮೇರೆಗೆ ಘಟಿಸಿದ ಕಾರ್ಯಕ್ಕಾಗಿ ದುಃಖಪಡುವ ಕಾರಣವಿಲ್ಲ, ಇದನ್ನು ವಿಮಲೆಯು ನಿನಗೆ ಮೊದಲೇ ಹೇಳಿರುವಳು. ರಾಜಶ್ರೇಷ್ಠನೆ, ನೀನು ಈವರೆಗೆ ಸನ್ಮಾರ್ಗವನ್ನು ಬಿಟ್ಟು ನಡೆದಿಲ್ಲ. ಮಾಯೆಯನ್ನು ಹುಡುಕಿ ತರಬೇಕೆಂದು ನೀನು ಈ ವನಕ್ಕೆ ಬಂದದ್ದೇ ತಪ್ಪು. ಆದರೂ ಅದಕ್ಕಾಗಿ ಅಸಮಾಧಾನಗೊಳ್ಳದೆ ನಿನ್ನ ರಾಜಧಾನಿಗೆ ತೆರಳು; ಇಲ್ಲದಿದ್ದರೆ ಪ್ರಜೆಗಳ ಮನಸ್ಸಿನಲ್ಲಿ ಏನಾದರೊಂದು ವಿಕಲ್ಪವು ಉತ್ಪನ್ನವಾಗಬಹುದು. ರಾಜನು ಸರ್ವ ಪ್ರಜಗಳ ತಂದೆಯೂ, ತಾಯಿಯೂ, ಬಂಧುವೂ ಆಗಿರುವನು. ದುರ್ಜನರನ್ನು ಶಿಕ್ಷಿಸಿ ಸಜ್ಜನರನ್ನು ರಕ್ಷಿಸುವ ಕಾರ್ಯದಲ್ಲಿ ತತ್ಪರನಾದವನೇ ರಾಜನು. ದುಷ್ಟನೂ ದುರ್ವ್ಯಸನಿಯೂ ರಾಜಧರ್ಮದಂತೆ ಪ್ರಜಾರಕ್ಷಣೆಯನ್ನು ಮಾಡುವದರಲ್ಲಿ ಅಸಮರ್ಥನೂ ಆದ ರಾಜನನ್ನು ಬಿಟ್ಟು ಪ್ರಜೆಗಳು ಧರ್ಮಿಷ್ಠನಾದ ಮತ್ತು ಧನಿಕನಾದ ಮತ್ತೊಬ್ಬ ರಾಜನನ್ನು ಆಶ್ರಯಿಸುವರು. ಆದ್ದರಿಂದ, ಅರಸನೆ, ನೀನು ನಿನ್ನ ಪಟ್ಟಣಕ್ಕೆ ತೀವ್ರವಾಗಿ ತೆರಳದ್ದಿರೆ ನಿನ್ನ ಮಂತ್ರಿ ಮೊದಲಾದವರು ನಿನ್ನನ್ನು ತ್ಯಜಿಸಿ, ಅನ್ಯ ರಾಜನನ್ನು ಆಶ್ರಯಿಸಬಹುದು. ಇದರಿಂದ ನಿನ್ನ ರಾಜ್ಯಕ್ಕೆ ನಾಶವುಂಟಾದೀತು." ಎಂದು ಅನೇಕ ತರದಿಂದ ಗುರುವು ಅವರಿಗೆ ಬುದ್ಧಿಹೇಳಿ ಅವರನ್ನು ಊರಿಗೆ ಕರಕೊಂಡು ಹೋದನು. ಅಲ್ಲಿ ಸಕಲ ವೈಭವದಿಂದ ರಾಜನನ್ನು ಸಿಂಹಾಸನದಮೇಲೆ ಕೂಡ್ರಿಸಿ ತನ್ನ ಆಶ್ರಮಕ್ಕೆ ಸಾಗಿದನು. ಬಳಿಕ ರಾಜನೂ ರಾಣಿಯೂ ನಿಶ್ಚಿಂತ ಮನಸ್ಕರಾಗಿ ಸಂತೋಷದಿಂದ ಪ್ರಜಾಪಾಲನೆಯನ್ನು ಮಾಡುತ್ತ ಸುಖವಾಗಿದ್ದರು.

ಇತ್ತ ವಿಮಲೆಯು ಮಾಯೆಯನ್ನು ಕೂಡಿಕೊಂಡು ಕೈಲಾಸವನ್ನು ಪ್ರವೇಶಿಸಿ ಪಾರ್ವತಿಯ ಸಮೀಪಕ್ಕೆ ಬರಲು, ಮಾಯೆಯು ತಲೆ ಬಾಗಿಸಿ ಅಂಗುಟದಿಂದ ನೆಲವನ್ನು ಚಿಮ್ಮುತ್ತ ನಾಚಿಕೆಯಿಂದ ನಿಂತುಕೊಂಡಳು. ಅದನ್ನು ಕಂಡು ಅಂಬಿಕಾದೇವಿಯು ಇವಳಿಂದ ತನ್ನ ಕಾರ್ಯವು ಸಿದ್ಧಿಸಲಿಲ್ಲವೆಂದು ತಿಳಿದು ದುಃಖಿತಳಾಗಿ ಶಿವನದರ್ಶನಕ್ಕೆ ಸಹ ಎರವಾದಳು. ಅದನ್ನು ಶಿವನು ತಿಳಿದು ತಾನೇ ಪಾರ್ವತಿಯಿದ್ದೆಡೆಗೆ ಬರಲು, ಅವಳು ಲಜ್ಜೆಯಿಂದ ತಲೆವಾಗಿ ಕೂತುಕೊಂಡಳು. ಅವಳ ಗರ್ವವನ್ನೂ ಅಜ್ಞಾನವನ್ನೂ ನಾಶಮಾಡಬೇಕೆಂಬ ಉದ್ದೇಶದಿಂದ ಪರಮೇಶ್ವರನು ಗಿರಿಜಾದೇವಿಯನ್ನು ಕುರಿತು "ಎಲೈ ಪಾರ್ವತಿಯೆ, ಸಹಸ್ರವಜ್ರಗಳನ್ನೊಡೆದು ಅಡಿಗೆಗೋಸುಗ ಬೆಂಕಿಯನ್ನು ಹುಟ್ಟಿಸಬಹುದು ; ಅತಿ ಭಯಂಕರವಾದ ಕೃಷ್ಣ ಸರ್ಪವನ್ನು ಕಯ್ಯಿಂದ ಹಿಡಿಯಬಹುದು; ಯಮನ ಕೋರೆದಾಡೆಗಳನ್ನು ಕೀಳಬಹುದು. ಆದರೆ ಪ್ರಭುದೇವರ ಮನಸ್ಸಿನಲ್ಲಿ ಕಾಮ ವಿಕಾರವನ್ನು ಯಾರೂ ಉಂಟು ಮಾಡಲಾರರು. ಅಲ್ಲಮನ ವೈರಾಗ್ಯವೆತ್ತ ! ಮಾಯೆಯ ವಿಷಯಾಭಿಲಾಷೆಯೆತ್ತ ! ಪೂರ್ವಾಪರ ವಿಚಾರ ಮಾಡದೆ ಹೆಮ್ಮೆಯಿಂದ ಪ್ರತಿಜ್ಞೆ ಮಾಡಿ ಅದು ವ್ಯರ್ಥವಾಗಲು ಲಜ್ಜೆಯಿಂದ ದುಃಖಕ್ಕೀಡಾದಿ. ಆದರೂ ಚಿಂತೆ ಮಾಡದೆ ನಿನ್ನ ಹೃದಯದಲ್ಲಿರುವ ಚಿತ್ಕಲೆಯಿಂದ ಕರ್ಮವಾಸನೆಯನ್ನು ಬಿಡಿಸಿ, ದೃಢವಾದ ಭಕ್ತಿ ವೈರಾಗ್ಯವನ್ನುಂಟು ಮಾಡಿ ಸ್ತ್ರೀ ರೂಪದಿಂದ ಅದನ್ನು ಪೃಥ್ವಿಯ ಮೇಲೆ ಕಳಿಸು; ಅಂದರೆ ಅವಳಿಗೆ ಅಲ್ಲಮಪ್ರಭುವು ನಿಶ್ಚಯವಾಗಿ ವಶವಾಗುವನು." ಎಂದು ನುಡಿಯಲು ಶಿವನ ಈ ನುಡಿಗಳನ್ನು ಕೇಳಿ ಪಾರ್ವತಿಯು ಸಂತುಷ್ಟ ಹೃದಯಳಾಗಿ ತನ್ನ ಪತಿಯ ಉಪಕಾರವನ್ನು ನೆನದು, ತನ್ನ ಸಾತ್ವಿಕ ಕಲೆಯನ್ನು ಭೂಮಿಗೆ ಕಳಿಸಿದಳು. ಇತ್ತ ಪರಮೇಶ್ವರನು ವೃಷಭೇಶ್ವರನಿಗೆ ಅಲ್ಲಮಪ್ರಭುವಿನಿಂದ ಶಿವಭಕ್ತಿಯನ್ನೂ ತತ್ವಜ್ಞಾನವನ್ನೂ ಅರಿತುಕೊಂಡು ಅದನ್ನು ಅಭಿವೃದ್ಧಿಗೊಳಿಸುವದಕ್ಕೋಸುಗ ಶಿವಭಕ್ತರ ವಂಶದಲ್ಲಿ ಜನಿಸಲಿಕ್ಕೆ ಹೇಳಿದನು. ಪರಶಿವನ ಅಪ್ಪಣೆಯಂತೆ ನಂದೀಶ್ವರನು ಬಸವನ ನಾಮದಿಂದ ಜಗತ್ತಿನಲ್ಲಿ ಉದಯವಾದನು. ಹಾಗೂ ಏಳು ನೂರೆಪ್ಪತ್ತು ಪ್ರಮಥರು ಶ್ರೀ ಬಸವೇಶ್ವರನಿಗೆ ಬೆಂಬಲವಾಗಿ ಮಲಿನವಾದ ಶಿವಭಕ್ತಿಯನ್ನು ಊರ್ಜಿತ ಸ್ಥಿತಿಗೆ ತರಬೇಕೆಂದು ಪೃಥ್ವಿಯಲ್ಲಿ ಅವತರಿಸಿದರು.

ಶಿವಾಜ್ಞೆಯ ಮೇರೆಗೆ ಪ್ರಮಥಗಣರಲ್ಲಿ ಮುಖ್ಯ ಮುಖ್ಯ ಪ್ರಮಥರು ಪಾಪರಹಿತರಾದ, ನಿರ್ಮಲರಾದ ವೀರಶೈವರಲ್ಲಿ ಜನ್ಮವೆತ್ತಿ ಅಸದೃಶವಾದ ತಮ್ಮ ಶಿವಭಕ್ತಿ ಸದ್ಗುಣ ಮುಂತಾದವುಗಳ ಮಹಿಮೆಯಿಂದ ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಪಡೆಯುವವರಾದರು. ಇತ್ತ ದಕ್ಷಿಣಪ್ರಾಂತದಲ್ಲಿ ಉಡುತಡೀ ಎಂಬ ಪಟ್ಟಣವಿದ್ದು,

ಅದರಲ್ಲಿ ವಿಮಲನೆಂಬ ವೀರಶೈವನೊಬ್ಬನಿದ್ದನು. ಆ ಸದ್ಗುಣಸಂಪನ್ನನಾದ ವಿಮಲನಿಗೆ ಪತಿಭಕ್ತಿ ಪರಾಯಣಳೂ ಸದಾಚಾರಸಂಪನ್ನಳೂ ಆದ ಸುಮತಿ ಎಂಬ ಸತಿಯಿದ್ದಳು. ಆ ದಂಪತಿಗಳು ಸದ್ಧರ್ಮಪರಾಯಣರೂ ಸುಶೀಲರೂ ಇದ್ದುದರಿಂದ ಪಾರ್ವತಿಯು ಕಳಿಸಿಕೊಟ್ಟ ಸಾತ್ವಿಕ ಕಲೆಯು ಸುಮತಿಯು ಗರ್ಭವನ್ನು ಪ್ರವೇಶಮಾಡಿ ಕಪ್ಪೆಚಿಪ್ಪಿನಲ್ಲಿ ಮುತ್ತು ಹುಟ್ಟುವಂತೆ ಹುಟ್ಟಿದಳು. ಆ ದಂಪತಿಗಳು ಪಾರ್ವತಿಯೇ ತಮ್ಮುದರದಲ್ಲಿ ಹುಟ್ಟಿದಳೆಂದು ತಿಳಿದು, ಅದೇ ದಿನ ಅವಳ ಹಣೆಯ ಮೇಲೆ ವಿಭೂತಿಯನ್ನಿಟ್ಟು, ಅವಳ ಕಂಠದಲ್ಲಿ ಇಷ್ಟಲಿಂಗ ಧಾರಣ ಮಾಡಿ ಕಿವಿಯಲ್ಲಿ ಗುಪ್ತವಾಗಿ ಪವಿತ್ರವಾದ ಪಂಚಾಕ್ಷರಿ ಮಂತ್ರವನ್ನುಪದೇಶಿಸಿ, " ಮಗಳೆ, ನೀನು ಶಿವಜ್ಞಾನ ಸಂಪನ್ನಳಾಗಿ ಶಿವಭಕ್ತಿಯನ್ನು ಮನಃಪೂರ್ವಕವಾಗಿ ಆಚರಿಸಬೇಕು. " ಎಂದು ಆಶೀರ್ವದಿಸಿ, ಅವಳಿಗೆ ಮಹಾದೇವಿ ಎಂಬದಾಗಿ ಹೆಸರಿಟ್ಟರು. ರೂಪವತಿಯಾದ ಮಹಾದೇವಿಯು ಬಾಲ್ಯಾವಸ್ಥೆಯನ್ನು ಕಳೆದು ತಾರುಣ್ಯಾವಸ್ಥೆಗೆ ಬಂದಳು. ಅದನ್ನು ಕಂಡು ಅವಳ ತಂದೆ ತಾಯಿಗಳು ಅವಳ ಗುಣ, ರೂಪ, ವಯಸ್ಸು, ಸ್ವಭಾವ, ಕುಲ ಮುಂತಾದವುಗಳಿಗೆ ಯೋಗ್ಯನಾದ ಪತಿಯು ಯಾವಾಗ್ಗೆ ದೊರಕುವನೆಂಬ ಚಿಂತೆಯಲ್ಲಿ ಮುಳುಗಿದ್ದರು.

ಆ ಸಮಯದಲ್ಲಿ ಉಡುತಡೀ ನಗರಕ್ಕೆ ಅರಸನಾದ ಕೌಶಿಕ ಮಹಾರಾಜನು ಆನೆಯಮೇಲೆ ಏರಿ ಉನ್ಮತ್ತನಾಗಿ ನಗರದೊಳಗಿಂದ ಹೋಗುವಾಗ, ಒಂದು ಮನೆಯ ಮೇಲುಪ್ಪರಿಗೆಯಮೇಲೆ ನಿಂತುಕೊಂಡು ನೋಡುತ್ತಿದ್ದ ಮಹಾದೇವಿಯನ್ನು ಕಂಡು ಕಾಮಾತುರನಾಗಿ ಕೂಡಲೆ ಮೂರ್ಛೆಹೊಂದಿದನು. ಬಳಿಕ ಸ್ವಲ್ಪ ಹೊತ್ತಿನಮೇಲೆ ಚೇತರಿಸಿಕೊಂಡು ತನ್ನ ಮನೆಗೆ ತಿರುಗಿ ಬಂದು, ಮದನಬಾಣಗಳಿಂದ ಪೀಡಿತನಾಗಿ ಬಹಳ ವ್ಯಾಕುಲಪಡಹತ್ತಿದನು. ತಾನು ನೋಡಿದ ಕನ್ಯೆಯು ವೀರಶೈವರಾದ ವಿಮಲ ಸುಮತಿಯರ ಮಗಳೆಂದು ತಿಳಿದು, ಅವರಿಗೆ ಹಣ ಹಾಗೂ ರಾಜ್ಯ ಮುಂತಾದ ಹಲವು ತರದ ಆಶೆಗಳನ್ನು ತೋರಿಸಿ, ಅವರ ಮಗಳನ್ನು ತನಗೆ ಲಗ್ನ ಮಾಡಿಕೊಡುವಂತೆ ತಿಳಿಸಲು ತನ್ನ ಇಬ್ಬರು ದಾಸಿಯರನ್ನು ಅವರ ಮನೆಗೆ ಕಳಿಸಿಕೊಟ್ಟನು. ಆ ದಾಸಿಯರು ಬಂದು ಅವಳ ತಂದೆ ತಾಯಿಗಳಿಗೆ ಅವರ ಭಾವಿ ಸೌಭಾಗ್ಯೈಶ್ವರ್ಯಸ್ಥಿತಿಯನ್ನೂ ಮತ್ತು ಅವರ ಮಗಳಾದ ಮಹಾದೇವಿಗೆ ರಾಜನ ವಿವಾಹವಾದರೆ ದೊರಕುವ ರಾಣೀವಾಸ ಸೌಖ್ಯವನ್ನೂ ಕುರಿತು ಒಮ್ಮೆ ಮಧುರವಾದ ಮತ್ತೊಮ್ಮೆ ಭಯೋತ್ಪದವಾದ ಸಂಭಾಷಣೆಯಿಂದ ಅವರಿಗೆ ಬುದ್ಧಿವಾದ ಹೇಳಿದರೂ, ಅವರು ಅದಕ್ಕೆ ಸಮ್ಮತಿಸಲಿಲ್ಲ. ಒಂದು ವೇಳೆ ರಾಜನು ಈ ವಿಷಯದಲ್ಲಿ ದುರಾಗ್ರಹವುಳ್ಳವನಾದರೆ, ತಾವು ಕೂಡಲೆ ಆ ರಾಜ್ಯವನ್ನು ಬಿಟ್ಟು ಶಿವಯೋಗಿಗಳಿಂದ ಆಳಲ್ಪಡುವ ರಾಜ್ಯದಲ್ಲಿ ಹೋಗಿ ಇರುತ್ತೇ

ವೆಂದು ದಾಸಿಯರಿಗೆ ಖಂಡಿತವಾಗಿ ಹೇಳಲು ದಾಸಿಯರು ಸುಮತಿಯಕಡೆಗೆ ತಿರುಗಿ " ಏನಮ್ಮಾ ಸುಮತಿಯೆ, ನಮ್ಮ ರಾಜನು ಬಹು ಪರಾಕ್ರಮಶಾಲಿಯಾಗಿರುವನು. ಅವನು ನಿನ್ನ ಮಗಳನ್ನು ಬಲತ್ಕಾರದಿಂದ ತೆಗೆದೊಯ್ದರೆ ನೀನೇನು ಮಾಡುವಿ? ಇದನ್ನು ಚನ್ನಾಗಿ ವಿಚಾರಿಸಿ ನೋಡು. ಅರಸನ ಇಚ್ಛೆಯಂತೆ ನೀವು ನಡೆದರೆ ನಿಮ್ಮ ಬಾಳ್ವೆ. ಅದಕ್ಕೆ ವಿರೋಧವಾಗಿ ವರ್ತಿಸಿದಲ್ಲಿ ನೀವು ಸರ್ವಸ್ವೀನಾಶಹೊಂದುವಿರಿ. "— ಎಂದು ಗದರಿಸಿ ನುಡಿಯಲು, ಆ ದಂಪತಿಗಳು " ತಮ್ಮನ್ನು ರಕ್ಷಿಸತಕ್ಕವನು ಶಂಕರನೊಬ್ಬನು. ಆತನು ಸರ್ವ ಸಾಕ್ಷೀಭೂತನಾಗಿರುವನು. ಆ ಪರಶಿವನು ಮಾಡಿದಂತಾಗಲಿ. ತಾವೇನೂ ಈ ದುಷ್ಟ ಕಾರ್ಯಕ್ಕೆ ಸಮ್ಮತಿ ಕೊಡುವದಿಲ್ಲೆಂದು ನಿರ್ಭೀತರಾಗಿ ಹೇಳಲು, ಪುನಃ ದಾಸಿಯರು " ಹಾಗಾದರೆ ಈ ವಿಷಯದಲ್ಲಿ ನಿಮ್ಮ ಮಗಳ ಅಭಿಪ್ರಾಯವೇನಿದೆ ಎಂಬದನ್ನು ತಿಳಿದಾದರೂ ಹೇಳಬೇಕೆಂದು ದಂಪತಿಗಳಿಗೆ ಒತ್ತಾಯ ಮಾಡಲು, ಅವರು ಅದಕೊಪ್ಪಿ ದಾಸಿಯರನ್ನು ತಮ್ಮ ಮಗಳಿದ್ದೆಡೆಗೆ ಕರಕೊಂಡು ಬಂದರು. ದಾಸಿಯರು ಮಹಾದೇವಿಯನ್ನು ಕಂಡು ಅವಳಿಗೆ ತಮ್ಮ ಅರಸನ ಅಂತರ್ಗತ ಅಭಿಪ್ರಾಯವನ್ನೂ ಅವನ ಸೌಂದರ್ಯಾತಿಶಯವನ್ನೂ ಅವಳ ಭಾವೀ ಪಟ್ಟದ ರಾಣೀವಾಸವನ್ನೂ ಕುರಿತು ಬಹು ಚತುರತೆಯಿಂದ ಮಾತಾಡಲಾಗಿ, ಅದನ್ನೆಲ್ಲ ಕೇಳಿ ಮಹಾದೇವಿಯು " ನಾನು ಈ ವಿಷಯವಾಗಿ ರಾಜನೊಡನೆ ಮಾತಡದವಿನಾ ಏನೂ ಹೇಳುವದಿಲ್ಲೆಂದು ಅನ್ನಲು ಅವಳಿಚ್ಛೆಯಂತೆ ದಾಸಿಯರು ಅರಸನ ಭೆಟ್ಟಿ ಮಾಡಿಸಿದರು. ಆ ಸಮಯದಲ್ಲಿ ರಾಜನು—" ಎಲೌ ಮಹಾದೇವಿಯೆ, ನೀನು ಬೇಡಿದ್ದೆಲ್ಲವನ್ನು ನಾನು ಕೊಡಲಿಕ್ಕೆ ಸಿದ್ಧನಿರುವೆನು " ಎಂದು ಹೇಳಲು ಅದಕ್ಕೆ ಅವಳು " ಎಲೈ ರಾಜನೆ, ನಾನು ನಿನ್ನಿಂದ ಒಂದನ್ನು ಮಾತ್ರ ಕೇಳುತ್ತೇನೆ. ಅದನ್ನು ನೀನು ಅವಶ್ಯವಾಗಿ ಮಾಡಬೇಕು. ಅದರಂತೆ ನೀನು ಮಾಡದಿದ್ದರೆ ನಿನ್ನಿಚ್ಛೆಯಂತೆ ನಡೆಯದೆ ನಿನ್ನನ್ನು ಬಿಟ್ಟು ಸನ್ಯಾಸಿನೀ ವೇಷದಿಂದ ಸಂಚರಿಸುವೆನು " ಎಂದು ಆಡಲು, ರಾಜನುಹಾಗೇ ಆಗಲೆಂದು ಅವಳ ಮಾತಿಗೆ ಒಡಂಬಟ್ಟನು. ಬಳಿಕ ಅವಳು ಅರಸನ ಅಂತಃಪುರವನ್ನು ಪ್ರವೇಶ ಮಾಡಲಿಕ್ಕೆ ಸಿದ್ಧಳಾಗಲು ತಂದೆ ತಾಯಿಗಳು ತಮ್ಮ ಮಗಳು ಸುಶೀಲಳೂ, ಸುಗುಣಿಯೂ, ಶಿವಭಕ್ತಿಯುಕ್ತಳೂ ಆಗಿದ್ದುದರಿಂದ ಅವಳಿಂದ ಯಾವ ಪ್ರಕಾರದ ಅಯೋಗ್ಯ ವರ್ತನೆಯು ಘಟಿಸದೆಂದು ಸುಮ್ಮನಿದ್ದರು.

ಅನಂತರ ಮಹಾದೇವಿಯು ತನ್ನ ಶಿವಪೂಜೆಯನ್ನು ತೀರಿಸಿಕೊಂಡು ಉತ್ತಮೋತ್ತಮ ವಸ್ತ್ರಾಲಂಕಾರಗಳಿಂದ ಭೂಷಿತಳಾಗಿ ರಾಜನ ಸುವರ್ಣ ಖಚಿತವಾದ ಮಹಾಲಿಗೆ ಬಂದಳು. ರಾಜನಾದರೂ ಅವಳ ಬರುವಿಕೆಯನ್ನು ನಿರೀಕ್ಷಣ ಮಾ

ಡುತ್ತ ಕಾಮಕೇಳಿಗೆ ಬೇಕಾದ ಸ್ರಕ್ಚಂದನ ಮುಂತಾದ ಸರ್ವ ಸಾಮಗ್ರಿಗಳನ್ನು ಸಿದ್ಧಗೊಳಿಸಿಕೊಂಡು ಕೂತಿದ್ದನು. ಮಹಾದೇವಿಯು ರಾಜನ ಬಳಿಗೆ ಬಂದ ಕೂಡಲೆ ಅವನು ಕಾಮಾತುರದಿಂದ ಆವಳ ಅಂಗ ಸ್ಪರ್ಶ ಮಾಡಲಿಕ್ಕೆ ಹಾತೊರಿಯಲು ಮಹಾದೇವಿಯು “ ರಾಜನೆ ಮೊದಲು ನನ್ನೆದುರಿಗೆ ಮಾಡಿದ ಪ್ರತಿಜ್ಞೆಯಂತೆ ನೀನು ವರ್ತಿಸಿದರೆ ಮಾತ್ರ ನನ್ನ ಶರೀರ ಸ್ಪರ್ಶ ಮಾಡಲಿಕ್ಕೆ ಅಧಿಕಾರಿಯಾಗುವಿ. ಇಲ್ಲದಿದ್ದರೆ ಆಗಲಾರಿ ” ಎಂದು ದೂರದಲ್ಲಿಯೇ ನಿಂತುಕೊಂಡು ಹೇಳಲು ಅರಸನಾದರೂ ಹೆದರಿ ದೂರದಲ್ಲಿಯೇ ನಿಂತು ಸ್ತ್ರೀಯಳೆ ನಿನ್ನ ಮನೋಗತವನ್ನು ಶೀಘ್ರವಾಗಿ ಪ್ರಕಾಶಗೊಳಿಸಬೇಕೆಂದು ಬೇಡಿಕೊಂಡನು. ಅದಕ್ಕೆ ಮಹಾದೇವಿಯು “ ಅರಸನೆ, ನನ್ನಂತೆ ನೀನು ಶಿವಭಕ್ತನಾದರೆ ಮಾತ್ರ ನನ್ನ ಶರೀರಕ್ಕೆ ಕೈ ಹಚ್ಚಲು ಯೋಗ್ಯನಾಗುವಿ.” ಎಂದು ಖಂಡಿತವಾಗಿ ನುಡಿಯಲು ಅದನ್ನು ಕೇಳಿ ಅರಸನು– “ ಎಲೈ ಮನೋಹರೆ, ನಾನು ಶಂಕರನ ಭಕ್ತನಲ್ಲ. ಕಾಮನ ಭಕ್ತನಾಗಿದ್ದೇನೆ; ಆ ಮದನಾರಿಯಾದ ಶಿವನಲ್ಲಿ ನಾನು ಹ್ಯಾಗೆ ಭಕ್ತಿಯನ್ನು ಇಡಲಿ? ” ಎಂದು ಹೇಳಲು ಮಹಾದೇವಿಯು “ ಅಕಟಕಟಾ! ಜನರು ಎಷ್ಟು ಮೂರ್ಖರು! ಎಂದು ಮನದಲ್ಲಿ ಚಿಂತಿಸಿ “ ರಾಜನೆ, ಯಾರಲ್ಲಿ ಶಿವಭಕ್ತಿಯಿಲ್ಲವೊ ಅವರು ಸ್ನಾನಮಾಡಿ ಮೈಗೆ ಸುವಾಸಿಕ ವಸ್ತುಗಳನ್ನು ಪೂಸಿಕೊಂಡು ಉತ್ತಮವಾದ ವಸ್ತ್ರಗಳನ್ನುಟ್ಟು ಅಲಂಕಾರಗಳಿಂದ ತಮ್ಮ ಶರೀರವನ್ನು ಸುಶೋಭಿತವಾಗಿ ಮಾಡಿದಾಗ್ಯೂ ಕಟ್ಟಿಗೆಯ ಗೊಂಬೆಯಂತೆಯೇ ಕಾಣುವರು. ಆದ್ದರಿಂದ ನೀನು ಶಿವದೀಕ್ಷಾಸಂಪನ್ನನಾಗಿ ಇಷ್ಟಲಿಂಗವನ್ನು ಧರಿಸಿಕೊಂಡು ಶಿವಭಕ್ತಿಯುಕ್ತನಾಗದಿದ್ದರೆ ನಾನು ನಿನ್ನನ್ನು ಅಂಗೀಕರಿಸುವ ಬಗೆ ಹೇಗೆ? ನಿನ್ನ ವಚನವನ್ನು ನೀನು ಪಾಲಿಸಲಿಲ್ಲ. ಇನ್ನುಮೇಲೆ ನನ್ನ ಮನಬಲ್ಲಂತೆ ನಾನು ವರ್ತಿಸುವೆನು. ನನ್ನ ತನುವನ್ನೂ ಮನವನ್ನೂ ಸಂಪೂರ್ಣವಾಗಿ ಶಿವನಿಗೆ ಅರ್ಪಿಸಿದ್ದೇನೆ–” ಎಂದು ಆ ಸುಸ್ವರೂಪಳಾದ ಮಹಾದೇವಿಯು ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿದಳು. ರಾಜನು ಅವಳನ್ನು ಪ್ರೀತಿಸಿದರೂ ಅವಳು ಹೇಳಿದ ಮೇರೆಗೆ ಶಿವಭಕ್ತಿಯನ್ನು ಕೈಕೊಳ್ಳಲಿಕ್ಕೆ ಹಿಂಜರಿದನು. ಗೂಗೆಗೆ ಸೂರ್ಯ ಪ್ರಕಾಶವೂ ಮೂಕನಿಗೆ ಮಂಜುಳವಾದ ಗಾಯನವೂ, ನೊಣಕ್ಕೆ ಸುಗಂಧವೂ, ಶಿಟ್ಟಿನ ಮನುಷ್ಯನಿಗೆ ಶಾಂತತೆಯೂ, ಮೂಗಿಲ್ಲದವನಿಗೆ ಕನ್ನಡಿಯೂ, ರೋಗಗ್ರಸ್ತನಿಗೆ ಔಷಧವೂ ಸೇರದಿರುವಂತೆ, ವಿಷಯಲಂಪಟನಾದ ಕೌಶಿಕ ರಾಜನಿಗೆ ಮೋಕ್ಷಪ್ರದವಾದ ಶಿವಭಕ್ತಿಯು ರುಚಿಸಲಿಲ್ಲ. ಆದ್ದರಿಂದ ಮಹಾದೇವಿಯು ವಿಷಯಾಭಿಲಾಷೆಯನ್ನು ತೊರೆದು, ಶಿವಸ್ವರೂಪವನ್ನು ಚಿಂತಿಸಿ, ವೈರಾಗ್ಯಭಾವವನ್ನು ಮನದಲ್ಲಿ ದೃಢೀಕರಿಸಿ ರಾಜನ ಸಮ್ಮುಖದಲ್ಲಿಯೇ ತಾನು ಧರಿಸಿದ ವಸ್ತ್ರಾಲಂಕಾರಗಳನ್ನು ತ್ಯಜಿಸಿ

ಕಯ್ಯಲ್ಲಿ ಇಷ್ಟಲಿಂಗವನ್ನು ಹಿಡಿದು, ಭಸ್ಮೋದ್ಧೂಳಿತ ಕಾಯಳಾಗಿ, ರಾಹುವಿನ ಬಾಯಿಂದ ಹೊರಬಿದ್ದ ಚಂದ್ರಬಿಂಬದಂತೆ ರಾಜನರಮನೆಯಿಂದ ಹೊರಬಿದ್ದಳು. ಅದನ್ನು ನೋಡಿ ರಾಜನು ಗಾಬರಿಯಾದನು. ವಿಷಯ ವಾಸನೆಯು ಇಲ್ಲದಂತಾಯಿತು; ಮೋಹವು ಅಳಿದು ಹೋಯಿತು; ವಿವೇಕವು ಉದಯವಾಯಿತು. ತತ್ಕ್ಷಣದಲ್ಲಿಯೆ ತನ್ನ ಪ್ರತಿಜ್ಞಾಭಂಗದ ವಿಷಯವಾಗಿ ಚಿಂತೆ ಮಾಡುತ್ತ ಅವಳ ಅಗಾಧ ಸಾಮರ್ಥ್ಯಕ್ಕೆ ಬೆರಗಾಗಿ ಸ್ತಬ್ಧದಿಂದ ಕುಳಿತುಕೊಂಡನು.

ಇತ್ತ ಮಹಾದೇವಿಯು ರಾಜವಾಡೆಯಿಂದ ಹೊರಬಿದ್ದ ಒಳಿಕ ಅವಳ ವೈರಾಗ್ಯ ವೇಷವನ್ನು ನೋಡಿ ತಂದೆ ತಾಯಿಗಳೂ ನಂಟರಿಷ್ಟರೂ ಅವಳಿಗೆ ಶಿವ ಭಕ್ತಿಯನ್ನು ವಹಿಸಿಕೊಂಡು ತಮ್ಮ ಮನೆಯಲ್ಲಿರಲಿಕ್ಕೆ ಅನೇಕ ತರದಿಂದ ಪ್ರಾರ್ಥಿಸಿಕೊಂಡರು. ಅದಕ್ಕೆ ಅವಳು ಒಡಂಬಡದೆ "ನಾನು ನನ್ನ ಶರೀರವನ್ನು ಗುರುವಿಗೆ ನಿವೇದಿಸಿದ ಕಾರಣ ಆ ಗುರುವಿನ ಶೋಧನಾರ್ಥ ಸಂಚಾರ ಮಾಡಬೇಕಾಗಿದೆ. ಗುರುದರ್ಶನದಿಂದ ಶಿವಸಾರೂಪ್ಯ ಪದವಿಯು ದೊರೆಯುವದು." ಎಂದು ಹೇಳಲು ತಂದೆ ತಾಯಿಗಳಿಗೆ ಪರಮಾನಂದವಾಗಿ ತಮ್ಮ ಕುಲದಲ್ಲಿ ಇಂತಹ ಸುಪುತ್ರಿಯು ಹುಟ್ಟಿದ್ದರಿಂದ ತಾವು ಧನ್ಯರಾದೆವೆಂದು ಹಿಗ್ಗಿ ಅವಳನ್ನು ಬಿಟ್ಟು ಬಂಧುಗಳೊಡನೆ ಮನೆಗೆ ಬಂದರು. ಮಹಾದೇವಿಯಕ್ಕನು ಗುರುವನ್ನು ಕಾಣಬೇಕೆಂದು ಗಿರಿ ಗಹ್ವರಗಳಲ್ಲಿಯೂ, ನದೀ ತಟಾಕುಗಳಲ್ಲಿಯೂ, ಶಿವಾಲಯಗಳಲ್ಲಿಯೂ, ಭಯಂಕರವಾದ ಅಡವಿಗಳಲ್ಲಿಯೂ ಸಂಚರಿಸ ಹತ್ತಿದಳು.



# ೭ನೆಯ ಅಧ್ಯಾಯ.



## ಪ್ರಭುದೇವರು ಗೋಗಾಯನಿಗೆ ಲಿಂಗತತ್ವವನ್ನು ಬೋಧಿಸುವಿಕೆ.



ಯಾವ ಅಲ್ಲಮಪ್ರಭುವು ಭಕ್ತರ ಮನದಲ್ಲಿ ದಟ್ಟವಾಗಿ ವ್ಯಾಪಿಸಿಕೊಂಡಿರುವ ಅಜ್ಞಾನಾಂಧಕಾರವನ್ನು ನಾಶಮಾಡಿ, ಅವರಿಗೆ ಶಿವತತ್ವೋಪದೇಶವನ್ನು ಮಾಡುವದಕ್ಕಾಗಿ ಪ್ರೀತಿಯಿಂದ ನಿಜಾನಂದ ರೂಪದೇಹಧಾರಣಮಾಡಿದ್ದನೋ, ಆ ಗುರುವರ್ಯನು ನಿರಾಕಾರನಿದ್ದರೂ ಸ್ವೇಚ್ಛೆಯಿಂದ ಲೋಕಹಿತಕ್ಕಾಗಿ ದೇಹ ಧಾರಣಮಾಡಿ, ಅನೇಕ ಶಿವಯೋಗಿಗಳು ವಾಸಮಾಡಿದಂಥ ಮತ್ತು ಶ್ರೀಬಸವೇಶ್ವರನು ಮಂತ್ರಿಯಾಗಿ ಅಧಿಕಾರವನ್ನು ನಡಿಸುತ್ತಿದ್ದಂಥ ಕಲ್ಯಾಣ ನಗರಕ್ಕೆ ಹೋಗಬೇಕೆಂದು ಹೊರಟನು. ದಾರಿಯಲ್ಲಿ ಒಂದು ಉತ್ತಮವಾದ ಸರೋವರವೂ ಅದರ ಉಭಯ ಪಾರ್ಶ್ವಗಳಲ್ಲಿ ಫಲ ಪುಷ್ಪಗಳಿಂದ ಭರಿತವಾದ ವನವೂ ಕಂಗೊಳಿಸಿತ್ತು. ಆ ವನವನ್ನು ಸಂರಕ್ಷಿಸಿಕೊಂಡು ಒಬ್ಬ ಗೋಗನೆಂಬ ಶಿವಭಕ್ತನು ಇರುತ್ತಿದ್ದನು. ಆತನು ಶಿವಭಕ್ತಿಗೆ ಯೋಗ್ಯವಾದ ಸದಾಚಾರದಿಂದ ನಡೆದು ಇಷ್ಟಲಿಂಗದಲ್ಲಿ ವಿಶ್ವಾಸಉಳ್ಳವನಾಗಿ ತಾನು ಮಾಡುವ ಸರ್ವ ಕಾರ್ಯಗಳನ್ನು ಲಿಂಗಕ್ಕರ್ಪಿಸುತ್ತ, ಗುರು ಲಿಂಗ ಜಂಗಮರಾಧನೆಯಲ್ಲಿ ಸದಾ ತತ್ಪರನಾಗಿದ್ದನು. ಅಲ್ಲಮಪ್ರಭುವು ಸರೋವರದ ದಂಡಿಗೆ ಬಂದು ತಲ್ಪುವಷ್ಟರಲ್ಲಿ ಆ ಗೋಗನು ವನದಲ್ಲಿ ಬಾಳೆಯ ಅಗಿಗಳನ್ನು ಊರಬೇಕೆಂದು ಭೂಮಿಯನ್ನು ಅಗಿಯಲಿಕ್ಕೆ ಬೇಕಾದ ಸಾಧನಗಳನ್ನು ತಕ್ಕೊಂಡು ಬಂದು ತನ್ನ ಉದ್ಯೋಗಕ್ಕೆ ಅನುವಾದನು. ಆತನನ್ನು ನೋಡಿ ಅಲ್ಲಮನು ತನ್ನ ಮನಸಿನಲ್ಲಿ "ಅಕಟಾ! ಈ ಮನುಷ್ಯನು ಇಂತಹ ಉದ್ಯೋಗದಲ್ಲಿ ಸಿಲುಕಿ ಕಷ್ಟಪಡುತ್ತಿರುವನಲ್ಲಾ! ಜನರು ಶ್ರಮಬಟ್ಟು ಈ ಜನ್ಮದಲ್ಲಿ ಕಾರ್ಯಗಳನ್ನಾರಂಭಿಸುವರು, ಮತ್ತು ಅವುಗಳ ಫಲಗಳು ಮುಂದಿನ ಜನ್ಮದಲ್ಲಿ ಸಿಗಬೇಕೆಂದು ಇಚ್ಛಿಸುವರು. ಹೀಗೆ ಜನ್ಮಾರಭ್ಯ ಮರಣಾವಧಿ ಕೆಲಸಗಳನ್ನೆಸಗಿ ಸಾಯುವರು; ಪುನಃ ಹುಟ್ಟುವರು. ಈ ಭವಚಕ್ರದಲ್ಲಿ ಜೀವನಿಗೆ ಅನೇಕ

ಪ್ರಕಾರದ ಕಷ್ಟಗಳೂ ಯಾತನೆಗಳೂ ಬಂದೊದಗುವವು. ಅವನು ಅವೆಲ್ಲವುಗಳನ್ನು ಸಹಿಸಬೇಕಾಗುತ್ತದೆ. ಇಷ್ಟಾದರೂ ಈ ಸಂಸಾರ ಚಕ್ರದಿಂದ ಪಾರಾಗುವ ಉಪಾಯುವನ್ನು ಕಂಡು ಹಿಡಿದು ಮುಕ್ತನಾಗಬೇಕೆಂಬದಾಗಿ ಅವನಲ್ಲಿ ವಿಚಾರವೇ ಉಂಟಾಗುವದಿಲ್ಲ. ಆಹಾ! ಜೀವರ ಅಜ್ಞಾನವೆಷ್ಟು ಗಾಢವಾದುದು!!" ಎಂದು ಮನದಲ್ಲಿ ಚಿಂತಿಸಿ, ಆ ಗೋಗನಿಗೆ ಶಿವಭಕ್ತಿಯರಹಸ್ಯವನ್ನು ಅರುಹಿ ಆತನನ್ನು ಉದ್ಧರಿಸಬೇಕೆಂದು ಅವನ ಬಳಿಗೆ ಬಂದು ಶರಣಾರ್ಥಿ ಎನ್ನಲು, ಗೋಗಾರ್ಯನು ಪ್ರತಿಯಾಗಿ ಶರಣಾರ್ಥಿ ಮಾಡಿ, ಎಲ್ಲಿಂದ ಬಂದಿರಿ? ಎಲ್ಲಿಗೆ ಹೋಗುವಿರಿ? ಎಂದು ಪ್ರಭುದೇವರನ್ನು ಕೇಳಲು,

ಅಲ್ಲಮ— ಎಲೈ ಮನುಷ್ಯನೆ, ಶಿವಯೋಗಿಗಳು ಭಕ್ತಿ ವಿಶ್ವಾಸವಿಟ್ಟು ಶಂಕರನನ್ನು ಅನನ್ಯಭಾವದಿಂದ ಎಲ್ಲಿ ಪೂಜಿಸುತ್ತಾರೋ ಅಲ್ಲಿ ಮಾತ್ರ ನಾನು ಇರುತ್ತೇನೆ. ಅಂತಹ ಶಿವಯೋಗಿಗಳಿಂದ ಶಿವಭಕ್ತಿ ರೂಪವಾದ ಭಿಕ್ಷೆಯನ್ನು ಬೇಡಿಕೊಂಡು ಸಂಚರಿಸುತ್ತೇನೆ. ನನ್ನ ಹೆಸರು ಅಲ್ಲಮಪ್ರಭುವು. ನನಗೆ ಎಲ್ಲಿಯೂ ಒಂದು ಸ್ಥಾಯಿಕವಾದ ವಾಸಸ್ಥಳವಿಲ್ಲ. ನಾನು ತಪವನ್ನೂ ಬೇರೆ ಯಾವ ಸಾಧನವನ್ನೂ ಮಾಡುವದಿಲ್ಲ.

ಗೋಗಾರ್ಯ— ಎಲೈ ಪ್ರಭುವೆ, ನೀನು ಶ್ರೇಷ್ಠನೂ, ಪ್ರಸಿದ್ಧ ಪುರುಷನೂ ಇದ್ದು ಯಾವದೋ ಒಂದು ನಿಮಿತ್ತದಿಂದ ಮಾನವ ದೇಹಧಾರಣ ಮಾಡಿರುವಿ; ಮನುಷ್ಯರ ಇಂಗಿತವನ್ನು ಅರಿಯುವಿ. ಹೀಗಿದ್ದು ನಿರರ್ಥಕವಾಗಿ ಹೀಗೆ ಯಾಕೆ ಸಂಚರಿಸುವಿ? ಉತ್ತಮ ಸ್ವಭಾವದ ಮತ್ತು ಸದಾಚಾರ ಸಂಪನ್ನರಾದ ಭಕ್ತರು ಕೊಟ್ಟಂಥ ಧನದಿಂದ, ಗುರುಲಿಂಗ ಜಂಗಮರನ್ನು ಪೂಜಿಸಿ, ಅವರಿಂದ ಪ್ರಾಪ್ತವಾದ ಪ್ರಸಾದವನ್ನು ಭುಂಜಿಸಿ, ಅವರ ಸಹವಾಸದಲ್ಲಿರುವದು ನಿನಗೆ ಚನ್ನಾಗಿ ತೋರುವದಿಲ್ಲೇನು? ಇಷ್ಟು ದಿವಸ ಪರ್ಯಂತರ ನೀನು ಪೃಥ್ವಿಯಮೇಲೆ ತಿರುಗಿದಿ. ಇನ್ನು ಮುಂದಾದರೂ ಸಂಚರಿಸುವ ಉದ್ದೇಶದಲ್ಲಿರುವಿ. ಇದರಿಂದ ನಿನಗಾಗುವ ಲಾಭವೇನು?

ಅಲ್ಲಮ— (ಮುಗುಳುನಗೆಯಿಂದ) ಏನಯ್ಯಾ, ಇಷ್ಟು ಸ್ಪಷ್ಟವಾಗಿಯೂ, ಸರಳವಾಗಿಯೂ ಮಾತಾಡುವಂಥವನು ನೀನು ಯಾರು?

ಗೋಗಾರ್ಯ—ಎಲೈ ದಯಾಳುವಾದ ಪ್ರಭುವೆ, ನನ್ನ ವರ್ತನವು ಹೇಗಿರುವದೆಂಬುದನ್ನು ಹೇಳುತ್ತೇನೆ ದಯವಿಟ್ಟು ಕೇಳಬೇಕು, ನಾನು ನನ್ನ ಶರೀರವನ್ನು ಕಷ್ಟಪಡಿಸಿ ಅದರಿಂದ ದೊರೆತ ಧನದಿಂದ ಯೋಗ್ಯವಾಗಿ ಗುರು ಲಿಂಗ

ಜಂಗಮರ ಪೂಜೆಯನ್ನು ಮಾಡಿ, ಅವರಿಂದ ಪ್ರಾಪ್ತವಾದ ಪ್ರಸಾದವನ್ನು ಅಮೃತವೆಂದು ಭುಂಜಿಸುತ್ತೇನೆ. ಶಿವಧರ್ಮದಲ್ಲಿ ಹೇಳಿದ ಆಚರಣೆಯನ್ನೂ ಗುರೂಪದೇಶವನ್ನೂ ಶಿರಸಾವಹಿಸಿ ಅದರಂತೆ ವರ್ತಿಸುತ್ತೇನೆ. ಹೊಲದ ಉದ್ಯೋಗ ಮಾಡುತ್ತೇನೆ. ನಾನು ಅಜ್ಞಾನಿಯೂ ನಿನ್ನ ದಾಸನೂ ಆಗಿದ್ದೇನೆ ಆದ್ದರಿಂದ ನನಗೆ ಶಿವಧರ್ಮದ ರಹಸ್ಯವನ್ನು ಬೋಧಿಸಿ ಈ ಸಂಸಾರಸಾಗರದಿಂದ ನನ್ನನ್ನು ಪಾರಗಾಣಿಸು.

ಅಲ್ಲಮ—(ಆತನನ್ನು ನೋಡಿ ಕೃಪಾವಿಷ್ಟಮನಸ್ಕನಾಗಿ) ಎಲೈ ಗೋಗನೆ, ಶಿವಭಕ್ತರಿಗೆ ಭೂಮಿಯನ್ನು ಹರಗುವದು ಯುಕ್ತವಲ್ಲ. + ಕುಂಟ ಕುಡಗೋಲು ಮುಂತಾದ ಊಳಲಿಕ್ಕೆ ಬೇಕಾಗುವ ಆಯುಧಗಳು ಅವರಿಂದ ಉಪಯೋಗಿಸಲ್ಪಡತಕ್ಕವುಗಳಲ್ಲ. ಯಾಕಂದರೆ, ಹೊಲ ಹರಗೋಣ ಬಿತ್ತೋಣ ಮುಂತಾದ ಕಾರ್ಯಗಳನ್ನು ಮಾಡುವಾಗ ಅನೇಕ ಪ್ರಾಣಿಗಳ ಹಿಂಸೆಯು ಘಟಿಸುತ್ತದೆ. ಜೀವಹಿಂಸೆಯನ್ನು ಮಾಡುವ ಪ್ರಾಣಿಗಳ ಮೇಲೆ ಶಿವನು ಕೃಪೆಮಾಡುವದಿಲ್ಲ. ಶಿವಾನುಗ್ರಹವಿಲ್ಲದೆ ಮೋಕ್ಷವು ಲಭಿಸದು. ಶಿವಾನುಗ್ರಹವಿಲ್ಲದ ಮನುಷ್ಯನು ಸಂಸಾರ ಪಾಶದಲ್ಲಿ ಬಿದ್ದು ಪಶುತ್ವವನ್ನು ಹೊಂದುವನು. ನಿಜ ಕುಲೋತ್ಪನ್ನರಂತೆ ಶಿವಭಕ್ತಿಸಂಪನ್ನರಾದ ವೀರಶೈವರಲ್ಲಿ ಹುಟ್ಟಿದವರು ಹೊಲದ ಉದ್ಯೋಗವನ್ನು ಮಾಡುವದು ವಿಹಿತವಲ್ಲ. ಇತರ ಕಾಯಕವನ್ನು ಕೈಕೊಂಡು ಅದರಲ್ಲಿ ಪ್ರಮಾಣಿಕತನದಿಂದ ವರ್ತಿಸಿ ನ್ಯಾಯದಿಂದ ದ್ರವ್ಯಾರ್ಜನೆಯನ್ನು ಮಾಡಿ ಚರಿಸುವದು ಉತ್ತಮವು. ಹೀಗೆ ನ್ಯಾಯಮಾರ್ಗದಿಂದ ಗಳಿಸಿದ ದ್ರವ್ಯವನ್ನು ಗುರು ಲಿಂಗ ಜಂಗಮ ಸೇವೆಯಲ್ಲಿ ನಿಷ್ಕಾಮ ಮನಸ್ಸಿನಿಂದ ವ್ಯಯಮಾಡುವದು ವೀರಶೈವನಿಗೆ ಅತ್ಯಂತ ಶ್ರೇಯಸ್ಕರವಾದದ್ದು. ಪ್ರಪಂಚದಲ್ಲಿ ಅಭಿರಮಿಸುತ್ತಿರುವ ನಮ್ಮ ಚಿತ್ತವನ್ನು ಶಂಕರನ ಕಡಿಗೆ ತಿರುಗಿಸುವದರಿಂದ ಜನನ ಮರಣದ ಭಯವು ತಪ್ಪಿ ಕೈಲಾಸಪದವು ಪ್ರಾಪ್ತವಾಗುವದು. ಫಲಪ್ರಾಪ್ತಿಗಾಗಿ ಗುರುಲಿಂಗಜಂಗಮಾರಾ

---

ಟಿಪ್ಪಣಿ— + ಗೋಗಾರ್ಯನು ಲಿಂಗಾಂಗ ಸಾಮರಸ್ಯಜ್ಞಾನ ಸಂಪಾದನೆಯಲ್ಲಿ ವಿಶೇಷ ಮನಸ್ಸುಹಾಕದೆ ಒಕ್ಕಲತನದ ಕಡಿಗೆ ಹೆಚ್ಚು ಲಕ್ಷ್ಯಕೊಟ್ಟದ್ದರಿಂದ, ಇದರಿಂದ ಅವನ ಮನಸ್ಸನ್ನು ತಪ್ಪಿಸಿ ಲಿಂಗೈಕ್ಯಜ್ಞಾನಲಾಭದ ಕಡೆಗೆ ಅದನ್ನು ತಿರುಗಿಸಬೇಕೆಂತ ಅವನೊಬ್ಬನನ್ನು ಕುರಿತು ಪ್ರಭುದೇವರು ಹೀಗೆ ಹೇಳಿದರಲ್ಲದೆ ಸಾಮಾನ್ಯವಾಗಿ ಕೃಷಿಕರ್ಮವು ತ್ಯಾಜ್ಯವೆಂಬದಾಗಿ ಅವರ ಬೋಧೆಯ ತಾತ್ಪರ್ಯವಲ್ಲ.

ಧನೆಯನ್ನು ಮಾಡುವದರಿಂದ ಸಂಸಾರವು ನಾಶವಾಗುವದಿಲ್ಲ. ನಿಷ್ಕಾಮಭಕ್ತಿಯಿಂದ ವರ್ತಿಸುವ ಶರಣನು ನಿರಾಮಯವೆಂಬ ಮೋಕ್ಷ ಪದವಿಯನ್ನು ಹೊಂದುತ್ತಾನೆ. ಸಾಧಾರಣವಾಗಿ ಮನುಷ್ಯನು ತನಗೆ ಉಪದ್ರಕೊಡುವ ಶತ್ರುಗಳನ್ನು ಕೊಲ್ಲುವನು. ಇದರಂತೆ ವಿಷ್ಣು ಬ್ರಹ್ಮ ಮೊದಲಾದ ಮುಖ್ಯ ದೇವತೆಗು ಪಶುಭಾವದಿಂದ ಅನ್ಯರನ್ನು ಹೊಡೆದರು, ಅನ್ಯರಿಂದ ತಾವು ಹೊಡಿಸಿಕೊಂಡರು. ಶತ್ರುಗಳಲ್ಲದ ನಿರಪರಾಧಿಗಳನ್ನು ಪೀಡಿಸುವವರನ್ನೂ, ಶತ್ರುಗಳಾದವರನ್ನು ಕೊಲ್ಲುವಂಥವರನ್ನೂ ಶಿವನು ಶಿಕ್ಷಿಸುವನು. ಯಾಕಂದರೆ—ಪರಮಾತ್ಮನು ಸ್ಥಾವರ ಜಂಗಮಾತ್ಮಕವಾದ ಈ ಸರ್ವ ಜಗತ್ತಿಗೂ ಗುರುವಾಗಿದ್ದಾನೆ. ಆದ್ದರಿಂದ ಯಾರೂ ಪ್ರಾಣ ಹಿಂಸೆಯನ್ನು ಅಂದರೆ ಕಾಯ ವಾಚಾ ಮನಸ್ಸಿನಿಂದ ಅನ್ಯರಿಗೆ ಬಾಧೆಯುಂಟಾಗುವಂಥ ಯಾವ ಕಾರ್ಯವನ್ನು ಕಲ್ಪಿಸಬಾರದು ಮತ್ತು ಅದನ್ನು ಕೃತಿಯಿಂದ ಮಾಡಬಾರದು. ಮನುಷ್ಯರು ಮನೋವಾಕ್ಕಾಯಗಳಿಂದ ಮಾಡಿದ ಪುಣ್ಯ ಪಾಪಗಳ ಫಲವನ್ನು ಭೋಗಿಸಿಯೇ ತೀರಬೇಕು. ಪ್ರಾಣಿಮಾತ್ರದವರು ಶುಭಾಶುಭ ಕರ್ಮಗಳ ಫಲರೂಪಗಳಾದ ಸುಖದುಃಖಗಳನ್ನು ಅನುಭವಿಸಲಿಕ್ಕೇಬೇಕು. ಮೂರು ಲೋಕಗಳಲ್ಲಿ ಅಡಗಿಕೊಂಡಾಗ್ಯೂ ಈ ಭೋಗಾನುಭವವನ್ನು ತಪ್ಪಿಸಲಿಕ್ಕಾಗದು. ಹೀಗೆ ವೇದಾಂತ ಶಾಸ್ತ್ರದ ರಹಸ್ಯವದೆ. ಆದ್ದರಿಂದ ಸದೋದಿತ ಕೃಷಿಕರ್ಮಗಳಲ್ಲಿ ತತ್ಪರರಾದವರಿಗೆ ಜನನ ಮರಣ ಪರಂಪರೆಯು ತಪ್ಪುವದಿಲ್ಲ. ಕಾಳು ವಿಷಯಗಳ ಮಡುವಿನಲ್ಲಿ ಬಿದ್ದು ಹತವಾಗಿ ಕಾಲನ ಬಾಯಲ್ಲಿ ಬೀಳಬಾರದೆಂಬದಾಗಿ ಚಿಂತಿಸುವ ಸುಕೃತಿಗಳು ತಮ್ಮ ಒಳಗೂ ಹೊರಗೂ ಬಿಡದೆ ಹರಡಿಕೊಂಡಿರುವ, ತಮಸ್ಸಿನ ತರಂಗಗಳನ್ನು ಹಿಂಗಿಸುವಂಥ, ಇಷ್ಟಲಿಂಗದ ನಿಜವನ್ನರಿತು ಆ ಲಿಂಗಾನುಸಂಧಾನಸುಖದಲ್ಲಿಯೇ ಮಗ್ನರಾಗಲು ಪ್ರಯತ್ನಿಸಬೇಕು. ಯಾರು ಮನಸ್ಸಿನಲ್ಲಿ ವೈರಾಗ್ಯಭಾವವನ್ನು ಹೊಂದದೆ, ಲಿಂಗದರಹಸ್ಯವನ್ನು ಸರ್ವ ಭಕ್ತರಿಗೂ ಅರುಹಿ ಅವರನ್ನುದ್ಧರಿಸುವದಕ್ಕಾಗಿ ದೇಶಸಂಚಾರ ಮಾಡದೆ, ಪ್ರಪಂಚಿಕರಂತೆ ಒಂದೇ ಸ್ಥಾನದಲ್ಲಿದ್ದುಕೊಂಡು, ಹೊರಗೆ ಬಹು ಅಟ್ಟಹಾಸದಿಂದ ಡಾಂಭಿಕ ಭಕ್ತಿ ವಹಿಸಿದ್ದಾರೋ ಅವರನ್ನು ನೋಡಿ ಶಿವಶರಣರು ನಗುವರು. ಕಾರಣ ಎಲೈ ಗೋಗಾರ್ಯನೆ, ಜನರು ಮನಸ್ಸಿನಲ್ಲಿ ವಿಕಲ್ಪತರಂಗಗಳನ್ನು ತೊರೆದು ಏಕಾಗ್ರಚಿತ್ತದಿಂದ ಗುರುಲಿಂಗ ಜಂಗಮಾರಾಧನೆಯನ್ನು ಮಾಡುವವರಾದರೆ, ಅವರಲ್ಲಿ ಶಿವನ ವಿಷಯವಾಗಿ ನಿಶ್ಚಲ ಭಕ್ತಿಯುಂಟಾಗಿ ಮೋಕ್ಷಪದವಿಗೆ ಭಾಗಿಗಳಾಗುವರು.

ಈ ಪ್ರಕಾರ ಅಕಾರಣ ಮಿತ್ರನಾದ ಅಲ್ಲಮ ಪ್ರಭುವು ಬೇರೆ ಬೇರೆ ದೃಷ್ಟಾಂತಗಳನ್ನು ಕೊಟ್ಟು ಗೋಗಾರ್ಯನಿಗೆ ಹಿತೋಪದೇಶ ಮಾಡಲು ಆದಕ್ಕೆ

ಗೋಗಾರ್ಯನು—ಎಲೈ ಈಶ್ವರನೆ, ನಮ್ಮಂಥ ಅಜ್ಞಾನಿಗಳಿಗೆ ಈ ತರದ ಭೋಧೆಯು ಉಕ್ಕಿನ ಕಡ್ಲಿಯಂತೆ ಕಠಿಣವಾಗಿದೆ. ಈ ಉಪದೇಶದಂತೆ ನಾವು ವರ್ತಿಸುವ ಬಗೆ ಹೇಗೆ? ಎನ್ನಲು ದಯಾಸಮುದ್ರನಾದ ಅಲ್ಲಮಪ್ರಭುವು ಆತನನ್ನು ರಕ್ಷಿಸಬೇಕೆಂದು ಚಿಂತಿಸಿ ಸಮಾಧಿಯೋಗದಿಂದ ಆತನಿಗೆ ಒಂದು ವಿಚಿತ್ರವಾದ ರಹಸ್ಯವನ್ನು ತೋರಿಸಿದ್ದಲ್ಲದೆ, ಲಿಂಗನಿರೀಕ್ಷಣೆಯಿಂದ ಸಮಾಧಿಯೋಗವನ್ನು ಸಾಧಿಸಿ ಆತನ ಮುಂದೆ ಕುಳಿತುಕೊಂಡು— ಎಲೈ ಗೋಗಾರ್ಯನೆ, ನಿನ್ನ ಕುಡಗೋಲು ಕುರ್ಚಿಗಿ ಮುಂತಾದವುಗಳನ್ನು ಕೆಳಗೆ ಇಟ್ಟು ನೋಡು, ಬಂಗಾರದ ಕಳಸವೊಂದು ಕಾಣಿಸುತ್ತದೆ ಅದನ್ನು ಅಗಿದುನೋಡು—ಅದರ ಮುಂದೆ ಒಂದು ಸಭಾಮಂಟಪವು ಕಾಣಿಸುತ್ತದೆ. ಅದರಲ್ಲಿ ಬಹಿರಂಗದ ಸರ್ವ ವ್ಯಾಪಾರಗಳನ್ನು ತೊರೆದು ಮೌನಧಾರಿಯಾಗಿ ಎವೆಗೆ ಎವೆಹಚ್ಚದೆ ನಿಶ್ಚಲಚಿತ್ತದಿಂದ ಶಿವಲಿಂಗಧ್ಯಾನದಲ್ಲಿ ಕುಳಿತ ಶಾಂತಿ ಜ್ಞಾನ ವೈರಾಗ್ಯ ಮುಂತಾದವುಗಳೆಲ್ಲ ಗಟ್ಟಿಗೊಂಡು ಸಾಕಾರವಾದ ಪುರುಷ ಶ್ರೇಷ್ಠನಿರುವದನ್ನು ನೋಡು. ಈತನ ಮನಸ್ಸು ಪ್ರಾಣ ಇಂದ್ರಿಯಾದಿಗಳು ಮಹಾಲಿಂಗದೊಡನೆ ಐಕ್ಯವಾದ್ದರಿಂದ, ವಿಷಯೋಪಭೋಗಾದಿ ಅಂಗಗುಣಗಳ ಕಲ್ಪನೆಯು ಸಹ ಈತನಿಗೆ ಇರುವದಿಲ್ಲ. ಇಂತಹ ನಿಶ್ಚಲವಾದ ಶಿವಭಕ್ತಿಯು ಹೊರತು ನೀಚಪ್ರಕಾರದ ಪೂಜೆಯಿಂದ ಶಿವನು ಎಂದೂ ಸಂತುಷ್ಟನಾಗುವದಿಲ್ಲ. + (೧) ಹೀಗೆ ಅಲ್ಲಮನು ತೇಜೋಮಯನಾದ ಅನಿಮಿಷ ದೇಸಕನನ್ನು ಗೋಗನಿಗೆ ತೋರಿಸಲು, ಆತನನ್ನು ನೋಡಿ ಗೋಗಾರ್ಯನು ಹರ್ಷಿತನಾದನು. ಮತ್ತು ಸಾಕ್ಷಾತ್ ಭೃಂಗೀಶ್ವರನಂತೆ ಆತನನ್ನು ಕೊಂಡಾಡಹತ್ತಿದನು. ಅಲ್ಲಮಪ್ರಭುವು ಕೂಡ ತಾನು ಸಾಕ್ಷಾತ್ ಜಗದ್ಗುರುವಾದರೂ ಗುರುಶಿಷ್ಯರ ರೀತಿಯನ್ನು ಜಗತ್ತಿನಲ್ಲಿ ಪ್ರಕಟಗೊಳಿಸಬೇಕೆಂದು ಒಬ್ಬ ಸಾಮಾನ್ಯ ಶಿಷ್ಯನಂತೆ ಅನಿಮಿಷ ದೇಶಕನನ್ನು ಸ್ತುತಿಸಹತ್ತಿದನು. ದೊಡ್ಡವರು ನಡೆದಂತೆ ಸಾಮಾನ್ಯ ಜನರು ವರ್ತಿಸುವರು. ಮಹಾತ್ಮರು ಅವತಾರವು ಕೇವಲ ಲೋಕ ಶಿಕ್ಷಣೆಗಾಗಿ ಇರುವದರಿಂದ ಅವರು ವೇದಾಗಮ ಶಾಸ್ತ್ರಕ್ಕೆ ಮತ್ತು ಸಂಪ್ರದಾಯಕ್ಕೆ ಸಮ್ಮತವಾದದ್ದನ್ನೇ ಆಚರಿಸಬೇಕು. ಹೀಗೆ ಅಲ್ಲಮಪ್ರಭುವು ಅನಿಮಿಷದೇಶಿಕನನ್ನು ಸ್ತುತಿಸುತ್ತಿರುವಾಗ, ಸೂಜಿಗಲ್ಲಿಗೆ ಮೋಹಿಸಿ

---

+ (೧) ಟೀಪು—"ಇದೆಕಣಾ ಶಿವಲಿಂಗಭಕ್ತಿಯು । ಹೃದಯವನು ಸಾಧಿಸುದ ಸಂಭಾ । ವದಲಿ ನೆರೆನಟ್ಟಾಲಿಯುಲಿ ನಿಬ್ಬೆರಗಿನಂದದಲಿ॥
ಇದನು ಸಾಧಿಸದನ್ಯವ್ಯವಸಾ । ಯದಲಿ ಸಾವಡೆ ಕಬ್ಬಿನಿಚ್ಚೆಗೆ
ಬಿದಿರನೆಲುವಂತಿಪ್ಪುದೈ ಗೊಗ್ಗಯ್ಯಕೇಳೆಂದ॥"

ಸೂಜಿಯು ತಾನೇ ಅದರ ಕಡೆಗೆ ಓಡುವಂತೆ ತೇಜಃಪುಂಜನಾದ ದೇಶಿಕನ ಹಸ್ತವು ಅಲ್ಲಮಪ್ರಭುವಿನ ಹಸ್ತದಲ್ಲಿಬಂದು ಕೂಡಿಕೊಂಡಿತು. ಈ ಚಮತ್ಕಾರವನ್ನು ನೋಡಿ ಗೋಗಾರ್ಯನು ಇವರೀರ್ವರ ಮಹಾತ್ಮ್ಯವು ವಿಚಿತ್ರವಾದದ್ದೂ ಅನ್ಯರಿಗೆ ತಿಳಿಯಲಸಾಧ್ಯವಾದದ್ದೂ ಎಂದು ಭಾವಿಸಿ ಪ್ರಭುದೇವರನ್ನು ಕೊಂಡಾಡಿ ತಾನು ಪೂರ್ವ ಜನ್ಮದಲ್ಲಿ ಮಾಡಿದ ಸುಕೃತ ವಿಶೇಷದಿಂದ ಇಂತಹ ಶಿವಶರಣರ ಸಂದರ್ಶನ ಲಾಭವಾಯಿತು. ಆದ್ದರಿಂದ ಈ ಶರೀರದಲ್ಲಿ ಇಷ್ಟಲಿಂಗ ಸಂಬಂಧದಿಂದಾಗುವ ಸುಖವನ್ನು ತನಗೆ ಹೇಳಿಕೊಟ್ಟು ತನ್ನನ್ನುದ್ಧರಿಸಬೇಕೆಂದು ದೀನ ಸ್ವರದಿಂದ ಬೇಡಿಕೊಳ್ಳಲು, ಆತನು ಪರಿಪಕ್ವ ಹೃದಯನಾಗಿದ್ದಾನೆಂದು ತಿಳಿದು ಅಲ್ಲಮನು ಆತನಿಗೆ ಇಷ್ಟಪ್ರಾಣ ಭಾವಲಿಂಗಗಳ ಏಕತ್ವಾನುಸಂಧಾನ ರೀತಿಯನ್ನು ತಿಳಿಸಿ, ತನ್ನ ಸಾಮರ್ಥ್ಯದಿಂದ ಶರಣರಿಗೆ ಯೋಗ್ಯವಾದ ರೂಪವನ್ನು ಆ ಕ್ಷಣದಲ್ಲಿಯೇ ಧಾರಣಮಾಡಿ ಶುಭ್ರವಾದ ವಿಭೂತಿಯಿಂದ ಸರ್ವಾಂಗವನ್ನು ಉದ್ಧೂಳನ ಮಾಡಿ, ಕಂಠದಲ್ಲಿ ರುದ್ರಾಕ್ಷ ಮಾಲಾ ಭೂಷಿತನಾಗಿ, ನಡುವಿನಲ್ಲಿ ಒಂದು ಕೆಂಪುಉಡದಾರವನ್ನು ಸುತ್ತಿ, ಅದಕ್ಕೆ ಒಂದು ಕಾವಿಬಣ್ಣದ ಕೌಪವನ್ನು ಸಂಬಂಧಿಸಿ, ಕರಕಮಲದಲ್ಲಿ ವಿರಾಜಿಸುವ ಇಷ್ಟಲಿಂಗದಲ್ಲಿ ನಿಶ್ಚಲ ದೃಷ್ಟಿಯನ್ನಿಟ್ಟು, ಮನಸ್ಸಿನ ವಿಕಲ್ಪತರಂಗಗಳನ್ನು ದೂರಮಾಡಿ ಶಿವಯೋಗ ಸಮಾಧಿಯನ್ನು ಬಲಿಸಿ ಪ್ರಾಣವಾಯುವನ್ನು ಬಿಗಿಯಾಗಿ ಬಂಧಿಸಿದನು. ಅದರಿಂದ ಅಲ್ಲಮಪ್ರಭುವು ಹೆಚ್ಚಾಗಿ ಶೋಭಿಸಹತ್ತಿದನು. ಬಳಿಕ ಶಿವಯೋಗ ಸಮಾಧಿಯಲ್ಲಿ ನಿಬ್ಬೆರಗಾಗಿ ನಿಂತ ಅಲ್ಲಮನನ್ನು ನೋಡಿದಾಕ್ಷಣವೇ ಗೋಗಾರ್ಯನಿಗೆ ಶಿವಭಕ್ತಿ ರಹಸ್ಯದ ಘನವು ಹೊಳೆಯಲಾಗಿ ಆತನೂ ಕೂಡ ಲಿಂಗದ ಸ್ವರೂಪವನ್ನು ಅಂತರ್ಮುಖದಿಂದ ತಿಳಿದು ಪ್ರಭುದೇವರು ನಡೆದು ತೋರಿಸಿದಂತೆ ಗೋಗಾರ್ಯನು ಸಹ ಲಿಂಗನಿಷ್ಠೆಯನ್ನು ಅನುಕರಿಸಿದನು. ಈ ಕೃಪಾಳುವು ಸಾಕ್ಷಾತ್ಪರಮೇಶ್ವರನಿರಬೇಕಲ್ಲದೆ ಮತ್ಯಾರು ಅಲ್ಲವೆಂದು ದೃಢವಾಗಿ ನಂಬಿ ಆತನನ್ನು ಅತ್ಯಂತ ಕೊಂಡಾಡಿ "ಶಾಬಾಸ! ಭಾಪುರೆ! ಜೀಯ! ಜೀವನಿಗೆ ಭಾಗ್ಯೋದಯವಾಗಲು ಅದನ್ನು ತಾನೊಬ್ಬನೇ ಸೇವಿಸುವಂತೆ, ದಾನಿಯಾದವನು ತಾನೊಬ್ಬನೇ ಉಣ್ಣುವನೇ? ಎಂದೂ ಇಲ್ಲ. ಅದರಂತೆ ನಿನಗೆ ಗೋಚರವಾದ ಶಿವಪಥದ ರೀತಿಯನ್ನು ಸರ್ವರಿಗೂ ಅರುಹಬೇಕೆಂಬ ನಿನ್ನ ಮಹದಭಿಮಾನದಿಂದ ನೀನೊಬ್ಬನೇ ಜಗದ್ಗುರುವಲ್ಲದೆ ಇನ್ನಾರೂ ಇಲ್ಲ." ಹೀಗೆಂದು ಗೋಗಾರ್ಯನು ನಿರುಪಮನಾದ ಪ್ರಭುದೇವರನ್ನು ನುತಿಸಲು, ಆತನಿಂದ ಬೀಳ್ಕೊಂಡು ಅಲ್ಲಮನು ಭೂಮಿಯಲ್ಲಿರುವ ಭಕ್ತರನ್ನು ಪಾವನರಾಗಿ ಮಾಡಲೋಸುಗ ಮುಂದಕ್ಕೆ ಸಾಗಿದನು. ಇತ್ತ ಗೋಗಾರ್ಯನು ಅಲ್ಲಮನು ಹೇಳಿ

ದಂತೆ ತನ್ನ ಕೃಷಿಕರ್ಮಗಳನ್ನು ಬಿಟ್ಟು, ಬೇರೆ ಕಾಯಕವನ್ನು ಅಂಗೀಕರಿಸಿ ಅದರಲ್ಲಿ ನ್ಯಾಯಾರ್ಜಿತ ದ್ರವ್ಯದಿಂದ ಶಿವಭಕ್ತಿಯನ್ನಾಚರಿಸುತ್ತ ಲಿಂಗಪೂಜೆಯಲ್ಲಿ ನಿರತನಾಗಿ, ಅದರಲ್ಲಿಯೇ ದೃಢವಾದ ವಿಶ್ವಾಸವನ್ನಿಟ್ಟು ಶಿವಯೋಗ ಸಾಧನೆಯನ್ನು ಮಾಡಹತ್ತಿದನು.

ಒನೆಯ ಅಧ್ಯಾಯ ಸಂಪೂರ್ಣ.

---

## ೮ನೆಯ ಅಧ್ಯಾಯ

**ಮುಕ್ತಾಯಿಯ ದು:ಖವನ್ನು ದೂರಮಾಡಿ ಅಲ್ಲಮನು ಆಕೆಗೆ ಮೋಕ್ಷಮಾರ್ಗೋಪದೇಶ ಮಾಡುವಿಕೆ.**



ಅಲ್ಲಮಪ್ರಭುವು ಆನತರಾದವರ ಸಂಸಾರ ಕೋಟಲೆಗಳನ್ನು ಮಾಣಿಸಿ ಭಕ್ತರ ಶರೀರದಲ್ಲಿ ಮನೋಹರವಾಗಿ ತೋರುವ ಇಷ್ಟಲಿಂಗದ ಮಹಿಮೆಯನ್ನೂ ಲಿಂಗಾನುಭಾವದ ರುಚಿಯನ್ನೂ ಸೇವಿಸಲಿಕ್ಕೆ ಕಲಿಸಿ ಅವರನ್ನು ಸ್ವರೂಪಾನಂದದಲ್ಲಿ ನಿಲ್ಲಿಸುವೆನೆಂಬ ಬಗೆಯಾಗಿ ಅತಿ ವಿನೋದದಿಂದ ಸಂಚರಿಸುತ್ತ ಬರುತ್ತಿದ್ದನು. ಒಂದುದಿನ ಮುಕ್ತಾಯಿ ಎಂಬುವಳು ದುಃಖದಲ್ಲಿರುವದನ್ನು ತನ್ನ ಯೋಗದೃಷ್ಟಿಯಿಂದ ತಿಳಿದು, ಅವಳೆಡೆಗೆ ಬಂದು ಅವಳ ದುಃಖದ ಕಾರಣವನ್ನು ಕೇಳಲಾಗಿ, " ಅವಳು ತನಗೆ ಅಜಗಣ್ಣನೆಂಬ ಒಬ್ಬ ತಮ್ಮನಿದ್ದನು; ಆತನ ಮೇಲೆ ತನ್ನ ಪ್ರೀತಿಯು ವಿಶೇಷವಾಗಿತ್ತು. ಆತನು ಶಿವಭಕ್ತಿಯಲ್ಲಿ ಅತ್ಯಂತ ಧುರೀಣನಾಗಿ ನನಗೆ ಶಿವಾಚಾರ ಮಾರ್ಗದಲ್ಲಿ ಗುರುವಾಗಿದ್ದನು; ಆದರೆ ಈ ಆತನು ಅಕಸ್ಮಾತ್ ಶಿವಾಧೀನನಾದ್ದರಿಂದ ತನಗೆ ಹೇಳಲಾರದಷ್ಟು ದುಃಖವ

ಗಿದೆ; ಅವನು ಶಿವೈಕ್ಯನಾದ್ದರಿಂದ ತನಗೆ ಶಿವಭಕ್ತಿಯನ್ನು ಕಲಿಸತಕ್ಕವರು ಯಾರೂ ಉಳಿಯಲಿಲ್ಲ. ಈ ಕಾರಣದಿಂದ ತಾನು ಅಳುತ್ತಿದ್ದೇನೆಂದು ಹೇಳಲು ಅಲ್ಲಮಪ್ರಭುವು ಅವಳನ್ನು ಕುರಿತು—“ಜಗತ್ತಿನಲ್ಲಿ ಪ್ರಮಥಗಣರು ಯಾವದಾದರೊಂದು ನಿಮಿತ್ತದಿಂದ ಭೂಮಿಯಲ್ಲಿ ಜನ್ಮವೆತ್ತುವರು. ತಮ್ಮ ಕೆಲಸವು ಪೂರ್ತಿಯಾದೊಡನೆಯೆ ಪುನಃ ಕೈಲಾಸಕ್ಕೆ ಗಮಿಸುವರು. ಚನ್ನಾಗಿ ವಿಚಾರ ಮಾಡಲು, ಅವರಿಗೆ ಯಾವನೊಬ್ಬನ ಕೂಡ ಅಣ್ಣ ತಮ್ಮ, ತಂದೆ ಮಗನೆಂಬ ಸಂಬಂಧವಿರುವದಿಲ್ಲ. ಲೀಲಾಮಾತ್ರದಿಂದ ಮನುಷ್ಯ ಶರೀರವನ್ನು ಧಾರಣಮಾಡುವರು. + ಇದರಿಂದ ಅಜ್ಞಾನಿಗಳಿಗೆ ಮಾತ್ರ ದುಃಖವಾಗುತ್ತದೆ. ಶಿವಾಜ್ಞೆಯ ಮೇರೆಗೆ ಸರ್ವ ಸ್ಥಾವರ-ಜಂಗಮಾತ್ಮಕವಾದ ವಿಶ್ವವು ನಡೆದಿರುತ್ತದೆ ಈಶಾಜ್ಞೆಯನ್ನು ಮೀರಲು ಯಾರು ಸಮರ್ಥರಲ್ಲ. ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳು ಸಹ ಆಯುಷ್ಯ ಮರ್ಯಾದೆಗನುಸರಿಸಿ ತಮ್ಮ ತಮ್ಮ ಲೋಕಗಳಲ್ಲಿದ್ದು ಮರಣಕಾಲವು ಒದಗಲು ಅರ್ಧ ನಿಮಿಷವಾದರೂ ಜೀವಂತರಿರಲು ಶಕ್ತರಲ್ಲ. ಪೂರ್ವ ಕರ್ಮಕ್ಕನುಸರಿಸಿ ಪರಮೇಶ್ವರನು ಪ್ರಾಣಿಗಳ ಹಣೆಯಲ್ಲಿ ಬರೆದ ಆಯುಷ್ಯದ ಮಟ್ಟಿಗೆ ಜೀವಿಸಿ ತದನಂತರ ಅವು ಮರಣ ಹೊಂದುವವು. ಯುದ್ಧ ರೋಗ ವೃತಾದಿ ಮುಂತಾದ ಯಾವ್ಯಾವ ನಿಮಿತ್ತದಿಂದ ಅವು ಸಾಯಬೇಕೆಂದು ನಿಯಮಿಸಲ್ಪಟ್ಟಿರುವವೋ ಅದರಂತೆಯೇ ಸಾಯುವವು. ಜಗತ್ತಿನ ಸೃಷ್ಟಿ-ಸ್ಥಿತಿ ಸಂಹಾರಗಳಿಗೆ ಕಾರಣನು ಶಿವನೊಬ್ಬನು. ಆತನಿಚ್ಛೆಯಂತೆಯೇ ಜಗತ್ತಿನಲ್ಲಿ ಸರ್ವವೂ ಸಂಭವಿಸುವದು. ಆದ್ದರಿಂದ ಅಜಗಣ್ಣನ ವಿಷಯವಾಗಿ ದುಃಖವನ್ನು ನೀಗು. ಅದರಿಂದೇನೂ ಪ್ರಯೋಜನವಿಲ್ಲ ಎಂದು ಸಮಾಧಾನ ಹೇಳಲು,

ಮುಕ್ತಾಯಿ—ಮಹಾನುಭಾವರೆ, ಅಜಗಣ್ಣನು ನನ್ನ ಕುಲದಲ್ಲಿ ಹುಟ್ಟಿ, ನನಗೆ ತಮ್ಮನೂ, ರಕ್ಷಕನೂ, ಗುರುವೂ ಆಗಿರುವಲ್ಲಿ ಆತನು ನನಗೆ ಸಂಬಂಧಿಕನಲ್ಲವೆಂಬ ಮಾತು ತಿಳಿಯಲೊಲ್ಲದು. ನೀವು ನಿರೂಪಿಸಿದ ತಾತ್ಪರ್ಯವು ನಿಮಗೊಬ್ಬರಿಗೆ ಮಾತ್ರ ತಿಳಿದಿದ್ದೀತು!

---

+ (೧) “ಕಾರಣ ವಕಾಣಿಸದ ಮನದವಿ। ಕಾರಿಗಳಿಗಾ ಶರಣರೊಂದುಶ। ರೀರವನು ತೋರಿದಡೆ ನಿನ್ನವರೆಂದು ನಂಬದಿರು॥ ಹಾರವಿಸದಿರು ತಿಳಿದು ನೋಡಿವಿ। ಚಾರಿಸುವಡಜಗಣ್ಣನೆಂಬನ। ಪಾರಮಹಿಮನು ನಿತ್ಯನಾ ಮುಕ್ತಾಯಿ ಕೇಳೆಂದ॥”

ಅಲ್ಲಮ—ಎಲ್ಲೈ ಮುಕ್ತಾಯಿ, ಕುಲವೆಲ್ಲಿಯದು, ಸಂಬಂಧವೆಲ್ಲಿಯದು, ಜನನ ಮರಣ ರೂಪವಾದ ಸಂಸಾರ ಚಕ್ರದಲ್ಲಿ ಬಿದ್ದು ಬಳಲುತ್ತಿರುವ ಪ್ರಾಣಿಗಳ ಪೂರ್ವ ಕರ್ಮಾನುಸಾರವಾಗಿ ಪ್ರಾಪ್ತವಾದ ಸುಖದುಃಖಗಳನ್ನು ಭೋಗಿಸಲು ತತ್ಕರ್ಮಗಳನ್ನು ಮಾಡಿದವನೇ ಅರ್ಹನಲ್ಲದೆ, ಮಿಕ್ಕವರು ಪಾತ್ರರಲ್ಲ. ಒಬ್ಬರಕೂಡ ಮತ್ತೊಬ್ಬರು ಸಾಯುವದಿಲ್ಲ. ಅಣ್ಣನ್ಯಾರು ತಂಗಿಯಾರು ಒಬ್ಬರಿಗೆ ಮತ್ತೊಬ್ಬರ ಸಂಬಂಧವೇನೂ ಇಲ್ಲ. ಪರಲೋಕದಲ್ಲಿಯಾದರೂ ಹೀಗೆಯೇ ಇರುವದು. ಪ್ರಾಣಿಗಳು ತಮ್ಮ ಹಿತವನ್ನು ತಾವೇ ಸಾಧಿಸಿಕೊಳ್ಳಬೇಕು. ಒಂದು ಮನೆಯಲ್ಲಿ ಹುಟ್ಟಿದ ಒಬ್ಬಳನ್ನು ಬೇರೊಂದು ಮನೆಯಲ್ಲಿ ಜನಿಸಿದವನೊಬ್ಬನಿಗೆ ಕೊಟ್ಟು ವಿವಾಹವನ್ನು ಬೆಳೆಸುವದು ಎಲ್ಲರಿಗೂ ಗೊತ್ತುಂಟು. ಆದ್ದರಿಂದ ಮನುಷ್ಯರ ಸಂಯೋಗ ವಿಯೋಗಗಳು ಪೂರ್ವ ಕರ್ಮಕ್ಕನುಗುಣವಾಗಿವೆ. ಗಂಡಹೆಂಡರ ಸಂಬಂಧ, ತಂದೆ ಮಕ್ಕಳ ಸಂಬಂಧ, ಅಣ್ಣ ತಮ್ಮರ ಸಂಬಂಧ, ಇವೆಲ್ಲ ಮರಣಾವಧಿ ಇರುತ್ತವೆ, ಆ ಬಳಿಕ ಇರುವದಿಲ್ಲ. ಯಜಮಾನ ಸೇವಕ ಸಂಬಂಧ, ಶತ್ರು ಮಿತ್ರರ ಸಂಬಂಧ, ಇವೆಲ್ಲ ಪೂರ್ವ ಕರ್ಮದಿಂದಲೇ ಉಂಟಾಗುತ್ತವೆ. ಕಾರಣ ಪುಣ್ಯ ಪಾಪರೂಪವಾದ ಸರ್ವ ಕರ್ಮಗಳನ್ನು ತ್ಯಜಿಸು. ಜ್ಞಾನವನ್ನು ಬಿಟ್ಟು ಕೇವಲ ಕರ್ಮಗಳಿಂದಲೇ ಕರ್ಮಗಳ ನಾಶವಾಗುವದಿಲ್ಲ. ಶಿವನಲ್ಲಿ ಏಕನಿಷ್ಠಾ ಪರನಾದರೆ ಶಿವಭಕ್ತಿಯುಂಟಾಗಿ ಅದರಿಂದ ಶಿವಜ್ಞಾನವು ಉದಯವಾಗುವದು ಈ ಶಿವಜ್ಞಾನದಿಂದಲೇ ಕರ್ಮ ಸಮೂಹವು ನಾಶವಾಗುವದು. ಆದ್ದರಿಂದ ಸಾಧನಚತುಷ್ಟಯದ್ವಾರಾ ಶಿವಭಕ್ತಿಯನ್ನೂ ಶಿವಜ್ಞಾನವನ್ನೂ ಸಾಧಿಸಬೇಕು ಆ ಸಾಧನ ಚತುಷ್ಟಯಗಳು ಯಾವವೆಂದರೆ— (೧) ಆತ್ಮಸುಖವೇ ನಿತ್ಯವಾದದ್ದಲ್ಲದೆ ಸ್ವರ್ಗಲೋಕ ಮೃತ್ಯುಲೋಕಗಳ ಸುಖವು ಅನಿತ್ಯವೆಂದು ತಿಳಿಯುವದೇ ನಿತ್ಯಾನಿತ್ಯ ವಸ್ತು ವಿವೇಕವೆಂಬ ಮೊದಲನೆಯ ಸಾಧನೆ. (೨) ಇಹಲೋಕ ಪರಲೋಕಸುಖಗಳ ಬಗ್ಗೆ ವೈರಾಗ್ಯ ಪ್ರವೃತ್ತಿಯುಂಟಾಗುವದೇ ಇಹಾ ಮುತ್ರಾರ್ಥ ಫಲಭೋಗವಿರಾಗವೆಂಬ ಎರಡನೆಯ ಸಾಧನೆ (೩) ಮನೋನಿಗ್ರಹ, ಇಂದ್ರಿಯ ನಿಗ್ರಹ, ಫಲತ್ಯಾಗ, ವಿಷಯಗಳಲ್ಲಿ ವಿರಕ್ತಿ, ಆಸ್ತಿಕ್ಯ ಬುದ್ಧಿ ಮತ್ತು ಚಿತ್ತಸಮಾಧಾನವೆಂಬ ಶಮದಮಾದಿ ಸಾಧನ ಷಟ್ಕಗಳು ಮೂರನೆಯ ಸಾಧನೆ. ಅನಂತರ (೪) ಮೋಕ್ಷ ಪ್ರಾಪ್ತಿಯ ವಿಷಯವಾಗಿ ಅಂದರೆ ಶಿವೈಕ್ಯ ವಿಷಯವಾಗಿ ಬುದ್ಧಿಯುಂಟಾಗುವದೇ ನಾಲ್ಕನೆಯ ಸಾಧನೆ. ಹೀಗೆ ಈ ನಾಲ್ಕು ಸಾಧನೆಗಳು ಅನುಕೂಲ ಸ್ಥಿತಿಯಲ್ಲಿದ್ದರೆ ಜೀವನಿಗೆ ಶಿವಜ್ಞಾನವು ಪ್ರಾಪ್ತವಾಗುವದು. ಮಹೇಶ್ವರನೇ ಮಾಯೋಪಾಧಿಯಿಂದ ಈಶ್ವರನೆಂತಲೂ ಅವಿದ್ಯೋಪಾಧಿಯಿಂದ ಜೀವನೆಂತಲೂ ಎರಡು ಪ್ರಕಾರವಾಗಿ ತೋ

ರುವನು. ಈ ಮಾಯಾ ಸಂಬಂಧವು ಅನಾದಿಸಿದ್ಧವಾದದ್ದು. ಇದು ಅನೇಕ ರೂಪಗಳನ್ನು ಧರಿಸಿರುತ್ತದೆ. ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ಪ್ರಕಾರದ ಶರೀರಗಳು ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ. ಪೃಥಿವ್ಯಾದಿ ಪಂಚಮಹಾಭೂತಗಳ ಪಂಚೀಕರಣದಿಂದಾದದ್ದು ಸ್ಥೂಲದೇಹ. ಪಂಚೀಕರಣವಿಲ್ಲದೆ ಕೇವಲ ಪಂಚಮಹಾಭೂತಗಳಿಂದುಂಟಾದದ್ದು ಸೂಕ್ಷ್ಮದೇಹ. ಮಾಯಾ ಸಂಬಂಧವಾದದ್ದು ಕಾರಣ ದೇಹ. ಈ ತನುತ್ರಯ:ಗಳು ನಾಶಹೊಂದಲು ಶಿವಜೀವರ ಐಕ್ಯವು ಸಂಭವಿಸುವದು. ಅನಾದಿಕಾಲದಿಂದ ನಡೆದು ಬಂದ ಅಜ್ಞಾನದದೆಸೆಯಿಂದ ಜೀವನು ಸಂಸಾರಬಂಧನದಲ್ಲಿ ಬೀಳುತ್ತಾನೆ; ತನ್ನ ಅಂತಃಕರಣದಲ್ಲಿ ನೆಲೆಗೊಂಡ ಇಚ್ಛೆಗಳು ಪೂರ್ಣವಾಗದೆ ಇರುವತನಕ ಆತನು ದುಃಖಪಡುತ್ತಾನೆ. ಒಂದು ಕೊಡದಲ್ಲಿ ಸೇರಿದ ಆಕಾಶವು ಕೊಡವನ್ನು ಒಯ್ದತ್ತಬರುವಂತೆ, ದೇಹವು ಹೋದ ಕಡೆಗೆ ಜೀವನು ಬರುವನು; ಯಾಕೆಂದರೆ ಜೀವವಾದರೂ ಆಕಾಶದಂತೆ ಇರುತ್ತದೆ. ಅಂತಃಕರಣ ಸಂಬಂಧದಿಂದಲೂ ಶುಭಾಶುಭ ಕರ್ಮಫಲ ವೈಷಮ್ಯದಿಂದಲೂ ಜೀವನು ಮನುಷ್ಯ ಪಶುಪಕ್ಷಿ ಮೊದಲಾದ ಅನೇಕ ಪ್ರಕಾರದ ಜನ್ಮಗಳನ್ನು ಎತ್ತುವನು. ಆದರೆ ಜೀವಾತ್ಮನೇ ಪರಮಾತ್ಮನು ಎಂದು ಯಾರು ಸದಾ ಮನಸ್ಸಿನಲ್ಲಿ ಚಿಂತಿಸುತ್ತಾರೋ, ಅಂಥವಂಗೆ ಶಿವನು ತನ್ನ ಪದವನ್ನು ಕೊಡುತ್ತಾನೆ. ಶಂಕರನು ಬ್ರಹ್ಮಾದಿ ದೇವತೆಗಳ ಶರೀರದಲ್ಲಿ ಪ್ರವೇಶ ಮಾಡಲು ಸರ್ವಜ್ಞನೆಂದೂ ದೇವ ಪಶು ಪಕ್ಷಿ ಮನುಷ್ಯ ಮುಂತಾದ ದೇಹಗಳಲ್ಲಿ ವ್ಯಾಪಿಸಿ, ಕೊಂಡಾಗ ಆಶ್ರಯಭೇದದಿಂದ ಶಿವನು ಹೆಚ್ಚು ಕಡಿಮೆ ಪ್ರಮಾಣದಿಂದ ಕಿಂಚಿಜ್ಞನೆಂದೂ ತೋರುತ್ತಾನೆ. ಈ ಕಿಂಚಿಜ್ಞತ್ವ, ಸರ್ವಜ್ಞತ್ವಗಳ ಬೇದಜ್ಞಾನವು ಉಪಾಧಿ ಮೂಲಕ ಉಂಟಾಗುವದು. ಆದರೆ ಉಪಾಧಿಯನ್ನು ನಾಶಗೊಳಿಸಿದರೆ ಉಳಿಯುವದು ಚಿತ್ಸ್ವರೂಪ ಸದಾ ಶಿವಮೂರ್ತಿಯು. ಶಿವನು ನಿತ್ಯನಿದ್ದಾನೆ. ಸಾಕಾರನಿದ್ದರೂ ಆತನಿಗೆ ಜನ್ಮ ಜರಾಮರಣಗಳ ಬಾಧೆಯಿಲ್ಲ. ಶರೀರವು ಕ್ಷಣಿಕವಾದದ್ದೂ ನಾಶವಾಗುವಂಥಾದ್ದೂ ಇರುವದರಿಂದ ಜನ್ಮ ಮರಣದ ಭಯವನ್ನು ತಪ್ಪಿಸಿ ಶಿಷ್ಯನಿಗೆ ಶಿವಪದವನ್ನು ಪ್ರಾಪ್ತ ಮಾಡಿಕೊಡಬೇಕೆಂದು, ಶೈವಮತದಲ್ಲಿ ಹೇಳಿದ ರೀತಿಯಂತೆ ಶಿವನು ಗುರುರೂಪದಿಂದ ಬಂದು ಜೀವನಿಗೆ ಶಿವದೀಕ್ಷಾ ಸಂಸ್ಕಾರವನ್ನು ಮಾಡಿ ಅವನಲ್ಲಿ ಶಿವಭಕ್ತಿಯನ್ನು ನೆಲೆಗೊಳಿಸುವನು. ಇಂತಹ ಶಿವಭಕ್ತರಿಗೆ ಜನನ ಮರಣದಿಂದಾಗುವ ಸೂತಕಗೀತಗಳು ತಟ್ಟುವದಿಲ್ಲ. ಅವರು ಜನನದಿಂದ ಸುಖಿಸುವದಿಲ್ಲ. ಮರಣದಿಂದ ದುಃಖಿಸುವದಿಲ್ಲ. ಲಿಂಗೈಕ್ಯಪ್ರಾಪ್ತಿಯಾಯಿತೆಂದರೆ ಅವರಿಗೆ ಹೆಚ್ಚು ಕಲ್ಯಾಣವಾದಂತಾಗುವದು. ಶಿವೈಕ್ಯಕ್ಕಿಂತ ಹೆಚ್ಚು ಹಿತಕರವಾದ ವಸ್ತುವು ಯಾವದೂ ಜಗತ್ತಿನಲ್ಲಿ ಇಲ್ಲ. ಶಿವಭಕ್ತರಲ್ಲದ

ಪ್ರಾಕೃತ ಜೀವಿಗಳಿಗೆ ಮರಣದಿಂದುಂಟಾಗುವ ದುಃಖವು ಅವರಲ್ಲಿರುವದಿಲ್ಲ. ಆದ್ದರಿಂದ ವೀರಶೈವನಾದವನೊಬ್ಬನು ಶಿವಾಧೀನನಾದ ಕೂಡಲೆ ಆತನ ಅಂತ್ಯ ಕ್ರಿಯೆಗಳನ್ನು ಮನೋಹರವಾದ ವ್ಯಾದ್ಯಗಳನ್ನು ಬಾರಿಸುತ್ತ ಗೀತ-ಭಜನೆ ಮುಂತಾದವುಗಳನ್ನು ಮಾಡುತ್ತ, ಅಡಿಕೆವೀಳೆಗಳನ್ನು ಹಂಚುತ್ತ ಅತ್ಯಂತ ಸಮಾರಂಭದಿಂದ ನಡಿಸತಕ್ಕದ್ದು. ನಿನ್ನ ತಮ್ಮನಾದ ಅಜಗಣ್ಣನು ಪ್ರಮಥಗಣ ದವನಿದ್ದು, ದೇಹತ್ಯಾಗದಿಂದ ಆತನು ನಷ್ಟವಾಗಲಿಲ್ಲ. ಸಾಕ್ಷಾತ್ ಚಿತ್ಸ್ವರೂ ಪನಿದ್ದು, ಆಕಾಶದಂತೆ ಆತನು ಸರ್ವತ್ರ ವ್ಯಾಪಿಸಿಕೊಂಡಿರುವನು; ಮತ್ತು ಸಂಸಾರಿಗಳ ಸಹವಾಸವನ್ನು ಬಿಟ್ಟು ಶಿವನೊಡನೆ ಸಖ್ಯವನ್ನು ಬೆಳೆಸಿರುವನು. ಆದ್ದರಿಂದ ಎಲೈ ಮುಕ್ತಾಯಿ-ಅಜಗಣ್ಣನ ವಿಷಯವಾಗಿ ಇನ್ನು ಮೇಲೆ ಶೋಕ ಮಾಡಬೇಡ. ಆತನು ನಿರಾಕಾರದಿಂದ ಆತ್ಮಸ್ವರೂಪನಾಗಿರುವನು. ಅವನು ನಿನ್ನಲ್ಲಿಯೂ ನನ್ನಲ್ಲಿಯೂ ಮತ್ತು ಈ ಜಗತ್ತಿನಲ್ಲಿಯೂ ಇರುವನು. ಹೀಗಿದ್ದು-'ನನ್ನನ್ನು ಬಿಟ್ಟು ಹೋದನಲ್ಲಾ' ಎಂದು ಯಾಕೆ ಅಳುತ್ತೀ? ಇದು ಕೇವಲ ಮೂರ್ಖತನವು. ಹೀಗೆ ದುಃಖಪ್ರದರ್ಶನ ಮಾಡುವದು ವೀರಶೈವಾ ಚಾರಕ್ಕೆ ವಿರೋಧವಾದದ್ದು" ಈ ಪ್ರಕಾರ ಅಲ್ಲಮನು ಶಾಂತರೀತಿಯಿಂದ ಉಪ ದೇಶವನ್ನು ಮಾಡಲು "ಸರ್ಪದ ಗತಿಯನ್ನು ಸರ್ಪವೇ ಹಿಡಿಯುವಂತೆ ಮಹಾ ತ್ಮರು ಮಹತ್ಮರ ಸ್ಥಿತಿಯನ್ನು ತಿಳಿಯಲಿಕ್ಕೆ ಸಮರ್ಥರಲ್ಲದೆ ತನ್ನಂಥ ಅಜ್ಞಾನಿ ಆ ಬೋಧನಾಕ್ರಮವು ಹ್ಯಾಗೆ ತಿಳಿಯಲಾದೀತು" ಎಂದು ಮುಕ್ತಾಯಿಯು ಹೇಳಿ, ಇನ್ನು ಮುಂದೆ ತನ್ನ ಗತಿ ಏನೆಂದೂ, ಮತ್ತು ಪ್ರಾಣಿಗಳು ಹುಟ್ಟಿದಾ ರಭ್ಯ ಮರಣಾವಧಿ ತಮ್ಮ ಚರಿತಾರ್ಥದ ಸಲುವಾಗಿ ಅನೇಕ ವ್ಯವಹಾರಗಳನ್ನು ಮಾಡುತ್ತಾರೆ, ಆದರೆ ಸಾಯುವಾಗ್ಗೆ ಅವುಗಳನ್ನು ಕೂಡಲೆ ಹ್ಯಾಗೆ ಬಿಡಲಿಕ್ಕಾ ದೀತು? ಇದೊಂದು ಸಂಶಯವು ತನ್ನಲ್ಲಿ ಉಂಟಾಗಿದೆ, ಕಾರಣ ಅದನ್ನು ನಿ ಸನ ಮಾಡಿ ತನ್ನನ್ನು ಸದುಪದೇಶದಿಂದ ಉದರಿಸಬೇಕೆಂದು ಅಲ್ಲಮನನ್ನು ಬೇಡಿ ಕೊಳ್ಳಲು, ಅವನು-"ಅಕ್ಕಾ ಮುಕ್ತಾಯಿ, ನಾನು ಬಳಿಕೆಯಲ್ಲಿ ಕಂಡಿ ರುವ ದೃಷ್ಟಾಂತದಿಂದ ನಿನ್ನ ಸಂಶಯವನ್ನು ದೂರ ಮಾಡುವೆನು. ಚಿತ್ತವಿಟ್ಟು ಕೇಳು-ಹಾಲು ಹಸುಮಕ್ಕಳ ಮುಖ್ಯ ಜೀವನವಿದ್ದು, ಕೂಸು ಹುಟ್ಟಿದ ಕೂಡಲೆ ತಾಯಿಯ ಮೊಲೆಯಲ್ಲಿ ಅದು ಉತ್ಪನ್ನವಾಗುತ್ತದೆ. ತಮ್ಮ ಮಕ್ಕಳ ಮೇಲೆ ಪ್ರೀತಿಮಾಡುವ ತಾಯಂದಿರು ಅವರಿಗೆ ಹಾಲು ಉಣಿಸಿ ಸಮಾಧಾನಗೊ ಸುತ್ತಾರೆ. ಕ್ರಮೇಣ ಅವರು ದೊಡ್ಡವರಾಗುತ್ತ ನಡೆದಹಾಗೆಲ್ಲ, ಹಾಲು ಉಣಿ ಸುವದನ್ನು ಕಡಿಮೆ ಮಾಡುತ್ತಾರೆ. ಅನಂತರ ಹಾಲೊಳಗೆ ಸಕ್ಕರೆ, ಬೆಲ್ಲ ಮುಂತಾದ ಪದಾರ್ಥಗಳನ್ನು ಹಾಕಿ ಪಾಯಸವನ್ನು ಮಾಡಿಕೊಡುತ್ತಾರೆ

ಹೀಗೆ ಪಾಯಸ ಅನ್ನ ಮುಂತಾದ್ದನ್ನು ಉಣ್ಣಿಸುವ ಅಭ್ಯಾಸವಿಡುವರು. ಇದ ರಿಂದ ತಾಯಿಯ ಮೊಲೆ ಹಾಲಿನ ಕಡೆಗೆ ಮಕ್ಕಳ ಲಕ್ಷವು ಕಡಿಮೆಯಾಗುತ್ತ ಬರುವದು. ಬರಬರುತ್ತ ಅವರಲ್ಲಿ ಹಾಲಿನ ಮರವೆಯು ಸಹ ಆಗಹತ್ತುವದು, ಆ ಮೇಲೆ ಹುಡುಗರಾದರೆಂದರೆ ಅನ್ನ ಪಾನಾದಿಗಳ ಸೇವನೆಯಿಂದ ತಾಯಿಯ ಮೊಲೆ ಹಾಲನ್ನು ಸಂಪೂರ್ಣವಾಗಿ ಬಿಡುವರು. ಇದರಂತೆಯೇ ದೇಶಿಕೋತ್ತಮ ನ ಕೃಪಾಬಲದಿಂದ ಶಿವಭಕ್ತರಲ್ಲಿ ಮೊದಲು ಭಕ್ತಿಯುಂಟಾಗುವದು. ಈ ಶಿವ ಭಕ್ತಿಯಿಂದ ಸಂಸಾರದ ಜಡ ಕರ್ಮಗಳು ಬಿಡಲ್ಪಡುವವು. ಬಳಿಕ ಭಕ್ತನು ಭಕ್ತಿಮಾರ್ಗದಲ್ಲಿ ಹೇಳಿದ ರೀತಿಯಂತೆ ಮನಃಪೂರ್ವಕವಾಗಿ ಸರ್ವಕಾರ್ಯಗ ಳನ್ನು ಶಿವಾರ್ಪಣಭುದ್ಧಿಯಿಂದ ಮಾಡ ಹತ್ತುವನು. ಅದರಿಂದ ಶಿವಜ್ಞಾನವುಂಟಾ ಗಿ ಸರ್ವ ಕರ್ಮಗಳ ನಾಶವಾಗುವದು. ಕರ್ಮನಾಶದಿಂದ ಶಿವಸಾಯುಜ್ಯತ್ವವು ಲಭಿಸುವದು. ಲಿಂಗೈಕ್ಯ-ಮುಕ್ತಿ-ಲಿಂಗಾಂಗಸಾಮರಸ್ಯ-ಕೈವಲ್ಯ-ಬ್ರಹ್ಮಭೂಯ ಕ ಸಾಯುಜ್ಯ ಇವೆಲ್ಲ ಮೋಕ್ಷದ ಹೆಸರುಗಳಿದ್ದು, ಎಲ್ಲವುಗಳ ಅರ್ಥವು ಒಂದೇ ಇರುತ್ತದೆಂದು ಶಾಸ್ತ್ರವುಂಟು. ಸದೇಹ ಮುಕ್ತಿ ವಿದೇಹ ಮುಕ್ತಿ ಹೀಗೆ ಮುಕ್ತಿ ಯಲ್ಲಿ ಎರಡು ಪ್ರಕಾರಗಳಿವೆ. ಜೀವಂತನಿದ್ದರೂ ತನ್ನ ಶರೀರದ ಮತ್ತು ಅದರ ಶೃಂಗಾರದ ಕಡೆಗೆ ಎಳ್ಳಷ್ಟಾದರೂ ಮಮತೆಯು ಇಲ್ಲದಾತನಿಗೆ ಜೀವನ್ಮುಕ್ತನೆಂದೂ ಸದೇಹ ಮುಕ್ತನೆಂದೂ ಕರೆಯುವರು. ಜೀವನ್ಮುಕ್ತನು ಶರೀರಧಾರಣ ಮಾಡಿದ ರೂ ಮಾಡದಂತೆ ವರ್ತಿಸುವನು. ಸ್ಥೂಲಸೂಕ್ಷ್ಮ ಕಾರಣಗಳೆಂಬ ತನುತ್ರಯಗ ಳನ್ನುಳಿದು ಶಿವಸಾಯುಜ್ಯ ಬಲದಿಂದ ನಿರ್ಗುಣನಾಗಿ ಉಳಿಯುವದೇ ವಿದೇಹ ಮುಕ್ತಿಯ ಲಕ್ಷಣ. ಶರೀರಧಾರಣ ಮಾಡಿದಾಗ್ಗೂ ಶರೀರ ಧರ್ಮಗಳನ್ನು ಅಂದ ರೆ ಅದಕ್ಕೆ ಸಂಬಂಧಿಸಿದ ಯಾವತ್ತೂ ವ್ಯವಹಾರಗಳನ್ನು ಬಿಡುವದು ದುಸ್ಸಾಧ್ಯ ವೆಂದು ತಿಳಿಯಬೇಡ. ನಮ್ಮಂಥ ಗುರುಗಳು ಹೇಳಿದ ವಾಕ್ಯವನ್ನು ಭಕ್ತಿಭಾವ ದಿಂದ ನಂಬಿ ಅದರಂತೆ ಆಚರಿಸಹತ್ತಿದರೆ, ನಿನ್ನ ಮನಸ್ಸು ಪ್ರಾಪಂಚಿಕ ವ್ಯವ ಹಾರಗಳಿಂದ ಬಿಡಲ್ಪಟ್ಟು, ನಿರ್ಮಲತ್ವವನ್ನು ಹೊಂದಿ ಶಿವಜ್ಞಾನಪ್ರಾಪ್ತಿಗೆ ಹೇತು ವಾಗುವದು. ಸುಟ್ಟಬೀಜ ಅಥವಾ ವಸ್ತ್ರದಂತೆ ಜೀವನ್ಮುಕ್ತನಿಗೆ ಶರೀರವಿದ್ದರೂ ಅದರ ಮೇಲಿನ ಅಭಿಮಾನವಿರುವದಿಲ್ಲ. ಸುಟ್ಟ ಬೀಜವು ಬಿತ್ತಲ್ಪಟ್ಟಾಗ್ಗೂ ಅಂ ಕುರಿಸದಿರುವಂತೆ, ಅದನ್ನು ಪಾಕಮಾಡಿದರೂ ರುಚಿಯಾಗದಿರುವಂತೆ ಜೀವನ್ಮು ಕ್ತನಿಗೆ ಶರೀರವಿದ್ದರೂ ಅದರ ಗುಣಧರ್ಮಗಳ ಅಭಾವವಿರುವದರಿಂದ ಅದರಿಂದ ಆತನಿಗೆ ಬಂಧನವಿಲ್ಲ. ಮತ್ತು ಸುಟ್ಟ ವಸ್ತ್ರದ ನಾಮರೂಪಗಳು ನಮಗೆ ಗೊತ್ತಾದ ರೂ ಅದು ಬೇರೆ ಕೆಲಸಗಳಿಗೆ ಉಪಯೋಗಿಸಲ್ಪಡದಿರುವಂತೆ, ಶಿವಜ್ಞಾನಾಗ್ನಿಯಿಂದ ಭವಕ್ಕೆ ಕಾರಣವಾದ ಕರ್ಮ ಸಮುದಾಯವನ್ನು ಸುಟ್ಟ ತನುತ್ರಯಗಳಳಿದಂಥ

ಮಹಾತ್ಮರು ಮಾತ್ರ ಶಿವಸಾಯುಜ್ಯ ಮುಕ್ತಿಗೆ ಪಾತ್ರರಾಗುತ್ತಾರೆ. "

ಈ ಪ್ರಕಾರ ಅಲ್ಲಮಪ್ರಭುವರ್ಯನು ಮುಕ್ತಾಯಿಗೆ ಉಪದೇಶ ಮಾಡಲು ಅವಳು ಸಂತೋಷದಿಂದ ಅಲ್ಲಮನಡಿದಾವರೆಗಳಿಗೆ ನಮಸ್ಕರಿಸಿ ಶರಣಾಗತಳಾದ ತನ್ನನ್ನು ದಯಾದೃಷ್ಟಿಯಿಂದ ನೋಡಿ ತನ್ನ ತಮ್ಮನ ವಿಯೋಗದಿಂದಾದ ದುಃಖವನ್ನು ಕಳೆದು ಶಿವಸ್ವರೂಪದಲ್ಲಿ ಐಕ್ಯವಾಗುವಂತೆ ಮಾಡಿ ತನ್ನನ್ನು ರಕ್ಷಿಸಬೇಕೆಂದು ಬೇಡಿಕೊಳ್ಳಲು ಅಲ್ಲಮಪ್ರಭುವು ಕೃಪಾವಿಷ್ಟ ಮಾನಸನಾಗಿ ಅವಳಿಗೆ ವೇದಾದೀಕ್ಷೆಯನ್ನು ಕೊಟ್ಟು ಅವಳ ಮಸ್ತಕದಮೇಲೆ ತನ್ನ ವರದ ಹಸ್ತವನಿಟ್ಟು "ಮುಕ್ತಾಯಿ ನೀನು ಸುಡಿಯಲ್ಲಿ ಶಾಂತಿ ದಾಂತಿಗಳಿಂದ ಕೂಡಿಕೊಂಡಿರು. ಭ್ರಾಂತಿಯನ್ನಳಿದು ಅಹಂಕಾರ ಮಮಕಾರಗಳನ್ನು ಸಂಪೂರ್ಣವಾಗಿ ನಾಶ ಮಾಡು. ಕಾಮಕ್ರೋಧಾದಿ ಷಡ್ರಿಪುಗಳನ್ನು ಜಯಿಸು. ಶಿವಭಕ್ತಿಯನ್ನು ಅಭಿವೃದ್ಧಿಗೊಳಿಸು ಹೀಗೆ ಆಚರಿಸಿದರೆ ಮೋಕ್ಷಪ್ರಾಪ್ತಿಯು ನಿಜವಾಗಿ ಉಂಟಾಗುವದು. ಇದಕ್ಕೂ ಹೆಚ್ಚಿಗೆ ಏನೂ ಹೇಳತಕ್ಕದ್ದಿಲ್ಲ. "ಎಂದು ಬೋಧಿಸಿ ಅವಳ ಹಸ್ತದಲ್ಲಿರುವ ಇಷ್ಟಲಿಂಗದ ಕಡೆಗೆ ಅವಳ ದೃಷ್ಟಿಯನ್ನು ಸ್ಥಿರಗೊಳಿಸಿ, ಅದರಿಂದ ಲಿಂಗಸ್ವರೂಪಜ್ಞಾನಾನುಭವವನ್ನು ಅವಳಿಗೆ ಮಾಡಿಕೊಟ್ಟು ಕೃತಕೃತ್ಯಳನ್ನಾಗಿ ಮಾಡಿದನು. ಬಳಿಕ ಅವಳು ಅಲ್ಲಮಪ್ರಭುವಿನ ಚರಣಕಮಲ ಧ್ಯಾನದಲ್ಲಿ ತತ್ಪರಳಾಗಿ ಆತನ ಉಪದೇಶಬಲದಿಂದ ಶಿವಸಾಯುಜ್ಯ ಮುಕ್ತಿಯ ಸುಖವನ್ನನುಭವಿಸುತ್ತ ಲೋಕದಲ್ಲಿ ಪವಿತ್ರ ಸ್ತ್ರೀಯಳೆಂದು ಲೌಕಿಕವನ್ನು ಪಡೆದು ಸುಖವಾಗಿದ್ದಳು.

---



# ೯ನೆಯ ಅಧ್ಯಾಯ.




## ಪ್ರಭುವು ಸೊನ್ನಲಾಪುರದ ಸಿದ್ಧರಾಮನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಕಾಪಾಡುವಿಕೆ.




ದಿನ ಅಧ್ಯಾಯದಲ್ಲಿ ಹೇಳಿದಂತೆ ಅಲ್ಲಮ ಪ್ರಭುವು ಮುಕ್ತಾಯಿಯನ್ನು ಕೃತಾರ್ಥಳನ್ನಾಗಿ ಮಾಡಿ ಭೂಮಿಯ ಮೇಲೆ ಇರುವ ಉಳಿದ ಶಿವಭಕ್ತರಿಗೆ ಭಕ್ತಿಯ ರೀತಿಯನ್ನೂ ಲಿಂಗ ನಿಷ್ಠೆಯ ರಹಸ್ಯವನ್ನೂ ಕಲಿಸಿ ಅವರನ್ನು ಉದ್ಧರಿಸಬೇಕೆಂಬ ಇಚ್ಛೆಯಿಂದ ತಾನೇ ಗುರು, ಲಿಂಗ, ಜಂಗಮ ರೂಪದಿಂದ ಸಂಚರಿಸುತ್ತ ಬರುವಾಗ, ಸಗುಣ ಮತ್ತು ನಿರ್ಗುಣವೆಂಬೆರಡು ಪಕ್ರಾರದ ಸಂಬಂಧಗಳು ತನಗಿಲ್ಲೆಂದು ಜನಂಗೆ ತೋರಿಸುತ್ತ ಜಂಗಮ ವೇಷದಿಂದ ಸಂಚರಿಸುವ ವೇಳೆಯಲ್ಲಿ, ವಿಖ್ಯಾತಿ ಪೂಜಾಲಾಭ ಇವುಗಳ ಇಚ್ಛೆಯಲ್ಲಿ ಸಿಲುಕಿದ ಸೊನ್ನಲಾಪುರದ ಸಿದ್ಧರಾಮನನ್ನು ನೋಡಿ ಆತನನ್ನು ವೀರಶೈವ ಮಾರ್ಗದಲ್ಲಿ ನೆಲಗೊಳಿಸಬೇಕೆಂದು ಸೊಲ್ಲಾಪುರವೆಂಬ ಪಟ್ಟಣಕ್ಕೆ ಬಂದನು. ಆ ಪಟ್ಟಣದಲ್ಲಿ ಸಿದ್ಧರಾಮನು ಶಂಕರನನ್ನು ಆರಾಧಿಸುತ್ತ ಸ್ವಾನಂದರೂಪ ಸಾರ್ವಭೌಮ ರಾಜ್ಯದ ಸುಖೋಪಭೋಗವನ್ನು ಹೊಂದುತ್ತ ಪ್ರಸಿದ್ಧನಾಗಿದ್ದನು. ಆತನು ಹಣೆಯಲ್ಲಿ ಮೂರನೆಯ ಕಣ್ಣನ್ನು ಪಡೆದಿದ್ದನು. ಶರೀರದಿಂದ ಗಟ್ಟಿಗನಿದ್ದು ಅನೇಕ ದ್ರವ್ಯ ಸಂಚಯವಿದ್ದ ಕಾರಣ ಆತನ ಸರ್ವೇಚ್ಛೆಗಳು ಪೂರ್ಣತೆಯನ್ನು ಹೊಂದಿದ್ದವು. ಅವನು ಶಿವನಿಂದ ವರವನ್ನು ಪಡಕೊಂಡದ್ದರಿಂದ ಬಹಳ ಗರ್ವಿಷ್ಠನಾಗಿದ್ದನು. ಅವನಲ್ಲಿ ಸರ್ವ ಪ್ರಕಾರದ ಪರಿವಾರವಿತ್ತು. ಅವನು ತನ್ನಲ್ಲಿದ್ದ ಹಣವನ್ನು ಭವ್ಯವಾದ ಕಟ್ಟಡಗಳನ್ನೂ ಶಿವಾಲಯಗಳನ್ನೂ ಕಟ್ಟಿಸುವದರಲ್ಲಿ ವ್ಯಯಮಾಡುತ್ತ ಈ ಕಾರ್ಯಗಳಲ್ಲಿಯೇ ಅವನು ಸದಾಮುಗ್ನನಾಗಿರುತ್ತಿದ್ದನು. ಸ್ವಾರ್ಥದಕಡಿಗೆ ಆತನು ಹೆಚ್ಚು ಲಕ್ಷಕೊಡು

ತ್ತಿದ್ದನು. ಅಖಂಡ ಶಿವಭಕ್ತಿ ಅದರಿಂದಾಗುವ ಶಿವಜ್ಞಾನ ಇವುಗಳ ಪಂಜ ಯವು ಆತನನಿಗೆ ಸ್ವಲ್ಪಾದರೂ ಇದ್ದಿಲ್ಲಾದ್ದರಿಂದ ಜಗತ್ತಿನಲ್ಲಿ ತಾನೊಬ್ಬನೇ ಜಾಣನೆಂದೂ ಧಾರ್ಮಿಕನೆಂದೂ ತಿಳಿದುಕೊಂಡಿದ್ದನು. ಆತನು ವೇದಶಾಸ್ತ್ರಾಗ ಮಗಳನ್ನು ಸ್ವತಃ ಓದಿರಲಿಲ್ಲ. ಜನರ ಚಿತ್ತಾಕರ್ಷಣ ಮಾಡುವಂಥ ಭವ್ಯ ಮಂದಿರಗಳನ್ನು ಕಟ್ಟಿಸಿ ಜನರಲ್ಲಿ ತನ್ನ ಲೌಕಿಕವನ್ನೂ ಅವರಿಂದ ತಾನು ಪೂಜಿಸಲ್ಪಡಬೇಕೆಂಬ ಭಾವನೆಯನ್ನೂ ಹುಟ್ಟಿಸುವದರಲ್ಲಿಯೇ ತನ್ನ ಸರ್ವ ವೇಳೆಯುನ್ನು ವೆಚ್ಚಮಾಡುತ್ತಿದ್ದನು. ಅಲ್ಲಮ ಪ್ರಭುವು ತನ್ನ ಯೋಗಬಲದಿಂದ ಇದೆಲ್ಲವುನ್ನರಿತು ಸಿದ್ಧರಾಮುನನ್ನು ಈ ನೀಚ ಕೆಲಸಗಳಿಂದ ಬಿಡಿಸಬೇಕೆಂಬ ದಾಗಿ ಆ ಊರ ಸಮಿಪಕ್ಕೆ ಬರಲು, ಲಂಕೆಗೆ ಹೋಗಬೇಕೆಂದು ರಾಮನು ಹೊರಟಾಗ್ಗೆ ದಾರಿಯಲ್ಲಿ ಕಪಿಗಳು ಕಲ್ಲಿನ ದೊಡ್ಡ ದೊಡ್ಡ ರಾಸಿಗಳನ್ನು ಹಾಕಿದಂತೆ, ಸಿದ್ಧರಾಮುನ ಕಟ್ಟುವ ಕೆಲಸಕ್ಕೆಂದು ಸೊಲ್ಲಾಪುರದಲ್ಲಿ ಎಲ್ಲಿ ನೋಡಿದರೂ ಮಂ ಣಿನ ರಾಸಿ, ಸುಂಣದಗುಂಪಿ, ಕಲ್ಲು ಕಟ್ಟಿಗೆ, ಉಸುಬುಗಳ ಸಂಣ ದೊಡ್ಡ ದಿಬ್ಬ ಗಳು ಸಿದ್ಧರಾಮುನ ಚಾಕರ ಜನರಿಂದ ಹಾಕಲ್ಪಟ್ಟಿದ್ದವು. ಅವುಗಳನ್ನು ನೋಡಿ ಅಲ್ಲಮನು ತನ್ನೊಳಗೆ ತಾನೇ ಗಟ್ಟಿಯಾಗಿ—“ ಈ ಸಿದ್ಧರಾಮನು ವಿದ್ವಾಂಸನೆಂದು ನಾವು ಕೇಳಿದ್ದೆವು. ಇವನ ಕೃತಿಯು ಹೀಗೆ ಯಾಕೆ ಅದೆ? ಮೋಕ್ಷಪ್ರಾಪ್ತಿ ಗಾಗಿ ಯತ್ನ ಮಾಡದೆ ಕೆರೆ-ಕಾಲುವೆ-ಮನೆ ಮಂಟಪಾದವುಗಳನ್ನು ಕಟ್ಟಿಸುವದ ರಲ್ಲಿ ಆಸಕ್ತನಾಗಿ ಪುನಃ ಬಂಧನದಲ್ಲಿ ಬೀಳುವನಲ್ಲಾ! ಈತನು ಮನೋಹರವಾದ ಮಂದಿರಗಳನ್ನೂ ಪೂಜಾ ಮಂಡಪಗಳನ್ನೂ ಕಟ್ಟಿಸಿ ಅದರಿಂದ ಕೀರ್ತಿಯುತನಾಗ ಬೇಕೆಂದು ಬಯುಸುತ್ತಾನೆ. ವಾಸ್ತವಿಕವಾಗಿ ತನ್ನ ಆತ್ಮಹಿತದ ಬಗ್ಗೆ ಸ್ವಲ್ಪವೂ ವಿಚಾರಿಸುವದಿಲ್ಲ. ಅಕಟಾ!! ಈತನು ವ್ಯರ್ಥವಾದ ಕಾರ್ಯಗಳಲ್ಲಿ ತೊಡಗಿ ದ್ದಾನೆ. ತಾನು ಸಿದ್ಧಪುರುಷನಿದ್ದೇನೆಂದು ತಿಳಿದು ಹೆಂಡತಿಯುನ್ನು ಮಾತ್ರ ತೊರೆ ದಿದ್ದಾನೆ. ಆದರೆ ಚನ್ನಾಗಿ ವಿಚಾರ ಮಾಡಿದರೆ ಸಂಸಾರಿಗಳಿಗಿಂತ ಈತನಲ್ಲಿ ಕಾಮ ಕ್ರೋಧಾದಿ ಗುಣಗಳು ಹೆಚ್ಚು ಸ್ಫುಟವಾಗಿವೆ. ತನ್ನ ಕಾಲಿಗೆ ಇದ್ದ ದಾರದ ಬೇಡಿಗಳನ್ನು ಹರಿದು ಬಂಗಾರದ ಸಂಕೊಲೆಗಳನ್ನು ಹಾಕಿಕೊಂಡವನಂತೆ ಈತನ ಸ್ಥಿತಿಯದೆ. ತನಗೆ ಮೊದಲು ಪ್ರಾಪ್ತವಾದ ಚಿಕ್ಕ ಸಂಸಾರವನ್ನು ತೊರೆದು ಜನ ರಿಂದ ಖ್ಯಾತಿಯುನ್ನು ಹೊಂದಿ ಅವರಿಂದ ಪೂಜಿಸಿಕೊಳ್ಳಬೇಕೆಂಬ ಇಚ್ಛೆಯಿಂದ ಹಿರಿಯ ಸಂಸಾರದಲ್ಲಿ ಸಿಲುಕಿ ಕೊಂಡಿರುವನು. * ಇವನ ವರ್ತನವನ್ನು ನೋಡಿ

* ಟೀಪು—“ ಚಿಕ್ಕಸಂಸಾರವನು ಸಡಿಲಿಸಿ । ಹೊಕ್ಕನಲ್ಲಾ ಹಿರಿಯಸಂಸಾ | ರಕ್ಕಟಾ ವಿಖ್ಯಾತಿಪೂಜಾಲಾಭದಿಚ್ಛೆಯಲಿ ॥ ಸಿಕ್ಕಿಬಿದ್ದನು ಸಿದ್ಧರಾಮನು । ಮಿಕ್ಕಭವ ಭಾಗಿಗಳನಾದಡೆ । ಮುಕ್ಕದೇವಿಧಿಯೆನುತಲಲ್ಲಮನೋಡಿಬೆರಗಾದ ॥ ”

ನಿಜವಾದ ಸಾಧು ಪುರುಷರು ನಗಲಿಕ್ಕಿಲ್ಲವೇ? ಈತನು ಸಂಸಾರ ಭೀತಿಯಿಂದ ವೈರಾಗ್ಯ ಧಾರಣಮಾಡಿ ಶಿವನಿಗೆ ಶರಣು ಹೋದನು. ಆದರೆ ದುರ್ದೈವದಿಂದ ಜನರ ಒಲುಮೆಯನ್ನು ಗಳಿಸಿ ಅವರಿಂದ ಪೂಜಿಗೊಂಬಬೇಕೆಂಬ ಬಲು ದೊಡ್ಡ ಸಂಸಾರದಲ್ಲಿ ಬಿದ್ದುಕೊಂಡನು ಎಮ್ಮಿಯು ಒದ್ದೀತೆಂಬ ಭೀತಿಯಿಂದ ಓಡಿಹೋಗಿ ಆನೆಯ ಕಾಲೊಳಗೆ ಸಿಲುಕಿಕೊಂಡ ಮೂರ್ಖನಂತೆ, ಈ ಸಿದ್ಧರಾಮನ ಸ್ಥಿತಿಯಾಗಿದೆ. ”

ಹೀಗೆ ಸಿದ್ಧರಾಮನ ನಿಂದಾಪರ ವಾಕ್ಯಗಳನ್ನು ಅವನ ಚಾಕರ ಜನರು ಕೇಳುವಂತೆ ಅಲ್ಲಮನು ಆಡಿದ್ದರಿಂದ, ಆ ಬಡ ಜಂಗಮನನ್ನು ಅಲ್ಲಿಂದ ದೂರ ಅಟ್ಟಿದರು. ಆದರೂ ಪ್ರಭುದೇವರು ಮುಗುಳು ನಗೆಯಿಂದ ಸಿದ್ಧರಾಮನನ್ನು ವಿಶೇಷವಾಗಿ ನಿಂದಿಸಹತ್ತಲು ಚಾಕರ ಜನರು ಗುಂಪಾಗಿ ಅಲ್ಲಮನನ್ನು ಸುತ್ತು ಗಟ್ಟಿ ಹಿಡಿದು ಹೊಡಿಯಬೇಕೆಂದು ಯತ್ನಮಾಡಿದರು. ಆದರೆ ಅವರ ಕೈಗೆ ಸಿಗದೆ ಇಂಬಾಗಿ ನಿಂತು ಮಾತು ಮಾತಿಗೆ ಸಿದ್ಧರಾಮನನ್ನೇ ಕುರಿತು ಮರ್ಮೋದ್ಘಾಟನದ ಮಾತುಗಳನ್ನಾಡ ಹತ್ತಿದನು—“ ಎಲೈ ಮೂರ್ಖ ಜನರುಗಳಿರಾ, ನಿಮ್ಮ ಗುರುವಿನ ಜಾಣತನವು ಮಣ್ಣು, ಕಲ್ಲು, ತಮಾಸೆ ಮುಂತಾದ್ದರಲ್ಲಿಯೂ ಅಜ್ಞಾನ ಜನರ ಮೆಚ್ಚಿಗೆಯನ್ನು ಪಡಕೊಳ್ಳುವದರಲ್ಲಿಯೂ ಮಾತ್ರ ಇರುತ್ತದೆ. ನಿಮಗೆ ಕಪಟೋಪದೇಶ ಮಾಡಿ ನಿಮ್ಮನ್ನು ಮೋಸಗೊಳಿಸಿ ತಾನೂ ನಾಶ ಹೊಂದುವನಲ್ಲದೆ ನಿಮ್ಮನ್ನೂ ಸಹ ನಾಶಗೊಳಿಸುವನು. ನಿಮ್ಮ ಗುರುವಾದ ಸಿದ್ಧನು ನಿಜವಾಗಿ ಆತ್ಮವಂಚಕನಿದ್ದಾನೆ. ಕುರುಡನನ್ನು ಹಿಂಬಾಲಿಸಿದ ಜನರು ತಗ್ಗಿನಲ್ಲಿ ಬಿದ್ದು ನಾಶಹೊಂದುವಂತೆ ದುರ್ಮಾರ್ಗ ಗಾಮಿಯಾದ ಈ ಸಿದ್ಧನಲ್ಲಿ ನಂಬಿಗೆ ಇಟ್ಟು ಶಿಷ್ಯರಾದ ನೀವೆಲ್ಲರೂ ನರಕಗಾಮಿಗಳಾಗುವಿರಿ. ನಿಮ್ಮಲ್ಲಿ ಜಾಣತನವು ಎಳ್ಳಷ್ಟಾದರೂ ಇಲ್ಲದ್ದರಿಂದ ನೀವು ಆತನ ಸೇವೆಯಲ್ಲಿ ತೊಡಗಿ ವ್ಯರ್ಥ ಪ್ರಯತ್ನಗಳಲ್ಲಿ ಮುಳುಗಿರುವಿರಿ. ಪ್ರತ್ಯಕ್ಷ ಜ್ಯೋತಿರ್ಮಯುವಾದ ಅಸದೃಶವಾದ ಸಚ್ಚಿದಾನಂದ ಸ್ವರೂಪ ಲಿಂಗವನ್ನು ಸಾಕ್ಷಾತ್ಕರಿಸಿಕೊಂಡು ಭೇದಭಾವನೆಯನ್ನಳಿದು ಒಳಗೂ ಹೊರಗೂ ಲಿಂಗಾಕಾರ ಸ್ಥಿತಿಯುಂಟಾಗಿ ತಾದಾತ್ಮ್ಯ ಸಿದ್ಧಿಯನ್ನು ಪಡೆದು ಜೀವನ್ಮುಕ್ತನೆನಿಸಿ ಸುಖಿಯಾಗಿರದೆ, ನಿಮ್ಮ ಗುರುವು ಭ್ರಾಂತನಾಗಿ ಸದಾ ವ್ಯರ್ಥವಾದ ಬಾಹ್ಯಾಡಂಬರ ಕಾರ್ಯಗಳಲ್ಲಿ ಆಸಕ್ತನಾಗಿರುವನು. ಶಿವಲಿಂಗವು ತೇಜಃಪುಂಜವಾದದ್ದೂ ಸೂರ್ಯನಂತೆ ಪ್ರಕಾಶಮಯುವಾದದ್ದೂ ಜಗದ್ವ್ಯಾಪಕವಾದದ್ದೂ ಇರಲು ಅದಕ್ಕಾಗಿ ಗುಡಿ--ಗೋಪುರ ಮುಂತಾದವುಗಳನ್ನು ಕಟ್ಟಿಸುವದರಲ್ಲಿ ಶಿವಯೋಗಿಗಳಿಗೆ ಏನೂ ಫಲವಿಲ್ಲ. ಎಲೈ ಚಾಕರ ಜನರೆ ನಾನು ಹೇಳಿದ್ದು ನಿಮಗೆ ತಿಳಿದಿರಲಿಕ್ಕಿಲ್ಲ. ಆದ್ದರಿಂದ ನಿಮ್ಮ ಗುರುವಾದ ಸಿದ್ಧರಾಮನನ್ನು ನನ್ನೆಡೆಗೆ ಕರ

ಕೊಂಡು ಬರ್ರಿ. ಅವನಲ್ಲಿ ಏನಾದರೂ ಜಾಣತನವಿದ್ದರೆ ನನ್ನ ಒಂದೆರಡು ಪ್ರಶ್ನೆ
ಗಳಿಗೆ ಉತ್ತರಕೊಡುವನು. ನೀವು ಯಾರಿಗೆ ಗುರುವೆನ್ನುತ್ತೀರೋ ಅವನು ಶುದ್ಧ
ಗಿಂ ಅಂದರೆ ಕಲ್ಲು ಆಗಿದ್ದಾನೆಂದು ತಿಳಿದುಕೊಳ್ಳಿರಿ” ಎಂದು ನುಡಿಯಲು ಈ
ಪ್ರಕಾರ ಕಠೋರವಾದ ಗುರುನಿಂದೆಯನ್ನು ಕೇಳಿ ಅವರೆಲ್ಲರು ಸಿಟ್ಟಿನಿಂ
ಕಣ್ಣು ಕೆಂಪಗೆಮಾಡಿ ಅಲ್ಲಮನನ್ನು ಹಿಡಿದು ಹೊಡಿಯಬೇಕೆಂದು ಬಹ
ಪ್ರಯತ್ನ ಮಾಡಿದರು; ಆದರೆ ಆಕಾಶದಂತೆ ಅವನು ಯಾರ ಕೈಗೂ ಸಿಗಲಿಲ್ಲ.
ಅವರನ್ನು ಬಿಟ್ಟು ಒತ್ತಟ್ಟಿಗೆ ನಿಂತುಕೊಂಡ ಅಲ್ಲಮನು-“ಶಾಬಾಸ ! ಗುರುಸೇವೆಯನ್ನು
ಚನ್ನಾಗಿ ಮಾಡಿದಿರಿ. ನನ್ನೊಬ್ಬನ ಮೇಲೆ ನೀವೆಲ್ಲರೂ ಏರಿ ಬಂದಿರಿ. ಆದರೂ
ನಿಮ್ಮ ಕೈಗೆ ನಾನು ಸಿಗಲಿಲ್ಲ. ನಿಮ್ಮಂಥ ಶೂರ ಪುರುಷರು ಜಗತ್ತಿನಲ್ಲಿ ಯಾ
ದ್ದಾರೆ? ನೀವು ನಿಮ್ಮ ಒಡೆಯನಾದ ಒಡ್ಡರ ರಾಮನನ್ನು ಇಲ್ಲಿಗೆ ಶೀಘ್ರವಾಗಿ ಕ
ಕೊಂಡು ಬರ್ರಿ. ಆತನಿಗೆ ಸಹ ಬಡವಾಟದ ಅಪೇಕ್ಷೆಯು ಬಹಳವದೆ. ಆತ
ಪರಿಣಾಮವಾದರೂ ನಿಮ್ಮಂತೆಯೇ ಆಗುವದು.” ಎಂದು ಅನ್ನಲು, ಈ
ಮಾತನ್ನು ಕೇಳಿ ಅವರೆಲ್ಲರು ಕೋಪೋದ್ರೇಕದಿಂದ—“ಎಲೈ ಬಡ ಜಂಗಮನೆ
ನಿನ್ನನ್ನು ಹಿಡಿಯುವದು ನಮಗೆ ಅಸಾಧ್ಯವೇ ! ನಿನ್ನ ಮೇಲಿನ ಕರುಣಾಭಾ
ದಿಂದ ನಿನ್ನನ್ನು ಹೋಗಗೊಟ್ಟದ್ದಕ್ಕೆ ಸುಮ್ಮನಾಗದೇ ನೀಚನಂತೆ ಮತ್ತೆ ಗುರು
ನಿಂದೆಯನ್ನು ಮಾಡುತ್ತಿರುವಿ. ಇದನ್ನು ಬಿಟ್ಟುಕೊಟ್ಟರೆ ಒಳ್ಳೇದು, ಇಲ್ಲದಿದ್ದ
ನೀನು ಸಂಕಟಕ್ಕೊಳಗಾಗುವಿ.” ಎಂದು ಅಂದರೂ, ಅಲ್ಲಮನು ಕೇಳ
ಮತ್ತೂ ಹೆಚ್ಚಾಗಿ ಸಿದ್ಧರಾಮನ ನಿಂದೆಯನ್ನು ಮಾಡಲು ಅವರು ಅವನನ್ನು
ಮತ್ತೊಮ್ಮೆ ಹಿಡಿಯ ಹೋದರು. ಆದರೂ ಅವರ ಕೈಗೆ ಅವನು ಸಿಗಲಿಲ್ಲ
ಅದ್ದರಿಂದ ಬೇಸತ್ತು ಅಲ್ಲಮನ ಮೇಲೆ ಕಲ್ಲುಗಳನ್ನು ಎಸೆಯ ಹತ್ತಿದರು
ಆದರೆ ಅವನನ್ನು ಮುಟ್ಟದೆ ಅವು ಪಟಪಟನೆ ನೆಲದ ಮೇಲೆ ಬಿದ್ದವು. ಅಲ್ಲ
ಮನ ಸ್ವರೂಪವು ಆಕಾಶದಂತೆ ಸರ್ವತ್ರ ವ್ಯಾಪಿಸಿಕೊಂಡದ್ದರಿಂದ, ಕಲ್ಲ
ಪ್ರಹಾರಗಳಿಂದ ಅವನಿಗೆ ಏನೂ ಅಪಾಯವಾಗಲಿಲ್ಲ. ಇದರಿಂದ ಅವರು ಬಹ
ಲಜ್ಜಿತರಾಗಿ ತಮ್ಮ ಹತ್ತರಿದ್ದ ಶಸ್ತ್ರಾಸ್ತ್ರ ಡಾಲು ಮೊದಲಾದ ಆಯುಧಗಳನ್ನು
ತಕ್ಕೊಂಡು ಅವನನ್ನು ಇರಿಯ ಹೋದರು. ಆದರೂ ಅಲ್ಲಮನು ಮೊದಲಿನಂ
ನಿರ್ವಿಕಾರನಾಗಿದ್ದನು; ಯಾಕಂದರೆ, ಅಲ್ಲಮನ ಶರೀರವು ಪಂಚಭೂತಾತ್ಮಕವಾ
ಗಿರದೆ ಸಚ್ಚಿದಾನಂದ ಸ್ವರೂಪಾತ್ಮಕವಾದ್ದರಿಂದ ಅವನಿಗೆ ಕಲ್ಲುಗಳ ಹೊಡೆ
ದಿಂದ ಏನೂ ಅಪಾಯವು ಸಂಭವಿಸಲಿಲ್ಲ.

ಹೀಗೆ ಚಾಕರ ಜನರು ಅಲ್ಲಮನಿಗೆ ನಾನಾವಿಧವಾಗಿ ತ್ರಾಸಕೊಟ್ಟಾಗ್ಯು
ಅವರನ್ನು ಕುರಿತು ಅಲ್ಲಮನಲ್ಲಿ ಕೋಪವುಂಟಾಗಲಿಲ್ಲ. ಪ್ರತಿಯಾಗಿ ಅವ

ಮೇಲೆ ಹೆಚ್ಚು ಅಂತಃಕರುಣವುಳ್ಳವನಾದನು. ದ್ವೇಷ ವೈರತ್ವ ಮುಂತಾದವುಗಳಿಲ್ಲದೆ ಅನ್ಯರನ್ನು ಪೀಡಿಸುವದೂ ಅವರಿಗೆ ಅಹಿತವಾಗುವಂತೆ ವರ್ತಿಸುದೂ ನೀಚ ಜನರ ಸ್ವಭಾವವಾಗಿದೆ. ತನಗೆ ಯಾರಾದರೂ ತ್ರಾಸ ಕೊಟ್ಟದ್ದರೆ ಅಥವಾ ಎರಡನೆಯವರಿಂದ ತನಗೆ ಕೇಡು ಸಂಭವಿಸಿದ್ದರೆ, ಅದಕ್ಕೆ ಪ್ರತಿಯಾಗಿ ಅವನಿಗೆ ತ್ರಾಸ ಕೊಡುವದೂ ಕೇಡುಮಾಡುವದೂ ಸಾಧಾರಣ ಮನುಷ್ಯನ ಲಕ್ಷಣವಾಗಿದೆ. ಆದರೆ ತಮಗೆ ತಾಸ್ರ ಕೊಟ್ಟಾಗ್ಯೂ ತಮ್ಮೊಡನೆ ಒಂದು ವೇಳೆ ಹಗೆತನ ಸಾಧಿಸಿದರೂ ಅವರಿಗೆ ಪ್ರತಿಯಾಗಿ ಉಪಕಾರವನ್ನೇ ಯಾರು ಮಾಡುವರೋ ಅವರೇ ಉತ್ತಮರು. ಅಂಥವರೇ ಸಜ್ಜನರು ಅವರೇ ಸಾಧುಗಳು.

ಮತ್ತೆ ಅಲ್ಲಮನು " ನಾನು ಸರ್ವ ಲೋಕಕ್ಕೂ ಸ್ವಾಮಿಯಾಗಿದ್ದೇನೆ ಈ ಚಾಕರ ಜನರು ಅಪರಾಧಿಗಳಿದ್ದು ಶಿಕ್ಷೆಗೆ ಪಾತ್ರರಿದ್ದಾರೆ. ಆದರೂ ಇವರ ಮೇಲೆ ಸಿಟ್ಟಾದರೆ ನನ್ನ ಕ್ರೋಧಾಗ್ನಿಯು ಒಂದು ಕಿಡಿಯು ಮೂರು ಲೋಕಗಳನ್ನು ಸುಡಲು ಸಮರ್ಥವಾಗಿದೆ. ಇವರೊಡನೆ ಕೋಪಿಸಿಕೊಂಡು ಕ್ರೋಧಾಗ್ನಿಯನ್ನು ಬಿಟ್ಟರೆ, ಇಲಿಯಮೇಲೆ ಸಿಟ್ಟಗೆದ್ದು ಮನೆಯನ್ನು ಸುಡುವಂತೆ ಅಯೋಗ್ಯವೆನಿಸುವದು. " ಹೀಗೆ ವಿಚಾರಮಾಡಿ ಸುಮ್ಮನಾದನು.

ಇತ್ತ ಸಿದ್ಧರಾಮನ ಶಿಷ್ಯರೆಲ್ಲ ಕೂಡಿಕೊಂಡು ಸೇನಾಪತಿಯ ಬಳಿಗೆ ಹೋಗಿ ಅಲ್ಲಮನ ವಿಷಯವಾಗಿ ದೂರುಹೇಳಿ, ಅವನನ್ನು ಸೈನ್ಯದೊಡನೆ ಕರಕೊಂಡು ಬಂದರು. ಆನೆ ಕುದುರೆ ರಥ ಭಟರು ಮುಂತಾದ ಅಸಂಖ್ಯಾತ ಚತುರಂಗಬಲದೊಡನೆ ಅವರೆಲ್ಲರು ತನ್ನ ಮೇಲೆ ಏರಿಬರುವವನ್ನು ಅಲ್ಲಮನು ಕಂಡು ತನ್ನ ಅಘಟಿತ ಘಟನಾಶಕ್ತಿಯಿಂದ ಅಂಥ ಸೈನ್ಯವನ್ನು ಕ್ಷಣಮಾತ್ರದಲ್ಲಿ ನಿರ್ಮಾಣಮಾಡಿ, ಅವರೊಡನೆ ಪರಮಾವೇಶದಿಂದ ಹೋರಾಡಿ, ಅವರೆಲ್ಲರನ್ನು ಸೋಲಿಸಿ, ಅವರ ಗರ್ವವನ್ನು ಮುರಿದು ಬಿಟ್ಟನು. ಈ ಯುದ್ಧದಲ್ಲಿ ಪ್ರಾಣಹಿಂಸೆಯು ಸ್ವಲ್ಪಾದರೂ ಆಗಲಿಲ್ಲ, ಯಾಕಂದರೆ ಅಲ್ಲಮಪ್ರಭುವು ಸ್ವತಃ ದಯಾಸಮುದ್ರನಾಗಿದ್ದನು. ಪೂರ್ವದಲ್ಲಿ ವಿಷ್ಣುವು ತನ್ನ ಸುದರ್ಶನ ಚಕ್ರದಿಂದ ಅನೇಕ ಶತ್ರುಗಳನ್ನು ಕೊಂದನು. ಹೀಗೆ ಪ್ರಾಣಹಿಂಸೆಯಿಲ್ಲದ ಯುದ್ಧವು ಪೂರ್ವದಲ್ಲಿ ಎಂದೂ ಜರಗಿದ್ದಿಲ್ಲ ಇನ್ನು ಮುಂದಾದರೂ ಆಗುವಂತಿಲ್ಲ. ಹಿಂಸೆ ಇಲ್ಲದೆ ಜಯಿಸಿದ್ದನ್ನು ನೋಡಿ ಸಜ್ಜನರು ಆನಂದದಿಂದ ಅಲ್ಲಮನನ್ನು ಕೊಂಡಾಡಹತ್ತಿದರು. ಅಲ್ಲಮನ ಉತ್ಕರ್ಷದಿಂದ ಸಿದ್ಧರಾಮನ ಶಿಷ್ಯರಿಗೆ ಸ್ವಲ್ಪಾದರೂ ಸಹನವಾಗಲಿಲ್ಲ. ಆದರಿಂದ ಆದ ಸಂಗತಿಯನ್ನು ತಮ್ಮ ಗುರುವಾದ ಸಿದ್ಧರಾಮನಿಗೆ

ತಿಳಿಸಿ, ಅವನಿಂದ ಈ ಬಡಜಂಗಮನನ್ನು ಪರಾಭವಗೊಳಿಸಬೇಕೆಂದು ಆಲೋಚಿಸಿ, ಸಿದ್ಧರಾಮನ ಬಳಿಗೆ ಬಂದು ದಂಡ ಪ್ರಮಾಣವನ್ನು ಮಾಡಿ, ಕೈಜೋಡಿಸಿ ನಿಂತುಕೊಂಡು "ಗುರುಮಹಾರಾಜನೆ, ಯಾವನೋ ಒಬ್ಬ ಭಿಕ್ಷುಕನು ನಮ್ಮಲ್ಲಿಗೆ ಬಂದು, ನಿಮ್ಮ ನಿಂದೆಯನ್ನು ಅತಿಶಯವಾಗಿ ಮಾಡಹತ್ತಿದ್ದಾನೆ. ಅದನ್ನು ಕೇಳಲಿಚ್ಛಿಸದೆ ಅವನೊಡನೆ ಕಲಹ ಪ್ರಸಂಗವನ್ನು ಮಾಡಲು ಅವನಿಂದ ನಾವೆಲ್ಲರು ಸಂಪೂರ್ಣವಾಗಿ ಸೋಲಿಸಲ್ಪಟ್ಟೆವು. ಮತ್ತು ನಿಮಗೆ ಒಡ್ಡರ ರಾಮನೆಂದು ಅಪಮಾನಕಾರಕ ನುಡಿಗಳನ್ನಾಡಿ ನಗುತ್ತಿರುವನು. ಸ್ವತಃ ನಮಗೆ ಮಾಡಿದ ನಿಂದೆಯಿಂದ ಅಷ್ಟೊಂದು ಕಷ್ಟವೆನಿಸಲಿಲ್ಲ; ಆದರೆ ನಿಮ್ಮ ಸಂಬಂಧವಾಗಿ ಮಾಡಿದ ನಿಂದೆಯು ನಮಗೆ ಎಳ್ಳಷ್ಟಾದರೂ ಸಹನವಾಗದು." ಹೀಗೆ ತನ್ನ ಚಾಕರರು ಹೇಳಿದ್ದನ್ನು ಕೇಳಿ ಸಿದ್ಧರಾಮನು ನಕ್ಕು—"ನನ್ನನ್ನು ನಿಂದಿಸುವ ಈ ಮನುಷ್ಯನು ಯಾರು? ಹಳ್ಳಿಪಳ್ಳಿಗಳಲ್ಲಿ ಭಿಕ್ಷಾರ್ಥವಾಗಿ ತಿರುಗಾಡುವ ಜಂಗಮನಿಗೆ ನನ್ನ ನಿಂದೆಯಿಂದ ಏನು ಲಾಭವಾಗುವದು? ಅಥವಾ ಅವನಿಗೆ ಬುದ್ಧಿಯಾದರೂ ಹೇಗೆ ಹುಟ್ಟೀತು! ಆದರೂ ಅವನಿರುವಲ್ಲಿಗೆ ಹೋಗಿ ನೋಡೋಣ" ಎಂದು ತನ್ನ ಶಿಷ್ಯರೊಡನೆ ಅಲ್ಲಮನಿದ್ದ ಸ್ಥಾನಕ್ಕೆ ಬಂದು ಕಣ್ಣು ಕೆಂಪಗೆಮಾಡಿಕೊಂಡು-"ಎಲೈ ಬಡಜಂಗಮನೆ, ನಿಷ್ಕಾರಣವಾಗಿ ನನ್ನ ನಿಂದೆಯನ್ನು ಯಾಕೆ ಮಾಡುತ್ತಿರುವಿ? ನೀನು ಯಾರು? ಸರ್ವರಿಗೂ ಗುರುವಾಗಿರುವ ನನ್ನನ್ನು ಚೇಷ್ಟೆ ಮಾಡಲಿಕ್ಕೆ ನಿನ್ನಲ್ಲಿ ಧೈರ್ಯವಾದರೂ ಹೇಗೆ ಬಂತು? ಯಾವನೋ ಒಬ್ಬ ಬಡಜಂಗಮನೆಂದು ತಿಳಿದು ನನ್ನ ಚಾಕರರು ನಿನ್ನ ನಿಂದಾ ನುಡಿಗಳನ್ನು ಸೈರಿಸಿಕೊಂಡದ್ದರಿಂದ, ನೀನು ಹೆಚ್ಚು ಉದ್ಧಟವಾಗಿ ಅವರೊಡನೆ ಬಡದಾಟಕ್ಕೆ ನಿಂತಿ. ನಾನು ಯಾರೆಂಬದು ಗೊತ್ತಿಲ್ಲದೆ ಮನಬಲ್ಲಂತೆ ನನ್ನನ್ನು ತಿರಸ್ಕರಿಸುತ್ತಿಯಾ? ಚನ್ನಾಗಿ ತಿಳಿದು ನೋಡು. ಹೀಗೆ ವರ್ತಿಸಿದ್ದಕ್ಕಾಗಿ ನನ್ನ ಶಿಷ್ಯರು ನಿನ್ನ ನಾಲಿಗೆಯನ್ನು ಅಗ್ಗೀನೇ ಶೀಳಿ ಬಿಡತಕ್ಕದ್ದಿತ್ತು! ಆದರೆ ಅವರು ತಡಕೊಂಡದ್ದಕ್ಕಾಗಿ ನೀನು ಬಹಳ ಕೊಬ್ಬಿರುವಿ. ಕಾರಣ ನಾನೇ ನಿನ್ನ ನಾಲಿಗೆಯನ್ನು ಮೂಲದಿಂದ ಕಿತ್ತು ಬಿಡುತ್ತೇನೆ.—" ಎಂದು ಆವೇಶದಿಂದ ಸಿದ್ಧರಾಮನು ತನ್ನ ಮೇಲೆ ಏರಿ ಬರುವದನ್ನು ಕಂಡು ಶಾಂತಿಯ ಮತ್ತು ಸೌಂದರ್ಯದ ಮೂರ್ತಿಯಾದ ಅಲ್ಲಮ—ಸಿದ್ಧರ ಕುಲವನ್ನು ಉದ್ಧಾರಮಾಡುವಂಥ ಸಿದ್ಧರಾಮನೆ, ಬಹಳ ಉತ್ತಮ. ನಿನ್ನಂಥವರಿಗೆ ಈ ತರದ ವರ್ತನೆಯು ಬಹಳವಾಗಿ ಶೋಭಿಸುತ್ತದೆ. ಸಾಧುಗಳಿಗೆ ಉಚಿತವಾದ ಸಹನ ಶೀಲತೆಯನ್ನೂ ಶಾಂತಿ ಸ್ವಭಾವವನ್ನೂ ಬಿಟ್ಟು, ತದ್ವಿಪರೀತವಾದ ಈ ಸಾಹಸ ಕಾರ್ಯಗಳನ್ನು ಯಾಕೆ ಆರಂಭಿಸುತ್ತೀ? ಶಿವಯೋಗಿಗಳು ತಮ್ಮಿಂದ ಇರಿವೆ ಮೊದಲಾದ ಪ್ರಾಣಿಗಳ ಹಿಂಸೆಯುಂಟಾಗಬಾರದೆಂದು ಮಾರ್ಗದಲ್ಲಿ

ಬಹು ಎಚ್ಚರದಿಂದ ನಡೆಯುವರು. ಮತ್ತು ಕಾಮಕ್ರೋಧಾದಿಗಳ ವಿಕಾರವು ತಮಗುಂಟಾಗಬಾರದೆಂದು ಸರ್ವದಾ ಚಿತ್ತವೃತ್ತಿಯನ್ನು ತಮ್ಮ ಸ್ವಾಧೀನದಲ್ಲಿಟ್ಟು ಕೊಳ್ಳುವರು

ಸಿದ್ಧರಾಮ— ( ಈ ಹಿತೋಪದೇಶಕ್ಕೆ ಲಕ್ಷಕೊಡದೆ ) ಏನಯ್ಯಾ ಭಿಕ್ಷುಕ ಜಂಗಮನೆ, ಸಾಧಾರಣ ಶಿವಯೋಗಿಗಳೆನಿಸಿಕೊಳ್ಳುವವರ ಮುಂದೆ ನಿನ್ನ ಕಪಟೋಕ್ತಿಗಳನ್ನು ಹರಡು. ನನ್ನಂಥ ಬಲಿಷ್ಠನ ಮುಂದೆ ಅದು ನಡಿಯದು. ಇಂತಹ ಕ್ಷುಲ್ಲಕ ಮಾತುಗಳನ್ನಾಡಲಿಕ್ಕೆ ನಿನಗೆ ಯಾವ ಯೋಗ್ಯತೆಯುಂಟು! ನನ್ನ ಹಣೆಯಲ್ಲಿರುವ ನೇತ್ರವನ್ನು ತೆರೆದ ಮಾತ್ರದಲ್ಲಿಯೇ ಜಗತ್ತೆಲ್ಲವು ಸುಟ್ಟು ಬೂದಿಯಾಗುವದು. ಇಂತಹ ಸಾಮರ್ಥ್ಯವು ನನ್ನಲ್ಲಿರುವದು. ಸುಮ್ಮನೆ ಬಾಯಿಗೆ ಬಂದ ಹಾಗೆ ಬಡಬಡಿಸಬೇಡ.

ಅಲ್ಲಮ— ( ಸಿದ್ಧರಾಮನ ಸಿಟ್ಟಿನ ಮಾತುಗಳನ್ನು ಕೇಳಿ ನಗುತ್ತ ) ಶಾಬಾಸ! ಪರಾಕ್ರಮಶಾಲಿಯಾದ ಸಿದ್ಧರಾಮನೆ ಶಾಬಾಸ!! ಈ ಮೊದಲೆ ನಿನ್ನ ನೇತ್ರಾಗ್ನಿಯಿಂದ ಎಷ್ಟು ಲೋಕಗಳನ್ನು ಸುಟ್ಟಿರುವಿ; ಹೀಗೆ ಜಗತ್ತಿಗೆ ತ್ರಾಸ ಕೊಡುವದೂ ಜನರ ಮನಸ್ಸನ್ನು ನೋಯಿಸುವಂತೆ ಆಚರಿಸುವದೂ ಸಾಧುಗಳಿಗೆ ಭೂಷಣವೇ? ಸಿದ್ಧರಾಮನೆ, ಹಿಂಸೆಯು ಶ್ರೇಷ್ಠವಾದ ಕೃತಿಯೆಂಬದಾಗಿ ನಿನ್ನ ಅಭಿಪ್ರಾಯವಿದ್ದಂತೆ ತೋರುತ್ತದೆ, ನಿನ್ನಂತೆ ಶಿವಯೋಗಿಗಳು ವರ್ತಿಸಿದ್ದನ್ನು ನಾನು ಪೂರ್ವದಲ್ಲಿ ಕೇಳಿಯೂ ಇಲ್ಲ ನೋಡಿಯೂ ಇಲ್ಲ ನೀನು ಈ ವರೆಗೂ ಈ ಪ್ರಕಾರದ ಪಾತಕ ಸಂಗ್ರಹಗಳನ್ನು ಎಷ್ಟು ಮಾಡಿಕೊಂಡಿರುವಿ; ತಪಸ್ವಿಗಳಿಗೆ ಶಾಂತಿಯೇ ಮುಖ್ಯ ಧನವಾಗಿದೆ. ಕ್ರೋಧವು ಅವರ ಧನವಲ್ಲ. ಪಾತಕದ ಮತ್ತು ಸಿಟ್ಟಿನ ಸಂಗ್ರಹವನ್ನು ಮಾಡಿಕೊಂಡಿರುವವರು ಸಂಸಾರಿಗಳಲ್ಲದೆ ಸಾಧುಗಳಲ್ಲ. ಹೀಗೆಂದು ನುಡಿಯಲು, ಅದನ್ನು ಕೇಳಿ ಸಿದ್ಧರಾಮನು ಈತನು ಯಾರೋ ತನ್ನ ಯಥಾರ್ಥ ಶಕ್ತಿಯನ್ನರಿಯದ ಮನುಷ್ಯನಿರಬೇಕು, ಆದ್ದರಿಂದ ಈತನ ಗರ್ವವನ್ನು ಸಂಪೂರ್ಣವಾಗಿ ಮುರಿಯಬೇಕೆಂದು ಯೋಚಿಸಿ ತನ್ನ ಹಣೆಗಣ್ಣನ್ನು ತೆರೆದನು. ತೆರೆದಾಕ್ಷಣವೆ ಅದರಿಂದ ಚಕಿಚಕಿತವಾದ ಅಗ್ನಿಯು ಹೊರಬಿದ್ದು ಅಲ್ಲಮಪ್ರಭುವಿನ ಚರಣಕಮಲವನ್ನು ಮುಟ್ಟಲು ಸಮರ್ಥವಾಗದೆ, ಅವನ ಪಾದನಖದಿಂದ ಹಿಂದುರಿಗಿ ಸುತ್ತುಮುತ್ತಲಿದ್ದವರನ್ನು ಸುಡಲಿಕ್ಕೆ ಹತ್ತಿತು. ಅದೆಲ್ಲ ನೋಡಿ ಅಲ್ಲಿದ್ದವರು ದುಃಖಮಾಡುತ್ತ ಸಿದ್ಧರಾಮನನ್ನು ಹಳಿಯುತ್ತ ಬಡವನ ಸಿಟ್ಟು ದವಡಿಗೆ ಮೂಲವೆಂಬ ಗಾದೆಯಂತೆ ಈ ಸಿದ್ಧರಾಮನ ಅವಿವೇಕತನದಿಂದ ತಮಗೆ ಸಂಕಟವು ಒದಗಿತೆಂದೂ ಮತ್ತು ಸಿದ್ಧರಾಮನ ನಿಟಲ ನೇತ್ರ

ದಿಂದ ಹೊರಟ ಜ್ವಾಲೆಯು ಜಂಗಮನ ಪಾದವನ್ನು ಮುಟ್ಟದೆ ತೆರಳಿದ್ದರಿಂದ ಆತನ ಮಹತ್ವವೂ ಯೋಗ್ಯತೆಯೂ ಅಂಚಿತ್ಯವಾದದ್ದೆಂದೂ ತಿಳಿದುಕೊಳ್ಳದ ಮತ್ತು ಬೆಂಕಿಯನ್ನು ನೊಂದಿಸಲು ಶಕ್ತಿಸಾಲದ ಸಿದ್ಧರಾಮನನ್ನು ತಿರಸ್ಕರಿಸಿ ನುಡಿಯಲು ಸಿದ್ಧರಾಮನು ಸಹ ಈ ನಿಂದೆಯನ್ನು ಕೇಳಿಯೂ ಕೇಳದವನಂತೆ ಸುಮ್ಮನಿರಲು ದಯಾಸಮುದ್ರನಾದ ಅಲ್ಲಮಪ್ರಭುವು ಸೊಲ್ಲಾಪುರದ ಜನರ ಮೇಲೆ ಕನಿಕರಪಟ್ಟು ಅತಿಪ್ರಖರವಾಗಿ ಉರಿಯುವ ಜ್ವಾಲೆಯಿಂದ ಜನರಿಗೆ ಆಗುವ ಉಪದ್ರವವನ್ನು ತಪ್ಪಿಸಬೇಕೆಂದು ಚಿಂತಿಸಿದನು. ಪೂರ್ವದಲ್ಲಿ ಸಮುದ್ರ ಮಥನ ಕಾಲದಲ್ಲಿ ಹೊರಟ ಮಹಾಕಾಳಕೂಟ ವಿಷವನ್ನು ಶಿವನು ತಾನೇ ಕುಡಿದು ಲೋಕಕ್ಕುಂಟಾದ ಉಪದ್ರವವನ್ನು ದೂರಮಾಡಿದಂತೆ, ಈ ಕೃಪಾಸಾಗರನಾದ ಅಲ್ಲಮಪ್ರಭುವು ಸೊನ್ನಲಾಪುರ ಪಟ್ಟಣವನ್ನು ಸುಡಹತ್ತಿದ ಸಿದ್ಧರಾಮನ ನೇತ್ರಾಗ್ನಿಯನ್ನು ಶಾಂತಮಾಡಿದನು.

ಈ ಅದ್ಭುತವನ್ನು ನೋಡಿ ಸಿದ್ಧರಾಮನು ಈ ಜಂಗಮನು ಕೇವಲ ಶಿವನೇ ಇದ್ದು ಗುರು ರೂಪದಿಂದ ತನ್ನ ರಕ್ಷಣೆಗಾಗಿ ಬಂದಿರಬೇಕೆಂದು ಚಿಂತಿಸಿ, ನೆಟ್ಟಗೆ ಬಂದು ನಮ್ರಭಾವದಿಂದ ಅಜ್ಞಾನಿಯಾದ ತನ್ನನ್ನು ಕಾಪಾಡಬೇಕೆಂದು ಆತನ ಪಾದಗಳ ಮೇಲೆ ಬಿದ್ದು ಹೊರಳಾಡಿದನು. ಅನಂತರ ದಯಾಸಾಗರನಾದ ಅಲ್ಲಮನು ತನ್ನ ಕಯ್ಯಿಂದ ಸಿದ್ಧರಾಮನನ್ನು ಹಿಡಿದೆಬ್ಬಿಸಿ—" ಎಲೈ ಸಿದ್ಧರಾಮನೆ, ನಿನ್ನಂಥ ಶಿವಯೋಗಿಗೆ ಒಡ್ಡಿದ ಈ ಕಾರ್ಯಾರಂಭವು ಯೋಗ್ಯವಾದದ್ದಲ್ಲ. ಜನರಲ್ಲಿ ತನಗೆ ಹೆಚ್ಚು ಮಾನಮರ್ಯಾದೆಗಳು ಸಿಗಬೇಕು. ತಾನು ದೊಡ್ಡ ಸಾಧುವಾಗಿದ್ದೇನೆಂಬ ಕೀರ್ತಿಯುಂಟಾಗಬೇಕು, ತಾನು ಕೈಕೊಂಡ ಉದ್ದೇಶವು ಸಫಲವಾಗಿ ಅದರಿಂದ ತನಗೆ ಲಾಭವುಂಟಾಗಬೇಕು—ಅಂದರೆ ತನಗೆ ಗೌರವ ವಿಶೇಷಗಳು ಪ್ರಾಪ್ತವಾಗಬೇಕು. ಎಂಬ ಮೊದಲಾದ ಅಲ್ಪ ಕಾರಣಗಳ ದೆಸೆಯಿಂದ ನಿಜವಾಗಿ ಶಿವಯೋಗಿಗಳು ಆತ್ಮಸ್ವರೂಪ ಧ್ಯಾನಾರೂಢತ್ವವೆಂಬ ತಮ್ಮ ವಾಸ್ತವಿಕ ಹಿತದ ಕಡೆಗೆ ದುರ್ಲಕ್ಷ ಮಾಡುವದಿಲ್ಲ. ಕೀರ್ತಿ ಗೌರವ ಮುಂತಾದವುಗಳ ಲಾಭಕ್ಕಾಗಿ ಯತ್ನಪಟ್ಟು ಶಿವಯೋಗಿಯೆನಿಸಿಕೊಳ್ಳುವವನು ತಾನು ಬಿತ್ತಿದ ಬೆಳೆಯನ್ನು ಉಣ್ಣುವಂತೆ ಅವುಗಳಿಂದಾಗುವ ಭೋಗವನ್ನು ಭೋಗಿಸಿ ತೀರಬೇಕಲ್ಲದೆ ಮುಕ್ತನಾಗಲಾರನು. ನಿಜವಾದ ಶಿವಯೋಗಿಗಳು ಲೌಕಿಕ ಪ್ರತಿಷ್ಠೆಯನ್ನು ಹೆಚ್ಚಿಸುವ ಹವ್ಯಾಸದಲ್ಲಿ ಎಂದೂ ಬೀಳರು. ಒಂದು ವೇಳೆ ಹೀಗೆ ಮಾಡದೆ ಸ್ವಪ್ರತಿಷ್ಠೆಯ ಕಡೆಗೆ ಹೆಚ್ಚು ಗಮನಕೊಟ್ಟರೆ ಅವರಲಿದ್ದ ಅಲ್ಪ ಸ್ವಲ್ಪ ಸಾಧುತ್ವವು ಕೂಡ ನಷ್ಟವಾಗಿ ಬರಬರುತ್ತ ಅವರು ಜನರ ಅವಹೇಳನೆಗೆ ಪಾತ್ರರಾಗುವರು. ಮತ್ತಲ್ಲದೆ ಧನಿಕರನ್ನೂ ದೊಡ್ಡ ದೊಡ್ಡ ಜನರನ್ನೂ ಕಂಡು

ಸತ್ಕರಿಸುತ್ತ ಬಡವರೂ ಮಂದಭಾಗ್ಯರೂ ಬರಲು ತಿರಸ್ಕರಿಸುತ್ತ ಬಲ್ಲಿದರಿಂದ ಹೆಚ್ಚಳವನ್ನು ಬಯಸುತ್ತಿರುವದು ಯೋಗೀಶ್ವರರಿಂಗೆ ಅನುಚಿತವಾಗಿದೆ. (ಹಿರಿಯರನು ಸತ್ಕರಿಸಿ ಮಿಕ್ಕಾ । ದರನು ಧಿಕ್ಕರಿಸುವದು ಯೋಗಿ । ಶ್ವರರಿಗನುಚಿತವೆಂಬರೈ ರಾಮಯ್ಯಕೇಳೆಂದ.) ಮತ್ತು ಯಾವನೊಬ್ಬನು ತಾನು ಸಾಧುವಾದೆನೆಂದು ತಿಳಿದು ಕಂಡಕಂಡವರಿಗೆ ಅಂದರೆ ಸಂಸಾರದಲ್ಲಿ ಮಗ್ನರಾಗಿ ಅನೇಕ ನೀಚಕರ್ಮಗಳನ್ನು ಮಾಡುವಂಥ ಬದ್ಧಭವಿಗಳಿಗೆ ಹೊತ್ತು ಹೋಗುವದಕ್ಕಾಗಿ ಒಂದು ಉಪಾಯವೆಂದು ತಿಳಿದು ತತ್ವೋಪದೇಶ ಮಾಡಕೂಡದು. ಸತ್ಕರ್ಮಗಳಿಂದ ಚಿತ್ತಶುದ್ಧಿಯನ್ನು ಪಡೆದು ಸಂಸಾರದಲ್ಲಿ ವಿರಕ್ತಭಾವವನ್ನು ತಾಳಿ, ಶಮದಮಾದಿ ಸದ್ಗುಣ ಸಂಪನ್ನನಾದ ಮತ್ತು ಮೋಕ್ಷಾಪೇಕ್ಷಿಯಾದ ಉತ್ತಮನಿಗೆ ಬಹು ದಿವಸದ ವರೆಗೂ ಆತನ ವರ್ತನವನ್ನು ಪರೀಕ್ಷಿಸಿ ತದನಂತರ ಆತನ ಪರಿಪಕ್ವ ಸ್ಥಿತಿಯನ್ನು ಮನಗಂಡು, ತತ್ವೋಪದೇಶವನ್ನು ಮಾಡಬೇಕಲ್ಲದೆ, ಮದಾಂಧರಿಗೂ ಕರ್ತವ್ಯಪರಾಙ್ಮುಖರಿಗೂ ಆಲಸ್ಯ ಜೀವಿಗಳಿಗೂ ದುರಾಚಾರಿಗಳಿಗೂ ಅದನ್ನು ಮಾಡಬಾರದು. ಮುಕ್ತಿಯೆಂಬುದು ಮಾತಿನಲ್ಲಿಲ್ಲ. ಸರ್ವಸಂಗ ಪರಿತ್ಯಾಗ ಮಾಡಿದವನಿಗಲ್ಲದೆ ಇತರ ಉಡಾಳರಿಗೆ ಮುಕ್ತಿಯು ಲಭಿಸುತ್ತದೆಂಬುದು ಗಗನ ಕುಸುಮದಂತೆ ಅಸಂಭವವಾಗಿದೆ. * ಆದ್ದರಿಂದ ಯೋಗ್ಯ ಅಧಿಕಾರಿಗಳಿಗೆ ಉಪದೇಶ ಮಾಡುತ್ತಿರಬೇಕು. ಕೇವಲ ಶಿಷ್ಯರ ಸಂಖ್ಯೆಯು ಹೆಚ್ಚಾಗಿ ತನಗೆ ಹೆಚ್ಚು ಪ್ರತಿಷ್ಠೆಯುಂಟಾಗಬೇಕೆಂದು ಇಚ್ಛಿಸಿ ಯಾವನೂ ಉಪದೇಶಮಾಡಲಾಗದು ಎಲೈ ಸಿದ್ಧರಾಮನೆ, ಈ ನಿನ್ನ ಆಡಂಬರ ಕಾರ್ಯಾರಂಭವನ್ನು ಬಿಟ್ಟು ನಿಜವಾದ ಮುಕ್ತಿಯ ಮಾರ್ಗವು ಯಾವದು? ಇದನ್ನು ನೀನು ತಿಳಿದುಕೊಳ್ಳಬೇಕು."

---

* ಚಿತ್ತದಲಿ ಪರಿಪಾಕವಾದ ಮ ।
ಹೋತ್ತ ಮಂಗಲ್ಲದೆ ನಿರರ್ಥಕೆ ।
ಬಿತ್ತಲಾಗದು ತತ್ವ ಬೀಜವ ಬದ್ಧ ಭವಿಗಳಿಗೆ ॥
ಹೊತ್ತು ಹೋಗದೆ ಗೋಷ್ಠಿ ಮಾಡುವ ।
ಕೃತ್ಯವಲ್ಲಿದು ಸಕಲ ಸಂಗನಿ ।
ವೃತ್ತನಾದಂಗಲ್ಲ ದಾಗದು ರಾಮ ಕೇಳೆಂದ ॥

ಹೀಗೆ ತನ್ನ ಕಲ್ಯಾಣವನ್ನುದ್ದೇಶಿಸಿ ಮಾತಾಡಿದ ಮತ್ತು ದುಷ್ಟರನ್ನೂ ದುರಾಚಾರಿಗಳನ್ನೂ ಸ್ವಧರ್ಮ ಭ್ರಷ್ಟರನ್ನೂ ಸನ್ಮಾರ್ಗದಲ್ಲಿ ನಿಲ್ಲಿಸಲು ಅವತರಿಸಿದ ಅಲ್ಲಮಪ್ರಭುವಿಗೆ ಸಿದ್ಧರಾಮನು ಭಕ್ತಿಪೂರ್ವಕವಾಗಿ ನಮಸ್ಕರಿಸಿ, ಸಿದ್ಧರಾಮ—" ಗುರುಶ್ರೇಷ್ಠನೆ, ನಿನಗೆ ಸಾಕ್ಷಾತ್ ಶಂಕರನೆನ್ನಬೇಕೇ? ಅನ್ನಲಾಗದು. ಯಾಕಂದರೆ ಶಿವನಂತೆ ನಿನ್ನ ಎಡಗಡೆಯ ತೊಡೆಯಮೇಲೆ ಪಾರ್ವತಿಯು ವಿರಾಜಮಾನಳಾಗಿಲ್ಲ. ಇದರಿಂದ ನೀನು ಶಿವನಿಗಿಂತಲೂ ಶ್ರೇಷ್ಠನು ಮತ್ತು ನಿನಗೆ ವಿಷ್ಣುವೆನ್ನಬೇಕೆ? ಅನ್ನಲಾಗದು ಯಾಕಂದರೆ, ನೀನು ಕಪಟಿಯಲ್ಲ ಮತ್ತು ಅವನಂತೆ ನಿನ್ನ ವರ್ತನೆಯು ಅಜ್ಞಾನಯುಕ್ತವಾದದ್ದಲ್ಲ. ಮತ್ತು ವಿಷ್ಣುವು ಅತ್ಯಂತ ಕಪಟ ಸ್ವಭಾವವುಳ್ಳವನಿದ್ದು, ತಮೋಗುಣಾಧಿಕ್ಯನಾದ ನಿದ್ರೆಯುಂಟಾದ ವೇಳೆಯುಲ್ಲಿ ಹಾವಿನಮೇಲೆಯೇ ಮಲಗುವನು; ಕೆಳಗೆ ಹಾಸಿಗೆ ಇದೆಯೋ ಅಥವಾ ಸರ್ಪವಿದೆಯೋ ಎಂಬದು ಗೊತ್ತಾಗುವದಿಲ್ಲ. ಈ ಕಾರಣದಿಂದ ನೀನು ವಿಷ್ಣುವಿಗಿಂತಲೂ ಶ್ರೇಷ್ಠನು. ನಿನಗೆ ಸದೃಶವಾದ ವಸ್ತುವು ಜಗತ್ತಿನಲ್ಲಿ ಯಾವದೂ ಇಲ್ಲ. ನೀನು ನಿರಂಜನನೂ ನಿರ್ದೋಷಿಯೂ ಆಗಿರುವಿ. ನಿನ್ನ ಮಹತ್ವವನ್ನು ಯಾರಿಂದಲೂ ವರ್ಣಿಸಲಾಗುವದಿಲ್ಲ. ಮತ್ತು ನೀನು ಶಾಂತಿ ಶೂರತನ ಇವೆರಡಕ್ಕೂ ಆಶ್ರಯಭೂತನಾಗಿರುವಿ. ಆದರಿಂದ ನೀನು ಕಪಿಲಸಿದ್ಧಯೋಗೀಶ್ವರನೆಂದು ನಾನು ತಿಳಿಯುತ್ತೇನೆ. ನಿನ್ನ ನಿಜವನ್ನರಿಯದೆ ನಾನು ಮಾಡಿದ ನಿಂದೆಯನ್ನು ಕ್ಷಮಿಸಿ ನನ್ನನ್ನು ಕಾಪಾಡು. ಸುದೈವದಿಂದ ಶಿವನು ನನಗೆ ಅನುಗ್ರಹಿಸಿ ಕೊಟ್ಟ ಹಣೆಗಣ್ಣಿನ ದುರುಪಯೋಗವನ್ನು ಮಾಡಿದ್ದಕ್ಕಾಗಿ ನನಗೆ ಪಶ್ಚಾತ್ತಾಪವುಂಟಾಗಿದೆ. ಆದ್ದರಿಂದ ಈ ಪಾಪದಿಂದ ನನ್ನನ್ನು ಮುಕ್ತನಾಗಿ ಮಾಡಿ ಯಾವುದನ್ನಾಚರಿಸಿದರೆ ಸಾವು ತಪ್ಪುವದು? ಮುಕ್ತಿಮಾರ್ಗದ ಹಾದಿ ಯಾವದು? ನಿತ್ಯನಾಗಿರುವ ರೀತಿಯಾವದು? ಗುರುವೇ ಇದೆಲ್ಲವನ್ನು ನನಗೆ ಉಪದೇಶಿಸಿ ನನ್ನನ್ನು ಉದ್ಧರಿಸಬೇಕು " ಎಂದು ಆತನ ಪಾದಗಳಮೇಲೆ ಬೀಳಲು,

ಅಲ್ಲಮ—(ತನ್ನ ಪಾದಗಳ ಮೇಲೆ ಬಿದ್ದಿರುವ ಸಿದ್ಧರಾಮನನ್ನು ಎಬ್ಬಿಸಿ) ಸಿದ್ಧರಾಮನೆ, ನೀನಾಡಿದ ಅಪಶಬ್ದಗಳಿಂದ ನಿಷ್ಪಾಪವಾದ ನನ್ನ ಮನಸ್ಸು ಸಿಟ್ಟಾಗಲಿಲ್ಲ. ನಿನ್ನ ಮೇಲೆ ನಾನು ಯಾವಾಗಲು ದಯಾವಂತನಾಗಿದ್ದೇನೆ. ನೀನು ದುರಾಚಾರಿಗಳ ದುರ್ವ್ಯಸನಿಗಳ ಮತ್ತು ನೀಚ ಜನರ ಗುಂಪಿನೊಳಗೆ ಸೇರಿ ಆತ್ಮಜ್ಞಾನಕ್ಕನುಕೂಲವಲ್ಲದ, ಯೋಗಿಗಳಿಗನುಚಿತವಾದ ಆಡಂಬರ ಕಾರ್ಯಗಳಲ್ಲಿ ಬಿದ್ದಿರುವದನ್ನು ತಿಳಿದು, ನೀಚರ ಸಂಪರ್ಕದಿಂದಲೂ ಸ್ವಪ್ರತಿಷ್ಠಾದಿ ಕಾರ್ಯಗಳಿಂದಲೂ ನಿನ್ನನ್ನು ಬಿಡಿಸಬೇಕೆಂಬದಾಗಿ ನಾನು ಇಲ್ಲಿಗೆ ಬಂದೆನು. ನೀನು ಮನಸ್ಸಿನಲ್ಲಿ ಯಾವ ಸಂಶಯವನ್ನೂ ಹಿಡಿಯಬೇಡ. ನಿನಗೆ

ಹಿತವಾಗುವ ಉಪದೇಶವನ್ನು ಮಾಡುತ್ತೇನೆ ಕೇಳು. ಜಗತ್ತಿನಲ್ಲಿ ಶಿವಯೋಗಿಗಳು ಅನೇಕ ವೇಷಗಳನ್ನು ಧರಿಸಿ ಸಂಚರಿಸುವರು. ಪೃಥ್ವಿಯಲ್ಲಿ ಸ್ವಸ್ವರೂಪ ಜ್ಞಾನಸಂಪನ್ನರಾದ ಜಂಗಮರು ಯಾರಿರುವರೋ ಅವರೆಲ್ಲ ಸಗುಣಲಿಂಗ ಮೂರ್ತಿಗಳೆಂದು ಭಾವಿಸಬೇಕು, ಯಾಕಂದರೆ, ಶರೀರದಲ್ಲಿ ಇಷ್ಟಲಿಂಗವನ್ನು ಸಂಬಂಧ ಮಾಡಿಕೊಂಡಿರುವ ಕಾರಣ ಅವರ ಸರ್ವ ಅವಯವಗಳು ಪವಿತ್ರವಾಗಿವೆ. ಅವರೇ ನಿಜವಾದ ಶಿವಯೋಗಿಗಳು. ಆದರೆ ಶಿವಯೋಗಿಗಳ ಸೋಗುಹಾಕಿಕೊಂಡು ಅನೇಕ ಕಪಟಗಳು ಜಗತ್ತಿನಲ್ಲಿ ಸಂಚರಿಸುತ್ತಾರೆ. ಆದ್ದರಿಂದ ಯಾರು ನಿಜವಾದ ಶಿವಯೋಗಿಗಳು? ಯಾರು ಕೇವಲ ವೇಷಧಾರಿಗಳು? ಎಂಬುದನ್ನು ಭಾವಿಕ ಜನರು ಚನ್ನಾಗಿ ಪರಿಶೋಧಿಸಿ, ಅವರ ಸಹವಾಸವನ್ನು ಮಾಡಬೇಕು. ಯಾವನಾದರೊಬ್ಬನಿಗೆ ಸಾಧುವೆಂದು ಸನ್ಮಾನಮಾಡಬೇಕಾದರೆ, ಆತನ ವೇಷದ ಮೇಲಿಂದ ಅಥವಾ ಅವನ ಬಣ್ಣದ ಮಾತಿನ ಮೇಲಿಂದ ನೋಡಿ ಮಾಡಬಾರದು. ಯಾವನು ಶಾಸ್ತ್ರಮರ್ಯಾದೆಯನ್ನು ಉಲ್ಲಂಘನ ಮಾಡಿಲ್ಲವೋ (೧) * ಯಾವನು ಮನಸ್ಸಿನಿಂದಲೂ ಕೃತಿಯಿಂದಲೂ ನಿಷ್ಪಾಪ ಹೃದಯವಾಗಿ ಜ್ಞಾನಕಲಾಭರಿತನಾಗಿರುವನೋ! ಅಂಥವನಿಗೆ ಮಾತ್ರ ಸನ್ಮಾನಮಾಡತಕ್ಕದ್ದು. ಸಂಸಾರಿಗಳಲ್ಲಿ ತೋರುವ ಪಕ್ಷಪಾತ ಉದಾಸೀನತೆ ಕೀರ್ತಿಪೂಜಾ ಲಾಭದಲ್ಲಿ ಆಶೆ ಮುಂತಾದ ದೋಷಗಳು ಸಾಧುಗಳೆನ್ನಿಸಿ ಕೊಳ್ಳುವವರಲ್ಲಿ ತಲೆ ದೋರಿದರೆ ಜನರು ಸರ್ವಥಾ ಅವರನ್ನು ಮನ್ನಿಸಬಾರದು. ಶಿವಯೋಗಿ ಯಾದವನು ಒಬ್ಬನಿಗೆ ತಿರಸ್ಕಾರ ಮತ್ತೊಬ್ಬನಿಗೆ ಪುರಸ್ಕಾರ ಹೀಗೆ ಪಕ್ಷಪಾತದ ವರ್ತನವನ್ನು ತೋರಿಸ ಬಾರದು. ಈ ನಡತೆಯು ಶಿವಶರಣರಿಗೆ ಶೋಭಿಸುವದಿಲ್ಲ; ಯಾಕಂದರೆ ಈಶ್ವರನು ತನ್ನ ಸರ್ವಾಂತರ್ಯಾಮಿತ್ವ ಶಕ್ತಿಯಿಂದ ಸರ್ವಪ್ರಾಣಿಮಾತ್ರದಲ್ಲಿ ತುಂಬಿಕೊಂಡಿರುವನು. ಆದ್ದರಿಂದ ಎಲ್ಲರನ್ನು ಒಂದೇ ಭಾವದಿಂದ ಕಾಣಬೇಕು. ಸಾಧು

---

* (೧) " ಶಿವೋಕ್ತಾಂ ಜಾತಿಮರ್ಯಾದಾಂಯೋಅತೀತ್ಯ ಭುವಿವರ್ತತೇ।
ಸ ಚಂಡಾಲ ಇತಿಜ್ಞೇಯಸ್ಸರ್ವಕರ್ಮ ಬಹಿಷ್ಕೃತಃ ॥ "

ಅರ್ಥ—ಯಾವನು ಶಿವ ನಿರ್ಮಿತವಾದ ವರ್ಣಾಶ್ರಮ ಧರ್ಮಗಳನ್ನು ಮೀರಿ ಜಗತ್ತಿನಲ್ಲಿ ವರ್ತಿಸುತ್ತಾನೋ, ಅವನು ಸರ್ವಕರ್ಮಗಳಿಂದ ಬಹಿಷ್ಕೃತನಾದ ಚಾಂಡಾಲನೆಂದು ತಿಳಿಯಲ್ಪಡುವನು. ಅಂದಮೇಲೆ ಜಾತಿ ಸಂಕರವಾಗುವಂತೆ ಆಚರಿಸುವವನಿಗೆ ಸಾಧುವೆಂದೂ ಜೀವನ್ಮುಕ್ತನೆಂದೂ ಅನ್ನುವದು ಸರ್ವಾಬದ್ಧವು.

ಗಳಾದವರು ತನಗೆ ಶತ್ರುಗಳಾದವರ ಮತ್ತು ಮಿತ್ರರಾದವರ ಕಲ್ಯಾಣವನ್ನು ಸರ್ವದಾ ಇಚ್ಛಿಸುತ್ತಿರಬೇಕು. ಸ್ವಮತ ಭ್ರಷ್ಟತೆಗೆ ಕಾರಣವಾಗುವ ಯಾವ ಪಾಪಕೃತಿಯನ್ನೂ ಶಿವಯೋಗಿಯು ಮಾಡಕೂಡದು. ಹೀಗೆ ಸದ್ವರ್ತನೆಯಲ್ಲಿ ನಿರತನಾದ ಶಿವಯೋಗಿಯೇ ಜಂಗಮನು; ಅವನೇ ಸಾಧು ಪುರುಷನು; ಅವನೇ ಆರೂಢನೂ ಅಥವಾ ಅವಧೂತನು. ಶಾಸ್ತ್ರೋಕ್ತಿಗಳನ್ನು ಮೀರಿ ಮನಬಲ್ಲಂತೆ ವರ್ತಿಸುವವನು ಜ್ಞಾನಿಯೂ ಅಲ್ಲ, ಆರೂಢನೂ ಅಲ್ಲ, ಶಿವಯೋಗಿಯೂ ಅಲ್ಲ.

ಸಿದ್ಧರಾಮ—(ಸಪ್ರಶ್ರಯದಿಂದ) ಎಲೈ ಪ್ರಭುವೆ, ಸರ್ವರೂ ತುಚ್ಛರು, ನಾನೊಬ್ಬನೇ ಜಗತ್ತಿನಲ್ಲಿ ವಂದ್ಯನೆಂದು ತಿಳಿದುಕೊಂಡಿದ್ದೆನು. ಈ ಕಾರಣದಿಂದ ನನಗೆ ಜ್ಞಾನದೃಷ್ಟಿಯುಂಟಾಗಲಿಲ್ಲ. ನಿಮ್ಮ ದರ್ಶನಮಾತ್ರದಿಂದ ನನ್ನಲ್ಲಿ ಅಕ್ಕ ಜ್ಞಾನಾಂಕುರವು ಉದಯವಾಗಿ ಆದರಿಂದ ಸರ್ವರಲ್ಲಿ ಸಮದೃಷ್ಟಿಯನ್ನಿಡಲು ಕಲಿತೆನು. ಈ ಸಮತೆಯು ನನ್ನಲ್ಲಿ ನಿರಂತರವಾಗಿ ಉಳಿಯುವಂತೆ ಉಪದೇಶ ಮಾಡು.

ಅಲ್ಲಮ—ಎಲೈ ಸತ್ಪುರುಷನೆ, ಮನಸ್ಸಿನಲ್ಲಿ ವೈರಾಗ್ಯ ಭಾವವನ್ನು ಹೊಂದಿ ಅದನ್ನು ದೃಢೀಕರಿಸುವದರಲ್ಲಿ ತತ್ಪರನಾದರೆ ಅದರಿಂದ ಸಾತ್ವಿಕ ಗುಣಗಳು ಪ್ರಾದುರ್ಭವಿಸಿ, ಮನಸ್ಸು ಸ್ಥೈರ್ಯವನ್ನು ಪಡೆಯುವದು. ಸ್ಥಿರವಾದ ಮನಸ್ಸಿನಿಂದ ಶಾಂತಿಯು ಉದಯಿಸುವದು. ಶಾಂತಿಯಿಂದ ಅತಿಶಯ ಸುಖವುಂಟಾಗುವದು. ಸದೋದಿತ ಶಾಂತಸ್ವಭಾವವುಳ್ಳ ಪುರುಷನಿಗೆ ಇದು ಶ್ರೇಷ್ಠ ಇದು ಕನಿಷ್ಠವೆಂಬ ಭೇದಾಭೇದ ಬುದ್ಧಿಯು ಇರುವದಿಲ್ಲ. ಯೋಗಸಿದ್ಧಿಯ ಬಗ್ಗೆ ಯಾವನೂ ಆತುರಪಡಬಾರದು; ಮತ್ತು ಆಲಸ್ಯವುಳ್ಳವನೂ ಗರ್ವಿಷ್ಠನೂ ಆಗಬಾರದು. ಶ್ರಮಪಡದೆ ಶಾಂತಮನಸ್ಸಿನಿಂದ ಯತ್ನಮಾಡದೆ ತೀವ್ರವಾಗಿ ತನಗೆ ಸಿದ್ಧಿಯುಂಟಾಗಬೇಕೆನ್ನುವವನು, ಯಾವ ಕಾರ್ಯದಲ್ಲಿಯೂ ಜಯಶೀಲನಾಗುವದಿಲ್ಲ. ಇಂಥವನು ಶ್ರೀಗುರುವಿನ ಬಳಿಗೆ ಹೋಗಿ ಉಪದೇಶವನ್ನು ಹೊಂದದ ವಿನಾ ಕಲ್ಯಾಣವಾಗದು. ಆದ್ದರಿಂದ ನೀನು ಗುರುನಾಥನನ್ನು ಆಶ್ರಯಿಸಬೇಕು.

ಸಿದ್ಧರಾಮ—ಎಲೈ ಪ್ರಭುವೆ, ನಿಮ್ಮ ಹೊರತು ಬೇರೆ ಯಾರೂ ನನಗೆ ಗುರುಗಳಾಗಲು ಯೋಗ್ಯರಲ್ಲ. ನೀವು ನನಗೆ ಲಿಂಗಾಂಗ ಸಾಮರಸ್ಯೋಪದೇಶವನ್ನು ಮಾಡಿ ನನ್ನನ್ನುದ್ಧರಿಸಬೇಕು. ನಾನು ದುಷ್ಟನಿದ್ದರೂ ನಿಮ್ಮ ಕೃಪಾಕಟಾಕ್ಷದಿಂದ ಶಿಷ್ಟ (ಸಭ್ಯ)ನಾಗಿದ್ದೇನೆ. ಪರುಷದ ಸಂಯೋಗದಿಂದ ಕಬ್ಬಿಣವ

ಬಂಗಾರವಾಗುವದಿಲ್ಲವೆ? ಆದ್ದರಿಂದ ಎಲೈ ಪರಮೇಶ್ವರನೆ, ಅನಾಥನಾದ ಮತ್ತು ನಿಜಕೈವಲ್ಯಕ್ಕೆ ಹೇತು ಭೂತವಾದ ವೀರಶೈವ ಮಾರ್ಗದಿಂದ ದೂರನಾದ ನನ್ನನ್ನು ರಕ್ಷಿಸು, ಎಂದು ಅಲ್ಲಮಪ್ರಭುವನ್ನು ಅನನ್ಯಭಾವದಿಂದ ಶರಣು ಹೋಗಲು, ಈತನು ಈಗ ಉಪದೇಶಕ್ಕೆ ಯೋಗ್ಯನಾಗಿದ್ದಾನೆ. ಆದರೂ ಗುರು ಶಿಷ್ಯರ ವರ್ತನದ ಪ್ರಸಾರವು ಜಗತ್ತಿನಲ್ಲಿ ಪ್ರಸಿದ್ಧವಾಗಬೇಕೆಂದು ಯೋಚಿಸಿ,

ಅಲ್ಲಮಪ್ರಭು—ಎಲೈ ಸಿದ್ಧರಾಮನೆ, ಮನಸ್ಸನ್ನು ಆತ್ಮದ ಕಡೆಗೆ ಒಲಿಸಿ ಅದನ್ನು ಸಿರಗೊಳಿಸಬೇಕು. ಉನ್ಮತ್ತವಾದ ಇಂದ್ರಿಯುಗಳನ್ನು ಸತ್ಕಾರ್ಯ ನಿರ್ವ ಹಣದಲ್ಲಿ ತೊಡಗಿಸಬೇಕು. ಹೀಗೆ ಸನ್ಮಾರ್ಗದಲ್ಲಿ ನಡೆಸು ಆಚಾರ ಸಂಪನ್ನರಾದ ಶಿಷ್ಯರ ಹೃದಯದಲ್ಲಿ ಚಿತ್ಸ್ವರೂಪ ಬೀಜವನ್ನು ಬಿತ್ತಿದರೆ ಅದು ಸಫಲವಾಗುವದು. ಹೀಗೆ ಮಾಡದೆ, ನೀಚರೂ ದುರಾಚಾರಿಗಳೂ ಆದ ಜನರಲ್ಲಿ ಸದುಪದೇಶವೆಂಬ ಉತ್ತಮ ಬೀಜವನ್ನು ಬಿತ್ತಿದರೆ, ಅದು ಚನ್ನಾಗಿ ಫಲಿಸದೆ ಉಪದೇಶದ ದುರು ಪಯೋಗ ಮಾತ್ರ ಆಗುವದು. ಬಿತ್ತತಕ್ಕ ಬೀಜವು ಉತ್ತಮವಿದ್ದು ಬಿತ್ತುವ ಮನು ಷ್ಯನು ಕುಶಲನಿದ್ದು ಊಳತಕ್ಕ ಭೂಮಿಯಾದರೂ ಹಸನಾಗಿದ್ದರೆ ಮಾತ್ರ ಬಿತ್ತಿದ ಬೀಜವು ಫಲಪ್ರದವಾಗುವದು. ಆದರೆ ಹೆಚ್ಚಿನ ಫಲದಾಶೆಯಿಂದ ಕಾಡು ಭೂಮಿ ಯಲ್ಲಿ ಉತ್ತಮ ಬೀಜವನ್ನು ಒಕ್ಕಲಿಗನು ಬಿತ್ತಿದರೆ ಆತನ ಶ್ರಮವು ವ್ಯರ್ಥವಾ ಗುವಂತೆ, ದೇಶಿಕನು ಶಿಷ್ಯರ ಸಂಖ್ಯೆಯು ಹೆಚ್ಚಾಗಬೇಕೆಂಬ ಆಶೆಯಿಂದ ಕಂಡ ಕಂಡವರಿಗೆ ಅಂದರೆ ತುಂಟರಿಗೂ ವಿಷಯುಲಂಪಟರಿಗೂ ದುರಾಚಾರಿಗಳಿಗೂ ಸದುಪದೇಶ ಮಾಡಿದರೆ ಅದು ನಿಸ್ಸಂದೇಹವಾಗಿ ನಿಷ್ಫಲವಾಗುವದು. ಮತ್ತು ಶಿಷ್ಯರ ಯೋಗ್ಯತೆಯುನ್ನರಿತುಕೊಳ್ಳದೆ ಡಾಂಭಿಕತನದಿಂದ ಅವರಿಗೆ ತತ್ತ್ವೋಪದೇಶ ಮಾಡುವವನು ದೇಶಿಕನೂ ಅಲ್ಲ. ಮತ್ತು ಆತನು ಮಾಡುವ ಉಪದೇಶವಾದರೂ ಶಿಷ್ಯನ ಕಲ್ಯಾಣ ಕರಣದಲ್ಲಿ ಪರಿಣಮಿಸುವದಿಲ್ಲ.

ಸಿದ್ಧರಾಮ—"(ವಿನಯುದಿಂದ) ಎಲೈ ಆದಿನಾಥನೆ, ಅನಾಥನಾದ ನನ್ನನ್ನು ಬಿಟ್ಟು ಕೊಡಬೇಡ. ಪೂರ್ವ ಜನ್ಮದ ಸುಕೃತ ವಿಶೇಷದಿಂದ ನಿನ್ನಂಥ ಸದ್ಗುರುವಿನ ದರ್ಶನವು ನನಗುಂಟಾಗಿದೆ. ಈ ಕಾರಣದಿಂದ ನಿಮ್ಮ ದರ್ಶನ ವೊಂದರಿಂದಲೇ ನನ್ನಲ್ಲಿರುವ ಸರ್ವ ಪಾತಕಗಳು ನಾಶವಾಡಲ್ಪಟ್ಟದ್ದರಿಂದ, ನಿಮ್ಮ ಸದುಪದೇಶಕ್ಕೆ ನಾನು ಅರ್ಹನಾಗಿದ್ದೇನೆ. ಗುರುನಾಥನೆ, ನೀವು ನನ್ನನ್ನು ಸನ್ಮಾರ್ಗದಲ್ಲಿ ನೆಲಗೊಳಿಸಿ ರಕ್ಷಿಸಬೇಕು. ನಿಮ್ಮ ಚರಣ ಕಮಲಗಳ ಹೊರತು ಬೇರೊಂದನ್ನು ನಾನು ಆಶ್ರಯಿಸುವದಿಲ್ಲ. ನನಗೆ ಹಿತಮಾಡತಕ್ಕವರು ನೀವಲ್ಲದೆ ಬೇರೆ ಯಾರೂ ಇಲ್ಲ. ನಾನು ಅನನ್ಯಭಾವದಿಂದ ನಿಮಗೆ ಶರಣಾಗತನಾಗಿದ್ದೇ ನೆ. " ಹೀಗೆ ದೀನಸ್ವರದಿಂದ ಪುನಃ ಪುನಃ ನಮಸ್ಕಾರ ಮಾಡಿ ಕೈಜೋಡಿಸಿ

ನಿಂತುಕೊಂಡು ಪ್ರಾರ್ಥಿಸುತ್ತಿರುವ ಸಿದ್ಧರಾಮನನ್ನು ಅಲ್ಲಮಪ್ರಭುವು ನೋಡಿ ಆತನ ಮೇಲೆ ಕೃಪೆಮಾಡಿ, ಒಬ್ಬ ಮುದ್ದು ಮಗನಿಗೆ ತಂದೆಯು ಮಧುರವಾದ ಮಾತುಗಳಿಂದ ಸಮಾಧಾನಗೊಳಿಸುವಂತೆ, ಆತನನ್ನು ಸಾಂತ್ವನಗೊಳಿಸಿ, ಪೃಥ್ವಿಯ ಮೇಲಿರುವ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳಲ್ಲಿ ಯಾವಾತನು ತನ್ನ ಸರ್ವೇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಸಮರ್ಥನಿರುವನೋ, ಅವನೇ ಮೋಕ್ಷವನ್ನು ಸಾಧಿಸಬಲ್ಲನು; ಅವನೇ ಸುಖಿಯಾಗಿರಬಲ್ಲನು, ಎಂದು ಅಲ್ಲಮಪ್ರಭುವು ನಿವೇದಿಸಲು,

ಸಿದ್ಧರಾಮ— (ನಮ್ರಭಾವದಿಂದ) ಗುರುವರ್ಯನೆ, ಇಂದ್ರಿಯ ಸಮುದಾಯವು ರೂಪದ ಮೇಲೆ ಅವಲಂಬಿಸಿರುವ ವಿಷಯಗಳಿಗೆ ಅನುಸರಿಸಿ ನಡೆಯುವದು. ಇಂದ್ರಿಯಗಳ ಓಟವು ವಿಷಯಗಳ ಕಡೆಗೆ ಇರುತ್ತದೆ ಈ ಇಂದ್ರಿಯಗಳನ್ನು ಗೆಲ್ಲುವ ಕ್ರಮವನ್ನು ನನಗೆ ದಯಪಿಟ್ಟು ಹೇಳಬೇಕು.

ಅಲ್ಲಮ—ಸಿದ್ಧರಾಮಾ, ಮನವು ಇಂದ್ರಿಯಗಳಿಗೆ ಅರಸನಾಗಿದೆ. ಈ ಮನಸ್ಸನ್ನು ವಿಷಯ ಸುಖಗಳಿಂದ ಹಿಮ್ಮೆಟ್ಟಿಸಿ, ಅಂದರೆ-ಅವುಗಳಿಂದ ಪರಾಙ್ಮುಖವಾಗಿ ಮಾಡಿ ಆತ್ಮಸ್ವರೂಪ ಚಿಂತನೆಯ ಕಡೆಗೆ ತಿರುಗಿಸಬೇಕು. ಅಂದರೆ ಇಂದ್ರಿಯಗಳು ತಾವೇ ಆತ್ಮರೂಪದ ಕಡೆಗೆ ಒಲಿಯುವವು.

ಸಿದ್ಧರಾಮ—ಪ್ರಭುವೇ, ಮನಸ್ಸು ವಿಷಯ ಸುಖಗಳಿಗೆ ಪರಾಙ್ಮುಖವಾಗದಿರಲು ಅದರಿಂದ ನಿರಾಶೆಯುಳ್ಳವನಾಗದೆ, ಬಹಳ ದ್ರವ್ಯ ಸಂಪಾದನೆಯಿಂದ ಹೆಂಡರು ಮಕ್ಕಳನ್ನು ಸಂಗೋಪನ ಮಾಡಿ ಯಾಚಕರಿಗೆ ದಾನ-ಧರ್ಮಗಳನ್ನು ಮಾಡುತ್ತ, ತಪಸ್ಸನಾಚರಿಸುತ್ತ, ಶಿವಾಲಯಗಳನ್ನು ಕಟ್ಟಿಸುತ್ತ, ಗೋದಾನ ಭೂದಾನ ಮೊದಲಾದ ಮಹಾದಾನಗಳನ್ನು ನಡಿಸುತ್ತ, ಹೀಗೆ ಅನೇಕ ಪುಣ್ಯಕರ್ಮಗಳನ್ನು ಮಾಡುತ್ತಿದ್ದರೆ ಅದರಿಂದ ಜನರಿಗೆ ಕಲ್ಯಾಣವಾಗುವದಿಲ್ಲೇನು?

ಅಲ್ಲಮ—ಸಿದ್ಧರಾಮ, ನೀನು ಹೇಳುವದು ನಿಜ. ಆದರೆ ಅದು ಸಾಮಾನ್ಯ ಜನರ ವರ್ತನೆಯಾಗಿದೆ. ಶುದ್ಧಾಂತಃಕರಣರಾದ ಶಿವಯೋಗಿಗಳ ಮೋಕ್ಷಪ್ರಾಪ್ತಿಗೆ ಕಾರಣವಾದ ಮಾರ್ಗವಲ್ಲ, ಯಾಕಂದರೆ ಈ ಮಾರ್ಗದಲ್ಲಿ ಜನರು ಅನೇಕ ಪ್ರಕಾರದ ತ್ರಾಸಗಳನ್ನು ಸೋಸಬೇಕಾಗುತ್ತದೆ. ನೀನು ತೋರಿಸಿದ ಮಾರ್ಗದಂತೆ ನಡೆಯುವವರಿಗೆ ಒಕ್ಕಲಿಗರ ಹೋಲಿಕೆಯನ್ನು ಕೊಡಬಹುದು. ಅವರು ಅನೇಕ ಕಷ್ಟಗಳನ್ನು ಸಹಿಸಿ ಬೀಜವನ್ನು ಬಿತ್ತಿ ಅದರಲ್ಲಿ ಬೆಳೆದ ಕಳೆಗಳನ್ನು ತೆಗೆದುಹಾಕಿದ ನಂತರ ಅವರಿಗೆ ಹ್ಯಾಗೆ ಉತ್ತಮ ಧಾನ್ಯ ಸಮೃಧ್ಧಿಯು ಲಭಿಸುವದೋ, ಹಾಗೆಯೇ ಮೇಲೆ ಹೇಳಿದ ಪ್ರಕಾರ ಕರ್ಮಠರಂತೆ ಕರ್ಮಗ

ಳನ್ನು ಮಾಡಲು ಆ ಪುಣ್ಯ-ಪಾಪ-ಕರ್ಮಗಳಿಗೆ ಸದೃಶವಾದ ಫಲವು ಪ್ರಾಪ್ತವಾಗುವದು. ಈ ಫಲಗಳನ್ನು ಭೋಗಿಸಿಯೇ ತೀರಬೇಕಾದ್ದರಿಂದ ಅವರು ಜನನ ಮರಣಾತ್ಮಕವಾದ ಸಂಸಾರ ಬಂಧನದಿಂದ ಬಿಡುಗಡೆಯಾಗುವದಿಲ್ಲ. ಆದರೆ ವೀರಶೈವ ದೀಕ್ಷೆಯನ್ನು ಪಡೆದು ಇಷ್ಟಲಿಂಗ ಸಂಬಂಧಿಯಾಗಿ ಸರ್ವ ಭೋಗ ಕ್ರಿಯೆಗಳನ್ನು ಲಿಂಗಕ್ಕರ್ಪಿಸುತ್ತ ಲಿಂಗಧ್ಯಾನಾ ರೂಢನಾಗಿ ಶಿವಯೋಗದಲ್ಲಿ ನಿರತನಾದವನಿಗೆ ಮಾತ್ರ ಭವಬಂಧನವು ನಾಶವಾಗುವದು. ಇವನು ಲಿಂಗ ಭಜನೆಯಿಲ್ಲದೆ ಬೇರೆ ಕರ್ಮಗಳನ್ನು ಮಾಡಕೂಡದು. ಲಿಂಗನಿಷ್ಠರು ದೇವಾಲಯ ಕೆರೆ-ಕಾಲಿವೆ ಭವ್ಯಮಂದಿರ ಮುಂತಾದವುಗಳನ್ನು ಕಟ್ಟುವದರಲ್ಲಿ ಮನಸ್ಸು ಹಾಕುವದಿಲ್ಲ; ಯಾಕಂದರೆ, ಅವು ಆತ್ಮಚಿಂತನೆಗೆ ಪ್ರತಿಬಂಧಕವಾಗುವವು. ಶಿವಯೋಗಿಗಳೂ ನಿರಂಜನ ಮೂರ್ತಿಗಳೂ ವೈಭವಾತಿಶಯ ಪ್ರಾಪ್ತಿಗೋಸುಗ ಮೇಲೆ ನಿರ್ದಿಷ್ಟವಾದ ತುಚ್ಛ ಕಾರ್ಯಗಳಲ್ಲಿ ಮನಸ್ಸು ಹಾಕಿದರೆ, ಅವರಿಗೆ ಲಿಂಗಾಂಗ ಸಾಮರಸ್ಯಾನುಭವ ಸುಖದ ಲವಲೇಶವಾದರೂ ಸಿಗುವದಿಲ್ಲ. ಮೀನವು ಮಾಂಸದ ಆಶೆಯಿಂದ ಕಬ್ಬಿಣ ಬಲೆಯಲ್ಲಿ ಸಿಲುಕಿ ಮರಣಹೊಂದುವಂತೆ, ಬ್ರಹ್ಮಾತ್ಮಕವಾದ ಜೀವನು ವಿಷಯ ಸುಖೇಚ್ಛೆಯಲ್ಲಿ ಮಗ್ನವಾಗಿ ಜನನ-ಮರಣವೆಂಬ ಭವಚಕ್ರದಲ್ಲಿ ಬೀಳುವನು. ಆದರೆ ನಿಜವಾದ ಶಿವಯೋಗಿಗಳು ಪರಮ ವೈರಾಗ್ಯಶಾಲಿಗಳಾಗಿ ಮೇಲೆ ಹೇಳಿದ ಡಾಂಭಿಕತನದಿಂದ ಮತ್ತು ಕೀರ್ತಿಯ ಆಶೆಯಿಂದ ಮಾಡುವ ಯಾವತ್ತು ಕಾರ್ಯಗಳನ್ನು ಸಂಪೂರ್ಣವಾಗಿ ತ್ಯಜಿಸಿ, ಜನ ಸಮೂಹದಿಂದ ದೂರವಾಗಿದ್ದುಕೊಂಡು ಸರ್ವತ್ರ ವ್ಯಾಪಿಸಿದ ಚಿತ್ಸ್ವರೂಪ ಇಷ್ಟಲಿಂಗ ಭಜನೆಯಲ್ಲಿ ಲೀನವಾಗಿ ಶಿವಯೋಗಸಮಾಧಿಯಿಂದುಂಟಾದ ಅಖಂಡ ಸುಖವನ್ನು ಅನುಭವಿಸುವರು. ಹೀಗೆ ಶಿವಯೋಗ ಸಮಾಧಿಯನ್ನು ಸಾಧಿಸಿದವರು ಅಕಸ್ಮಾತ್ ಬಾಹ್ಯ ವಿಷಯಗಳ ಕಡೆಗೆ ಸ್ವಲ್ಪ ಮನಸ್ಸು ಹಾಕಿದ್ದುಂಟಾದರೆ, ಆ ವಿಷಯಾಭಿಲಾಷೆಯು ಮೇಲಿಂದ ಮೇಲೆ ವೃದ್ಧಿಂಗತವಾಗಿ ಹೊಲದಲ್ಲಿ ಕಾಲಕಾಲಕ್ಕೆ ಹುಟ್ಟಿದ ಕಳೆಗಳು ಬೆಳೆಯನ್ನು ನಾಶಪಡಿಸುವಂತೆ, ಅವರ ಚಿತ್ತೈಕಾಗ್ರತೆಯೂ ದೃಢನಿಷ್ಠೆಯವೂ ತಪ್ಪಿ ಧ್ಯಾನಕ್ಕೆ ವಿಷಯವಾದ ಚಿತ್ಸ್ವರೂಪವು ನಾಶಹೊಂದುವದು. ಇಂತಹ ದುಸ್ಥಿತಿಯಲ್ಲಿ ಯೋಗಿ ಯೆನಿಸಿಕೊಳ್ಳುವಾತನು ಮರಣಪಟ್ಟರೆ, ಅವನಿಗೆ ದುರ್ಗತಿಯುಂಟಾಗುವದು. ಇದರಲ್ಲಿ ಸಂದೇಹವಿಲ್ಲ.

ಸಿದ್ಧರಾಮ—ಗುರುಶ್ರೇಷ್ಠನೆ, ಈ ಲೋಕದಲ್ಲಿ ಮನುಷ್ಯನು ಒಂದು ವೇಳೆ ಮರಣವನ್ನು ತಪ್ಪಿಸಿ ಬಹುಕಾಲ ಪರಿಯಂತ ಜೀವಿಸುವದಕ್ಕೆ ಉತ್ತಮ ಉಪಾಯವು ಯಾವದು? ಅದನ್ನು ದಯವಿಟ್ಟು ಹೇಳಬೇಕು.

ಅಲ್ಲಮ—ಸಿದ್ಧರಾಮನೆ, ಆದ್ರ್ರನಕ್ಷತ್ರದಲ್ಲಿ ಚನ್ನಾಗಿ ಹರಗಿ ಹುಲ್ಲು ಮುಂತಾದ್ದನ್ನು ತೆಗೆದಂಥ ಹೊಲದಲ್ಲಿ ನಿರ್ದೋಷವಾದ ಬೀಜವನ್ನು ಬಿತ್ತಲು ನಿಶ್ಚಯವಾಗಿ ಒಳ್ಳೇ ಬೆಳೆಯು ಬರುವಂತೆ, ಮನಸ್ಸನ್ನು ಸ್ಥಿರಗೊಳಿಸಿ ಸರ್ವ ಕರ್ಮಗಳನ್ನು ಬಿಟ್ಟು ಚಿತ್ಸ್ವರೂಪಾತ್ಮಕವಾದ ಲಿಂಗದಲ್ಲಿ ನಿಶ್ಚಲ ದೃಷ್ಟಿಯನಿಟ್ಟರೆ, ಅಂಥವನನ್ನು ಬ್ರಹ್ಮದೇವನು ಕೂಡ ನಾಶಮಾಡಲಾರನು. ಕರ್ಮಕಾಂಡಿಗಳು ಮಾಡುವ ಕರ್ಮದಲ್ಲಿ ಸ್ವಲ್ಪವಾದರೂ ತಪ್ಪು ಮಾಡಿದರೆ ದೇವತೆಗಳ ಮೂರ್ತಿಪ್ರತಿಷ್ಠಾಪನೆಯಲ್ಲಿ ಸ್ವಲ್ಪ ವ್ಯತ್ಯಸ್ತವುಂಟಾಗಲು ಅಂತಹ ಪ್ರತಿಷ್ಠಾಪನೆಯಿಂದ ಏನೂ ಫಲವಾಗದಂತೆ ಅದು ನಿಷ್ಫಲವಾಗುವದೆಂಬು ಶಾಸ್ತ್ರದ ಯಥಾರ್ಥ ಸ್ವರೂಪವು ಹೇಳುವದು. ಕರ್ಮದ ಈ ರೀತಿಯನ್ನು ನೋಡಿ ಯಾವ ಮೂರ್ಖನು ಕರ್ಮ ಮಾರ್ಗದಲ್ಲಿ ಪ್ರವರ್ತಿಸುವನು? ಯಾವನೂ ಇಲ್ಲ. ಆದರೆ ವೇದದ ವಿಷಯವಾಗಿ ಅಭಿಮಾನವನ್ನು ವಹಿಸಿದವರು ಮಾತ್ರ ವೇದದಲ್ಲಿ ಕರ್ಮಕಾಂಡವು ಹೇಳಲ್ಪಟ್ಟದೆ ಎಂದು ಕರ್ಮಾಚರಣೆಯಲ್ಲಿ ಮಗ್ನರಾದರೆ, ಅಂಥವಂಗೆ ಶ್ರೇಷ್ಠವಾದ ಚಿತ್ಸ್ವರೂಪ ತೇಜದ ಪ್ರಾಪ್ತಿಯು ಎಂದೂ ಆಗಲಾರದು. ಸರ್ವ ಪ್ರಾಣಿಮಾತ್ರಕ್ಕೆ ಅಂತರ್ಜ್ಞಾನ ಬಾಹ್ಯಜ್ಞಾನವೆಂಬದಾಗಿ, ಎರಡು ಪ್ರಕಾರದ ಜ್ಞಾನಗಳವೆ. ಬಾಹ್ಯಜ್ಞಾನವೆಂದರೆ ಸರ್ವ ಪ್ರಪಂಚದ ಕುಟಿಲತನ. ಅಂತರ್ಜ್ಞಾನವೆಂದರೆ ಅನುಭವದಿಂದ ತಿಳಿಯತಕ್ಕ ಜ್ಞಾನ. ಆದ್ದರಿಂದ ಸಿದ್ಧರಾಮನೆ, ಜಾಣನಾದವನು ಬಾಹ್ಯ ವಿಷಯಗಳ ವಾಸನೆಯನ್ನು ಮನಸ್ಸಿನಿಂದ ಕಿತ್ತುಹಾಕಿ ಆ ಮನಸ್ಸನ್ನು ವಿಜ್ಞಾನ ರೂಪ ದೀಪಕ್ಕೆ ಸನ್ಮುಖ ಮಾಡಿ ಅದನ್ನು ವಶಮಾಡಿಕೊಂಡು ಸರ್ವದಾ ಸದಸದ್ವಿಚಾರ ಪರನಾಗಿರುವನು. ವಿಷಪಾನ ಮಾಡಿದವನಿಗೆ ವಿಷವೈದ್ಯನಾದರೂ ರಕ್ಷಿಸಲಿಕ್ಕೆ ಅಸಮರ್ಥನಿರುವಂತೆ ವಿಷಯ ಸುಖದ ಸೆಳವಿಗೆ ಬಿದ್ದು ಭ್ರಷ್ಟನಾದವನನ್ನು ಬ್ರಹ್ಮದೇವನು ಕೂಡ ರಕ್ಷಿಸಲಾರನು. ಅನೇಕರನ್ನು ಅಂತ್ಯದಲ್ಲಿ ನಾಶಕ್ಕೀಡು ಮಾಡುವ ವಿಷಯೋಪಭೋಗವನ್ನು ಬಿಡದೆ ಅಜ್ಞಾನಿಗಳಾದವರು ಸಾಧುಗಳಂತೆ ಮೆರೆಯುವರು. ಇಂಥವರಿಂದ ಯೋಗಸಾಧನವಾಗದು. ಹೊಟ್ಟೆ ತುಂಬಿಕೊಳ್ಳುವದಕ್ಕಾಗಿ ಅನೇಕರು ಯೋಗಿಗಳಂತೆ ಕಾಷಾಯಾಂಬರವನ್ನು ಧರಿಸಿ ಕಯ್ಯಲ್ಲಿ ಕಮಂಡಲವನ್ನು ಹಿಡಿದು, ತಾವು ಸಾಧುಗಳೆಂದೂ ಯೋಗಿಗಳೆಂದೂ ಹೇಳುತ್ತ ಮನೆ ಮನೆ ತಿರುಗಿ ಮಂತ್ರತಂತ್ರಾದಿಗಳ ಸಹಾಯದಿಂದ ಜನರನ್ನು ಠಕ್ಕಿಸುವರು. ಇಂಥವರ ಕೂಡ ಜಾಣರಾದವರು ಯಾವ ತರದ ವ್ಯವಹಾರವನ್ನು ಮಾಡಕೂಡದು.

ವಿಷಯೇಂದ್ರಿಯಗಳು ಅತಿಭಯಂಕರವಾಗಿದ್ದು ಅವುಗಳನ್ನು ತ್ಯಾಗಮಾಡುವ ಕಾರ್ಯವು ಬಹು ಕಠಿಣವಾಗಿದೆ. ಅವುಗಳನ್ನು ವಶಮಾಡಿಕೊಂಡ ಶಿವ

ಯೋಗಿಗಳೇ ಧನ್ಯರು. ಅವರು ಸರ್ವದಾ ಬ್ರಹ್ಮಾನಂದ ಸುಖದಲ್ಲಿ ಮಗ್ನರಾಗಿ ಅದರಿಂದ ಎಂದೂ ಚ್ಯುತಿಯನ್ನು ಹೊಂದುವದಿಲ್ಲ. ಕೆಸರಿನಲ್ಲಿ ಬಿದ್ದ ಮದ್ದಾನೆಯು ತನ್ನ ಸ್ವಪ್ರಯತ್ನದಿಂದಲೇ ಕೆಸರನ್ನು ಬಿಟ್ಟು ದಂಡೆಗೆ ಬರಬೇಕಾಗುವಂತೆ ಮನುಷ್ಯರು ತಮ್ಮ ಸ್ವಂತಸಾಹಸದಿಂದ ವಿಷಯಸುಖವನ್ನು ಪರಿತ್ಯಜಿಸಬೇಕು. ಎಲೈ ಸಿದ್ಧರಾಮನೆ, ನಿನಗೆ ಶೈವದೀಕ್ಷೆಯಾದ್ದರಿಂದ ರಾಜಸ ಮತ್ತು ತಾಮಸಗುಣಗಳು ನಾಶವಾಗಿವೆ. ಆದರೂ ಅಂತರ್ಮಾರ್ಗವನ್ನು ಬಿಟ್ಟು ಬಾಹ್ಯಕರ್ಮಗಳಲ್ಲಿ ಪ್ರವೃತ್ತನಾಗಿರುವಿ. ಆದ್ದರಿಂದ ವೇದಾಗಮಗಳ ಮೇಲೆ ವಿಶ್ವಾಸವಿಟ್ಟು, ಬಂದವರ ಹೋದವರ ವಿಚಾರ ತಕ್ಕೊಳ್ಳೋಣ, ಉತ್ಸವದಲ್ಲಿ ಅಭಿಲಾಷೆಯುಳ್ಳವನಾಗೋಣ, ಮುಂತಾದ ಸಂಸಾರದಲ್ಲಿ ಸಿಲುಕಿದ ಜನರಂತೆ ಬಾಹ್ಯ ಕರ್ಮಗಳನ್ನಾಚರಿಸೋಣ ಇವೆಲ್ಲವನ್ನು ಬಿಟ್ಟು ಕಾಮ-ಕ್ರೋಧಾದಿಗಳನ್ನು ಸೋಲಿಸಿ, ಮುಕ್ತಿಸುಖದಲ್ಲಿ ವಿಹರಿಸು. ಸರ್ವ ಪ್ರಾಣಿಮಾತ್ರದ ಮೋಕ್ಷಕ್ಕೆ ಶಿವಜ್ಞಾನವೂ ಬಂಧನಕ್ಕೆ ಅದರ ಅಜ್ಞಾನವೂ ಕಾರಣವಾಗಿದೆ. ಶಿವಭಕ್ತಿಯುತವಾದ ಲಿಂಗಪೂಜಾದಿ ಕ್ರಿಯೆಗಳು ಜ್ಞಾನದ ಕುರುಹುಗಳು. ಆದರೆ ಯಜ್ಞಾದಿ ಕರ್ಮಗಳನ್ನಾಚರಿಸುವದು ಅಜ್ಞಾನದ ಗುರುತು ಕರ್ಮಗಳ ನಾಶವನ್ನು ಮಾಡಿದವನೇ ಮುಮುಕ್ಷವು. ಶಿವಭಕ್ತಿ ಶಿವಜ್ಞಾನದಿಂದ ಕರ್ಮವು ನಾಶವಾಗಲು ಕೂಡಲೆ ಮುಕ್ತಿಯು ಲಭಿಸುವದು. ಕೊರಳಲ್ಲಿ ಬಂಗಾರದ ಸರವಿದೆ ಎಂದು ಗೊತ್ತಾದ ಬಳಿಕ ಅದು ಕಳೆದು ಹೋಯಿತೆಂಬ ಕಲ್ಪನೆಯು ಹುಟ್ಟುವದಿಲ್ಲ. ತಾನು ಜ್ಞಾನಿಯೆಂದು ತಿಳಿದು ಪುನಃ ಮೇಲೆ ನಿರ್ದಿಷ್ಟವಾದ ಯಜ್ಞಾದಿ ಕರ್ಮಗಳನ್ನೆಸಗುವದಾದರೆ, ಚನ್ನಾಗಿ ಕುದಿಸಿದ ಅನ್ನವನ್ನು ನಾಯಿಗೆ ಹಾಕಿದಂತೆ ಅತನ ಬಾಳುವೆ. ಲಿಂಗಪೂಜಾದಿ ಸತ್ಕ್ರಿಯೆಗಳು ಜ್ಞಾನದಲ್ಲಿ ಅಂತರ್ಭಾವವನ್ನು ಹೊಂದುತ್ತವೆ. ಎಂಥ ಜ್ಞಾನಿಯಾದರೂ ಈ ಕ್ರಿಯೆಗಳನ್ನು ಬಿಡಲಾಗದೆಂದು ಶಾಸ್ತ್ರದ ಕಟ್ಟು ಅದೆ. ಕದಾಚಿತ್ ಅಜ್ಞಾನದಿಂದ ಅವುಗಳನ್ನು ಬಿಟ್ಟರೆ, ಆವನು ಪತಿತನಾಗುವನು, ಆ ಮೂರ್ಖನು ತಿಳಿಗೇಡಿತನದಿಂದ ದುರ್ಗಂಧ ಪದಾರ್ಥಗಳನ್ನು ಸೇವಿಸುವನೆಂದು ತಿಳಿಯಬೇಕು. ಹೀಗೆ ಏರಿ ಕೆಳಗೆ ಬಿದ್ದವನ (ಆರೂಢಪತಿತನ) ಸೇವೆಯನ್ನೂ ಪೂಜೆಯನ್ನೂ ಈತನಿಂದ ತತ್ವೋಪದೇಶ ಕೇಳೋಣವನ್ನೂ ಸರ್ವಥಾ ಮಾಡಕೂಡದು. ಜಾಣರು ಇಂಥವರ ದರ್ಶನ ಸ್ಪರ್ಶನ ಸಂಭಾಷಣಾದಿಗಳನ್ನು ಎಂದೂ ಮಾಡರು. ಎಲೈ ಸಿದ್ಧರಾಮನೆ, ನಿನಗೆ ಹೆಚ್ಚಿಗೆ ಏನು ಹೇಳತಕ್ಕದ್ದದೆ. ಇಷ್ಟಲಿಂಗದ ಪ್ರಾಣಲಿಂಗ ಭಾವಲಿಂಗಗಳ ಮುಖದಿಂದ ಯಾವ ಶಿವಭಕ್ತನು ಆದರಸತ್ಕಾರಪೂರ್ವಕವಾಗಿ ಎಚ್ಚರದಿಂದ ಪದಾರ್ಥಗಳ ರೂಪರಸ ತೃಪ್ತಿಯನ್ನು ಪ್ರಸಾದ ರೂಪವಾಗಿ ಸೇವಿಸುತ್ತಾನೋ ಅವನೇ ಶೀಘ್ರವಾಗಿ ಮುಕ್ತಿಪದಕ್ಕೆ ಸಲ್ಲುವ

ನು. ಮತ್ತು ಮಾಯೆಯನ್ನು ಸಹ ಗೆಲ್ಲುವನು. ಸಿದ್ಧರಾಮನೆ, ನನ್ನ ಐಶ್ವರ್ಯವು ಬಹಳ ವಿಸ್ತಾರವಾದದ್ದದೆ ಎಂಬ ಅಭಿಮಾನವನ್ನು ತೊರೆದು ಯೋಗಿಗಳಿಗನುಚಿತವಾದ ಬಾಹ್ಯ ಕರ್ಮಗಳನ್ನು ಬಿಟ್ಟು ಮಾಯಾರಹಿತನಾಗಿ ಅಂತರಂಗದಲ್ಲಿರುವ ಕಪಟ ಜಾಲವನ್ನು ಕಿತ್ತುಹಾಕಿ ಸಮದೃಷ್ಟಿಯನ್ನು ಪಡೆದು ಜನಸಮೂಹವನ್ನು ಬಿಟ್ಟು ಏಕಾಕಿಯಾಗಿ ಯೋಗಸಾಧನೆಯಲ್ಲಿ ಲಕ್ಷ್ಯವಿಡು. ಶಿವಜೀವೈಕ್ಯ ಸ್ವರೂಪದಲ್ಲಿ ದೃಢಭಾವವುಳ್ಳವನಾಗಿ ಒಳಗೂ ಹೊರಗೂ ಪರಿಶುದ್ಧತೆಯನ್ನು ಹೊಂದಿ, ಮನಸ್ಸಿನ ಚಾಂಚಲ್ಯವನ್ನು ನಿಲ್ಲಿಸಿ ಅದನ್ನು ನಿಶ್ಚಲವಾಗಿ ಮಾಡು. ಹೀಗೆ ಏಕಾಗ್ರವಾದ ಚಿತ್ತವನ್ನು ಮೊದಲು ಇಷ್ಟಲಿಂಗದಲ್ಲಿ ತೊಡಕಿಸಬೇಕು. ಅದರಿಂದ ಮನಸ್ಸು ಪಾಪರಹಿತವುಳ್ಳದ್ದಾಗುವದು. ಹೀಗೆ ನಿರ್ವಿಷಯವಾದ ಮನಸ್ಸನ್ನು ಪ್ರಾಣಲಿಂಗನ ಧ್ಯಾನದಲ್ಲಿರಿಸು. ಇಲ್ಲಿ ದೃಢಮನಸ್ಕನಾಗಿದ್ದುಕೊಂಡು ಸರ್ವಸಂಗ ಪರಿತ್ಯಾಗಮಾಡಿ ಭಾವಲಿಂಗ ಚಿಂತನೆಯಿಂದ ಸ್ವರೂಪ ಸುಖದಲ್ಲಿ ತಲ್ಲೀನವಾಗಿರು. ಲಿಂಗ, ಅಂಗ ಇವೆರಡರ ಸಂಬಂಧ ಜ್ಞಾನವಾದ ಬಳಿಕ ಇವುಗಳ ಐಕ್ಯದಲ್ಲಿ ಆಸಕ್ತನಾದರೆ ನೀನೆ ಲಿಂಗಸ್ವರೂಪನಾಗುವಿ. ಇದು ಸತ್ಯ ಆದ್ದರಿಂದ ನೀನು ಲಿಂಗಸ್ವರೂಪನಾಗಲಿಕ್ಕೆ ಪ್ರಯತ್ನಮಾಡು. ಯಾವನು ವೀರಶೈವ ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಶಿವದೀಕ್ಷೆಯನ್ನು ಹೊಂದಿ ಲಿಂಗಾಂಗ ಸಂಬಂಧಿಯಾಗಿ ಇಷ್ಟ-ಪ್ರಾಣ-ಭಾವಲಿಂಗಗಳ ಅನುಸಂಧಾನದಲ್ಲಿ ಮಗ್ನನಾಗಿ ಶಿವತತ್ವದ ಕಡಿಗೆ ತನ್ನ ಲಕ್ಷ್ಯವನ್ನು ಪೂರಯಿಸುವನೋ ಅವನೇ ಶ್ರೇಷ ಗುರುವು ಇದು ನಿಜ ಸರ್ವ ಆಗಮಗಳ ತಾತ್ಪರ್ಯವಾದರೂ ಹೀಗೇ ಇರುವದು.

ಗುರುವರ್ಯನಾದ ಅಲ್ಲಮನು ಹೀಗೆ ಉಪದೇಶ ಮಾಡಿ ಸಿದ್ಧರಾಮನನ್ನು ಏಕಾಂತ ಸ್ಥಾನಕ್ಕೆ ಕರೆದುಕೊಂಡು ಹೋಗಿ, ಯೋಗ್ಯವಾದ ಆಸನದ ಮೇಲೆ ಆತನನ್ನು ಕೂಡ್ರಿಸಿ ಅವನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಇಷ್ಟಲಿಂಗ ಸಂಬಂಧ ಮಾಡಿ ಆತನ ಜನ್ಮವನ್ನು ಸಾರ್ಥಕಗೊಳಿಸಿದನು. ಆತನ ಹಣೆಯಲ್ಲಿದ್ದ ದುಷ್ಕರ್ಮಗಳ ಬರಹವನ್ನು ಶುಭ್ರವಾದ ವಿಭೂತಿ ಪಟ್ಟದಿಂದ ಅಳಿಕಿಸಿ, ಅವನ ತಲೆಯಮೇಲೆ ತನ್ನ ವರದ ಹಸ್ತವನಿಟ್ಟು, ದಯಾರ್ದ್ರದೃಷ್ಟಿಯಿಂದ ಆತನನ್ನು ನೋಡಿ, ಅವನ ಶರೀರವನ್ನು ಪವಿತ್ರ ಮಾಡಿದನು. ಮತ್ತು ಅವನಿಗೆ ಶಾಂಭವೀ ದಿವ್ಯ ಮುದ್ರೆಯನ್ನು ಹೇಳಿ ಅವನ ದೇಹವನ್ನು ಚಿತ್ಸ್ವರೂಪ ಮಾಡಿ, ಅವನ ದೇಹದ ಮೇಲಿದ್ದ ಅಭಿಮಾನವನ್ನು ನಾಶಗೊಳಿಸಿದನು. ಅವನಿಗೆ ಲಿಂಗಜ್ಞಾನವನ್ನು ಮಾಡಿಕೊಟ್ಟು ಅದರಲ್ಲಿ ಆತನ ಚಿತ್ತವು ಸ್ಥಿರವಾಗಿರುವಂತೆ ಮಾಡಿ, ಅವನ ಶಿಟ್ಟಿನ ಸ್ವಭಾವವನ್ನು ಬಿಡಿಸಿ ಪರಮ ದಯಾಳುವಾಗಿ ಮಾಡಿದನು. ಕಲ್ಯಾಣಕಾರಕ ಶಿವಜೀವೈಕ್ಯೋಪದೇಶವನ್ನು ಮಾಡಿದ್ದರಿಂದ ಆತನ ಹೃದಯ

ದಲ್ಲಿ ಚಿತ್ಸ್ವರೂಪಜ್ಯೋತಿಯು ಬಿಂಬಿಸಹತ್ತಿತು. ಸಿದ್ಧರಾಮನು ಮನಸ್ಸಿನಲ್ಲಿ ಶಿವಯೋಗ ಸಮಾಧಿಯನ್ನು ಧಾರಣಮಾಡಿ, ಲಿಂಗೈಕ್ಯಾನುಭವದ ಕಡೆಗೆ ಹೆಚ್ಚು ಗಮನಕೊಟ್ಟದ್ದರಿಂದ ಕೂಡಲೆ ಅವನಿಗೆ ಬಾಹ್ಯಕರ್ಮಗಳ ವಿಸ್ಮೃತಿಯುಂಟಾಯಿತು. ಹೀಗೆ ಲಿಂಗಾನಂದ ಸಮುದ್ರದಲ್ಲಿ ಮಗ್ನನಾಗಿ ನಂತರ ಅಲ್ಲಮನ ಚರಣಾರವಿಂದಗಳಿಗೆ ನಮಸ್ಕರಿಸಿ,

ಸಿದ್ಧರಾಮ—ಗುರುಮಹಾರಾಜನೆ, ನಿಮ್ಮ ಚರಣಕಮಲಗಳಲ್ಲಿರುವ ಮಕರಂದವನ್ನು ನಾನು ಸೇವಿಸಿದ್ದರಿಂದ, ನನಗೆ ಶಿವಯೋಗ ಸಮಾಧಿಯ ಲಾಭವುಂಟಾಯಿತು; ಮತ್ತು ಅಜ್ಞಾನರೂಪವಾದ ಅಂಧಕಾರವು ನಾಶವಾಗಿ, ಶಿವಜ್ಞಾನರೂಪ ಪ್ರಕಾಶವು ಪ್ರಕಟವಾಯಿತ. ಎಲೈ ಗುರುಶ್ರೇಷ್ಠನೆ, ನಿನ್ನ ಕೃಪೆಯಿಂದ ನಾನು ಪವಿತ್ರನಾದೆನು. ಇವತ್ತು ನನ್ನ ಇಚ್ಛೆಯು ಪೂರ್ಣವಾಯಿತು; ಇನ್ನು ನನಗೆ ಚಿತ್ಸ್ವರೂಪದ ಯಥಾರ್ಥ ಜ್ಞಾನವಾಗಲಿಕ್ಕೆ ಯಾವ ಅಭ್ಯಂತರವೂ ಇಲ್ಲ.

ಅಲ್ಲಮಪ್ರಭು— (ನಮ್ರಭಾವದಿಂದ ಕೈ ಜೋಡಿಸಿ ನಿಂತುಕೊಂಡ ಸಿದ್ಧರಾಮನನ್ನು ಪ್ರೇಮಪೂರ್ವಕವಾಗಿ ಆಲಿಂಗನ ಮಾಡಿ) ಎಲೈ ಸಿದ್ಧರಾಮನೆ, ನಿನ್ನ ಮನಸ್ಸು ಪಾಪರಹಿತವಾಗಿರಲಿ. ಶಿವಭಕ್ತಿಯು ನಿನ್ನಲ್ಲಿ ಸ್ಥಿರವಾಗಿಯೂ ಪ್ರೀತಿಕರವಾಗಿಯೂ ನೆಲಿಸಲಿ. ಪೂರ್ಣವಾದ ಯೋಗಸಿದ್ಧಿಯು ಘಟಿಸಲಿ, ಕಾಯಸಿದ್ಧಿಯುಂಟಾಗಲಿ. ಮತ್ತು ನಿನ್ನ ಮೇಲೆ ಗುರುವಿನ ಕೃಪಾದೃಷ್ಟಿಯು ಶಾಶ್ವತವಾಗಿರಲಿ. ಎಂದು ಅಲ್ಲಮಪ್ರಭುವು ಅವನಿಗೆ ವರಗಳನ್ನು ಕೊಡಲು ಆತನು ತಲೆಬಾಗಿಸಿಕೊಂಡು ನನ್ನಂಥ ಧನ್ಯರು ಮೂರುಲೋಕದಲ್ಲ ಯಾರೂ ಇಲ್ಲವೆಂದು ತಿಳಿದು ಆನಂದ ಸಮುದ್ರದಲ್ಲಿ ತೇಲಾಡಹತ್ತಿದನು.

೯ನೆಯ ಅಧ್ಯಾಯ ಸಂಪೂರ್ಣ.



# ೧೧ನೆಯ ಅಧ್ಯಾಯ.



## ಪ್ರಭುದೇವರು

## ಸಿದ್ಧರಾಮನೊಡನೆ ಕಲ್ಯಾಣಕ್ಕೆ ಬಂದು ಬಸವೇಶ್ವರನನ್ನು ಕಂಡು, ಅವನ ಮುಂದೆ ಮರುಳ ಶಂಕರನ ಮಹತ್ವವನ್ನು ವರ್ಣಿಸಿದ್ದು.



ಸೊಲ್ಲಾಪುರದಲ್ಲಿ ಸಿದ್ಧರಾಮನೊಡನೆ ಅಲ್ಲಮಪ್ರಭುವು ಇರುತ್ತಿರಲು, ಸದ್ಭಕ್ತರಿಂದ ಕಲ್ಯಾಣ ನಗರದಲ್ಲಿರುವ ಬಸವೇಶ್ವರನ ಭಕ್ತ್ಯತಿಶಯವನ್ನೂ ಆತನ ಸದಾಚರಣೆಯನ್ನೂ ಕೇಳಿ ಸಂತೋಷ ಹೃದಯನಾಗಿ ಆ ಮಹಾತ್ಮನ ದರ್ಶನಕ್ಕೋಸುಗ ಅಲ್ಲಮನು ಸಿದ್ಧರಾಮನೊಡನೆ ಸೊಲ್ಲಾಪುರವನ್ನು ಬಿಟ್ಟು ಕಲ್ಯಾಣನಗರಕ್ಕೆ ಹೊರಟನು. ಬರುವ ದಾರಿಯಲ್ಲಿ ಎರಡೂ ಪಕ್ಕಗಲು ಗಿಡಗಳು ದಟ್ಟವಾಗಿ ಬೆಳೆದುದರಿಂದ, ದಾರಿಕಾರರಿಗೆ ಸೂರ್ಯನ ಬಿಸಿಲು ಸ್ವಲ್ಪಾದರೂ ಹತ್ತುತ್ತಿರಲಿಲ್ಲ. ಮಾರ್ಗದಲ್ಲಿ ಅನೇಕ ಹೂವು ಹಣ್ಣು ಹಂಪಲುಗಳುಳ್ಳ ತೋಟಗಳನ್ನೂ ಸವಿನೀರಿನ ಸರೋವರಗಳನ್ನೂ ಅವರು ನೋಡುತ್ತ ಬರುವಾಗ ಪಥಿಕರು— "ಅಹಹ! ಬಸವೇಶ್ವರನು ಮೂರ್ತಿವಂತಧರ್ಮ ಸ್ವರೂಪನಾಗಿದ್ದಾನೆ. ಅವನು ಭೂಮಿಯಲ್ಲಿ ಅವತರಿಸಿ ಕಲಿಯುಗವನ್ನು ನಾಶಮಾಡಿ ಕೃತಯುಗವನ್ನು ಸ್ಥಾಪಿಸಿದನು; ಸರ್ವ ಶಿವಭಕ್ತರ ದೋಷವನ್ನು ಪರಿಹರಿಸಿ ತಾನು ಇಹಪರವೆರಡರಲ್ಲಿಯೂ ತನ್ನ ಮಹಿಮಾತಿಶಯದಿಂದ ಸುಖದಲ್ಲಿರಿಸಿರುವನು, ಎಂದು ತಮ್ಮತಮ್ಮೊಳಗೆ ಸಂತೋಷದಾಯಕವಾದ ಮಾತುಗಳನ್ನಾಡಿ ಬಸವೇಶ್ವರನನ್ನು ಅಧಿಕವಾಗಿ ಕೊಂಡಾಡುತ್ತಿದ್ದರು. ಅದನ್ನು ಕೇಳಿ ಬಸವೇಶ್ವರನ ಧನ್ಯತೆಯ ವಿಷಯವಾಗಿ ತಾನೂ ಆತನನ್ನು ಸ್ತುತಿಸಿ, ಸಿದ್ಧರಾಮನನ್ನುದ್ದೇಶಿಸಿ ಪದೆ

ಪದೆ—ಅಹಹ! ನನ್ನ ಭಕ್ತನು ನನಗಿಂತಲೂ ಅಧಿಕನು. ಬಸವೇಶ್ವರನು ಸರ್ವ ಭಕ್ತರಿಗಿಂತಲೂ ಶ್ರೇಷ್ಠನು. ಭಕ್ತನ ಮಹಿಮೆಯನ್ನು ಬ್ರಹ್ಮದೇವನು ಸಹ ತನ್ನ ನಾಲ್ಕು ಮುಖಗಳಿಂದ ಹೇಳಲಾಗುವದಿಲ್ಲ. ಭಕ್ತನಿಗೂ ಶಿವನಿಗೂ ಎಳ್ಳಷ್ಟಾದರೂ ಭೇದವಿಲ್ಲ. ಆದಾಗ್ಗೂ ಭಕ್ತನೇ ಅಧಿಕನು. ಬಸವೇಶ್ವರನು ಸಾಕ್ಷಾತ್ ಸಚ್ಚಿದಾನಂದ ಸ್ವರೂಪನೂ ತನ್ನನ್ನಾಶ್ರಯಿಸಿದವರಿಗೆ ಮೋಕ್ಷಪ್ರಾಪ್ತಿಯನ್ನುಂಟು ಮಾಡತಕ್ಕವನೂ ಆಗಿದ್ದಾನೆ. ಎಂದು ಆತನನ್ನು ಕೊಂಡಾಡುತ್ತ ಸಿದ್ಧರಾಮನೊಡನೆ ಅಲ್ಲಮನು ಕಲ್ಯಾಣಪಟ್ಟಣದ ಸಮೀಪಕ್ಕೆ ಬಂದು ಪಟ್ಟಣವನ್ನು ಬಿಟ್ಟು ಸುಮಾರು ಎರಡು ಹರದಾರಿ ದೂರವಿದ್ದ ಒಂದು ರಮಣೀಯವಾದ ಹೂದೋಟವನ್ನು ಕಂಡು ಆದನ್ನು ಪ್ರವೇಶ ಮಾಡಿದನು. ಅಲ್ಲಿದ್ದ ಶುಕಪಿಕಗಳಿಂದ ಸ್ತುತಿರೂಪ ಮನ್ನಣೆಯನ್ನು ಹೊಂದಿ, ಆ ವನದ ಮಂದ ಸುಗಂಧ ಶೀತಲವಾದ ವಾಯುವಿನಿಂದ ಮನದಲ್ಲಿ ಅತ್ಯಂತ ಸಂತೋಷವನ್ನು ತಾಳಿ ಮುಂದೆ ಬರಲು, ಅಲ್ಲಮಪ್ರಭುವು ಸಮೀಪದಲ್ಲಿ ಒಂದು ಶಿವಯೋಗಿಗಳ ಮಠವನ್ನು ಕಂಡನು. ಆ ಮಠದಲ್ಲಿ ಶಿವಯೋಗಿಗಳು ತಮ್ಮ ಶಿಷ್ಯಸಮೂಹದೊಡನೆ ಇದ್ದು ಅವರ ಕೂಡ ಯಾವಾಗಲೂ ಶಿವಾನುಭವಶಾಸ್ತ್ರ ವಿಚಾರ ಮಾಡುತ್ತಿದ್ದರು. ಅದರಿಂದ ಅಲ್ಲಮನಿಗೆ ಮತ್ತಿಷ್ಟು ಸಂತೋಷವಾಯಿತು. ಸರ್ವ ಕಲ್ಯಾಣಗಳಿಗೆ ತವರಮನೆಯಾದ ಆ ಕಲ್ಯಾಣ ಪಟ್ಟಣವು ಇಂದ್ರನ ಅಮರಾವತಿಯನ್ನು ಸಹ ತನ್ನ ವೈಭವಾತಿಶಯದಿಂದ ತಿರಸ್ಕರಿಸುತ್ತಿತ್ತು. ಇಂತಹ ಮಂಗಳ ಮಯವಾದ ಪಟ್ಟಣವನ್ನು ತನ್ನ ಪಾದಧೂಳಿಯಿಂದ ಹೆಚ್ಚಿಗೆ ಪವಿತ್ರವಾಗಿ ಮಾಡಬೇಕೆಂದು ಅಲ್ಲಮನು ಕಲ್ಯಾಣವನ್ನು ನೋಡುತ್ತ ಒಳಹೊಕ್ಕನು.

ಜಂಗಮ ವೇಷಧಾರಿಯಾದ ಪ್ರಭುದೇವರು ಸಿದ್ಧರಾಮನನ್ನು ಕೂಡಿಕೊಂಡು ಆ ಪಟ್ಟಣದ ರಾಜಬೀದಿಗಳಲ್ಲಿ ಹಾಯ್ದು ಬಸವೇಶ್ವರನ ಅರಮನೆಯ ಹತ್ತಿರವಿದ್ದ ಧರ್ಮಶಾಲೆಯ ಬಳಿಗೆ ಬರಲು, ಮಾರ್ಗದಲ್ಲಿ ಭಾವಿಕ ಜನರು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದರು. ಮತ್ತು ಬಸವೇಶ್ವರನ ಭಕ್ತಿಯನ್ನು ಪ್ರಕಟಿಗೊಳಿಸುವದಕ್ಕಾಗಿ ಶಿವನು ಸಗುಣ ಮೂರ್ತಿಯನ್ನು ಧಾರಣಮಾಡಿ, ಅಲ್ಲಮನೆಂಬಭಿಧಾನದಿಂದ ಇಲ್ಲಿಗೆ ದಯಮಾಡಿಸಿರುವನೆಂದು ಯೋಗೀಶ್ವರರು ಭಾವಿಸಿ ಆತನಿಗೆ ನಮಸ್ಕರಿಸುತ್ತಿದ್ದರು. ಅಷ್ಟರಲ್ಲಿ ಬಸವೇಶ್ವರನ ಅರಮನೆಗೆ ಅಲ್ಲಮನು ಬರಲು, ದ್ವಾರದಲ್ಲಿದ್ದ ಹಡಪದ ಅಪ್ಪಣ್ಣನು ಎದ್ದು ತಲೆಬಾಗಿ ನಮಸ್ಕರಿಸಿ, ಗಣಸಮೂಹದಲ್ಲಿ ಲಿಂಗಪೂಜೆಯನ್ನು ಮಾಡುತ್ತ ಕುಳಿತಿದ್ದ ಬಸವೇಶರನಿಗೆ ಅಲ್ಲಮನ ಆಗಮನವನ್ನು ತಿಳಿಸಿದನು. ಅದರಿಂದ ಬಸವೇಶ್ವರನಿಗೆ ಪರಮಾನಂದವಾಯಿತು. ತನ್ನ ಇಷ್ಟಲಿಂಗ ಪೂಜೆಯ ಮೂಲಕ ಶಿವನು ಪ್ರಸ

ನ್ನನಾಗಿ ಚರಲಿಂಗವೇಷವನ್ನು ತಾಳಿ ತನ್ನನ್ನು ಕೃತಾರ್ಥನಾಗಿ ಮಾಡಲೋಸುಗ ತನ್ನರಮನೆಗೆ ಬಂದಿರುವನೆಂದು ಹಡಪದ ಅಪ್ಪಣ್ಣನಿಗೆ ಹೇಳಿ ಅವನನ್ನು ಒಳಗೆ ಕರಕೊಂಡು ಬರಲಿಕ್ಕೆ ತಿಳಿಸಿದನು. ಬಸವೇಶ್ವರನ ಅಪ್ಪಣೆಯನ್ನು ಶಿರಸಾವಹಿಸಿ ಹಡಪದ ಅಪ್ಪಣ್ಣನು ಅಲ್ಲಮನ ಬಳಿಗೆ ಬಂದು ಭಕ್ತಿಭಾವದಿಂದ ನಮಸ್ಕರಿಸಿ ಒಳಗೆ ಬರಲಿಕ್ಕೆ ವಿಜ್ಞಾಪನೆಮಾಡಿಕೊಳ್ಳಲಾಗಿ, ಅಲ್ಲಮನು—“ಏನಪ್ಪಾ! ಒಳಗೆ ಅಂದರೆ ಎಲ್ಲಿ? ಹೊರಗೆ ಅಂದರೆ ಎಲ್ಲಿ? ಶಿವನೊಬ್ಬನೇ ಸರ್ವತ್ರವ್ಯಾಪಿಸಿರುವನೆಂದು ದೃಢವಾದ ವಿಶ್ವಾಸವುಳ್ಳ ಶರಣರಿಗೆ ಒಳಗೆ ಹೊರಗೆ ಎಂಬವು ಏನೂ ಇಲ್ಲ ಶ್ರೀಮಂತರೆಂದರೆ ಅವರಲ್ಲಿ ಡಾಂಭಿಕತನ ಗರ್ವ ಮುಂತಾದದ್ದು ಹೆಚ್ಚು ಇರುತ್ತದೆ ಆದ್ದರಿಂದ ಬಸವಣ್ಣನಂಥ ದಂಡನಾಯಕನ ಅರಮನೆಯ ಸುದ್ದಿ ನಮಗೇಕೆ?” ಎಂದು ಮನಸ್ಸಿಗೆ ಹತ್ತುವಂತೆ ಆಡಿದ ಮಾತುಗಳನ್ನು ಕೇಳಿ ಭಯಭಕ್ತಿಯಿಂದ ನಮಸ್ಕರಿಸಿ, ಮತ್ತೊಬ್ಬ ದೂತನ ಕಡೆಯಿಂದ ಬಸವೇಶ್ವರನು ತೀವ್ರವಾಗಿ ಲಿಂಗ ಪೂಜೆಯನ್ನು ತೀರಿಸಿಕೊಂಡು ಬರಬೇಕೆಂದು ಹೇಳಿಕಳಿಸಿದನು. ಬಸವೇಶ್ವರನು ಪೂಜೆಯನ್ನು ತೀರಿಸಿಕೊಂಡು ನಡಗುತ್ತ—“ಏನು ನನ್ನ ದುರ್ದೈವ! ನನ್ನಿಂದ ಮಹದಪರಾಧವು ಘಟಿಸಿತು. ನನಗೆ ಗುರುಭಕ್ತಿಯ ಮಾರ್ಗವು ಅರಿಯದಾಯಿತು. ನಾನು ಈವರೆಗೂ ಮಾಡಿದ ಗುರುಭಕ್ತಿಯು ವ್ಯರ್ಥವಾಯಿತು. ಗುರುವಿನ ಅವಕೃಪೆಯು ನನ್ನ ಮೇಲೆ ಉಂಟಾಯಿತಲ್ಲಾ!” ಎಂದು ಬಸವಣ್ಣನು ಚಿಂತಾಕ್ರಾಂತನಾಗಿರುವದನ್ನು ಮಡಿವಳ ಮಾಚಿದೇವನು ತಿಳಿದು—“ಬಸವೇಶ್ವರನೆ, ಆ ಮಹಾ ಘನಮಹಿಮನು ಲೀಲೆಯಿಂದ ಭಕ್ತರ ಮನವನ್ನು ನೋಡಬೇಕೆಂದು ನಿನ್ನ ಮನೆಯ ಬಾಗಿಲಿಗೆ ಬರಲು ಅದನ್ನರಿಯದೆ ಗರ್ವಯುತನಾಗಿ ನಿನ್ನೆಡೆಗೆ ಬರಹೇಳುವದು ಯೋಗ್ಯವೇ?” ಎಂದು ಅನ್ನಲು, ಬಸವೇಶ್ವರನು ತನ್ನ ತಪ್ಪಿಗೆ ಒಪ್ಪಿಕೊಂಡು ಹರಮುನಿದರೆ ಗುರು ಕಾಯ್ವನು. ಗುರು ಮುನಿದರೆ ಕಾಯ್ವರಾರು? ಎಂದು ಭೀತಿಯಿಂದ ನಡಗುತ್ತ ಸರ್ವಭಕ್ತರೊಂದಿಗೆ ಅಲ್ಲಮನೆಡೆಗೆ ಬಂದು ಭಯಭಕ್ತಿಯುಳ್ಳಾತನಾಗಿ ನಮಸ್ಕರಿಸಿ—“ಎಲೈ ಕೃಪಾಸಮುದ್ರನಾದ ಗುರುಶ್ರೇಷ್ಠನೆ, ನಾನು ಮರವೆಯ ಮರುಳು, ನೀನು ಜ್ಞಾನದ ಕಣಿಯು; ನಾನು ರಂಜಕನು. ನೀನು ನಿರಂಜನನು; ವಿಚಾರಿಸಲಾಗಿ ನಾನು ಪಶುವು, ನೀನು ಪಶುಪತಿ; ಆದ್ದರಿಂದ ನನ್ನ ತಪ್ಪನ್ನು ತಿದ್ದಿ ನನ್ನನ್ನು ನೀನು ರಕ್ಷಿಸಬೇಕು.” ಎಂದು ನಮ್ರತನದಿಂದ ಆತನ ಪಾದಗಳ ಮೇಲೆ ಬಿದ್ದನು. ಅಷ್ಟರಲ್ಲಿ ಚನ್ನಬಸವಣ್ಣನು ಅಲ್ಲಿಗೆ ಬಂದು—“ಎಲೈ ಪ್ರಭುವೆ, ಪ್ರೀತಿಯ ತಂದೆತಾಯಿಗಳು ತಮ್ಮ ಮುದ್ದು ಮಕ್ಕಳಲ್ಲಿ ಗುಣದೋಷಗಳನ್ನು ಭಾವಿಸುವರೇ? ನೀವೇ ಬಸವೇಶ್ವರನಿಗೆ ತಂದೆತಾಯಿ, ಬಂಧು-ಬಳಗ. ಆತನನ್ನು ರಕ್ಷಿಸುವ

ಭಾರವು ನಿನ್ನಮೇಲೆಯೇ ಸರ್ವದಾ ಕೂಡಿದೆ” ಎಂದು ವಿನಯಪೂರ್ವಕವಾಗಿ ಅಲ್ಲಮ ನಿಗೆ ಬೇಡಿಕೊಂಡನು. ಅದೇ ಸಮಯದಲ್ಲಿ ಮಡಿವಳ ಮಾಚಿದೇವನು ಅಲ್ಲಿಗೆ ಬಂದು ನಡೆದ ಸಂಗತಿಯನ್ನು ತಿಳಿದು, ಅಲ್ಲಮನಿಗೆ ನಮಸ್ಕರಿಸಿ—“ಎಲೈ ಪ್ರಭುವೆ, ಯುದ್ಧಕಲೆಯಲ್ಲಿ ನಿಷ್ಣಾತನಾದವನು ಸರ್ವ ಪ್ರಕಾರದ ಅನುಕೂಲತೆಯಿದ್ದಾಗ್ಯೂ, ರಣರಂಗದಲ್ಲಿ ತನ್ನ ಪರಾಕ್ರಮವನ್ನು ತೋರಿಸದಿದ್ದರೆ ಆವನು ದೋಷಕ್ಕೆ ಪಾತ್ರನಾ ಗುವನು. ಆದರೆ ಗರಡೀಮನೆಯಲ್ಲಿ ಕೈತಪ್ಪಿದರೆ ಅದು ದೋಷವೆನಿಸುವದಿಲ್ಲ. ಅದರಂತೆ ಈ ಬಸವೇಶ್ವರನು ಶಿವಭಕ್ತಿಯ ಅಭ್ಯಾಸದಲ್ಲಿ ಇನ್ನೂ ಬಾಲನು ಆವ ನಲ್ಲಿ ದೋಷವೇನಾದರು ಕಂಡರೆ ತಾವು ಅದನ್ನು ತಿದ್ದಿ ಅವನನ್ನು ರಕ್ಷಿಸಬೇಕು; ಕೃಪಾನಿಧಿಯೆ, ಬಸವೇಶ್ವರನು ಇನ್ನೂ ಅಲ್ಪ ವಯಸ್ಕನು. ನಿಮ್ಮ ಉಪದೇಶ ರೂಪ ಭಕ್ತಿ ಶಕ್ತಿಯ ಆಧಾರದಿಂದ ಪ್ರಚಲಿತವಾದ ಭಕ್ತಿಮಾರ್ಗದಲ್ಲಿ ಚಲಿಸುವನು. ನಿಮ್ಮ ಉಪದೇಶದವಿನಾ ಚನ್ನಾಗಿ ನಡೆಯುವದು ಆತನಿಂದಾಗದು. ಆದ್ದರಿಂದ ಜ್ಞಾನಕ್ರಿಯಾ ತ್ಮಕವಾದ ಶಿವಭಕ್ತಿಯ ರೀತಿಯನ್ನು ಆತನಿಗೆ ಕಲಿಸುವದು ನಿಮ್ಮಮೇಲೆಯೇ ಕೂಡಿದೆ” ಎಂದು ಪ್ರಾರ್ಥಿಸಿದನು +. ಇದರಂತೆ ಕಿನ್ನರಯ್ಯನೂ ಉಳಿದ ಗಣಸಮೂಹವೂ ಅಲ್ಲ ಮನನ್ನು ನಮಸ್ಕರಿಸಿ—“ ಪ್ರಭುವೆ, ವೇದಾಗಮಪುರಾಣೇತಿಹಾಸ ಧರ್ಮಶಾಸ್ತ್ರ ಮೊದಲಾದವುಗಳು ಸಹ ನಿನ್ನನ್ನು ಯಥಾರ್ಥವಾಗಿ ತಿಳಿಯಲಾರವು. ಶ್ರೀಗುರು ಕೃಪೆಯವಿನಾ ಮನುಮುನಿಗಳಿಗೂ ನಿನ್ನ ಮಹತ್ವವು ಗೋಚರವಾಗದು. ಯಾ ರು ತರ್ಕಶಾಸ್ತ್ರದಲ್ಲಿ ವಿಶಾರದರೆನಿಸಿಕೊಂಡು ದೊಡ್ಡ ದೊಡ್ಡ ಶಾಸ್ತ್ರಪ್ರಸಂಗಗ ಳನ್ನು ಜರಗಿಸುತ್ತಾರೋ, ಅವರ ಕೈಗೆ ಸಿಕ್ಕಂತೆ ತೋರಿದರೂ ನೀನು ಕಡೆಗೆ ತೋರದಿರುವಿ. ಆದರೆ ಯಾರಲ್ಲಿ ನಿನ್ನ ವಿಷಯವಾಗಿ ಅನನ್ಯವಾದ ಮತ್ತು ನಿಶ್ಚ ಲವಾದ ಭಕ್ತಿಯು ನೆಲೆಗೊಂಡಿರುವದೋ, ಅವರಿಗೆಮಾತ್ರ ನೀನು ಗುಪ್ತರೀತಿಯಿಂ ದ ಗೋಚರಿಸುವಿ. ಸಾಂಖ್ಯ ಶಾಸ್ತ್ರಜ್ಞರು ನಿನಗೆ ಪ್ರಧಾನನೆಂದೂ, ಯೋಗಶಾ ಸ್ತ್ರ ಬಲ್ಲವರು ಪುರುಷನೆಂದೂ, ಧರ್ಮಶಾಸ್ತ್ರ ಕರ್ತರು ನಿಯತಿಯೆಂದೂ; ಪಾಂಚ ರಾತ್ರ ಮತದವರು ವೈಕುಂಠನೆಂದೂ, ಶಿವಾಗಮಗಳ ಸಿದ್ಧಾಂತಸಾರವನ್ನು ಅರಿ ತವರು ಶಿವನೆಂದೂ, ಬೇರೆ ಬೇರೆ ಹೆಸರಿನಿಂದ ಕರೆಯುವರು. ಹೀಗೆ ನೀನೇ ಸರ್ವ ಜಗತ್ತಿಗೆ ಕಾರಣನೂ ಒಡೆಯನೂ ಆಗಿರುವಿ. ನೀನು ಸ್ವತಃ ನಿರ್ಗುಣನಿದ್ದರೂ ಸಗುಣನಂತೆ ತೋರುವಿ. ನೀನೊಬ್ಬನೆ ಜಗದ್ಗುರುವಾಗಿದ್ದು ಬಸವೇಶ್ವರನ ರಕ್ಷಣಾ ರ್ಥವಾಗಿ ಭೂಮಿಯಲ್ಲಿ ಅವತರಿಸಿರುವಿ. ” ಎಂದು ಆತನನ್ನು ಸ್ತುತಿಸಿದರು.

+ ಬಸವಾದಿ ಪ್ರಮಥರು ಲೋಕದಲ್ಲಿ ಗುರುಶಿಷ್ಯರ ಪರಸ್ಪರ ನಡತೆಯನ್ನು ವ್ಯಕ್ತಪಡಿಸುವದಕ್ಕಾಗಿ ಹೀಗೆ ನಟಿಸಿರುವರು ನಿಜವಾಗಿ ಅವರಲ್ಲಿ ಯಾವ ಕೊರ ತೆಯು ಇದ್ದಿಲ್ಲ.

ಬಳಿಕ ಬಸವೇಶ್ವರನು ಬಾರಿಬಾರಿಗೂ ದಂಡಪ್ರಣಾಮವನು ಮಾಡಿ— " ಎಲೈ ಪರಮೇಶ್ವರನೆ, ನೀನು ಒಕ್ಕಲಿಗನಾದ ಗೋಗಯ್ಯನನ್ನು ಮುಕ್ತಿಗೆ ಯೋಗ್ಯನಾಗಿ ಮಾಡಿದಿ. ನಿನ್ನ ಕೃಪೆಯಿಂದ ಮುಕ್ತಾಯಿಯು ಪ್ರಪಂಚವು ಅನಿತ್ಯವಾದದ್ದೂ ಭವಪ್ರದವಾದದ್ದೂ ಆತ್ಮಜ್ಞಾನವೊಂದೇ ನಿತ್ಯವಾದದ್ದೂ ಪರಮಾನಂದ ರೂಪವಾದದ್ದೂ ಎಂಬದನ್ನು ತಿಳಿದು ಕೃತಾರ್ಥಳಾದಳು; ಮತ್ತು ಸ್ವಧರ್ಮಸಂಪನ್ನನಾದ ಸಿದ್ಧರಾಮನು ನಿಮ್ಮ ಉಪದೇಶದಿಂದ ಶಾಂತನೂ ಸ್ಥಿರಮನಸ್ಕನೂ ಜೀವನ್ಮುಕ್ತನೂ ಆದನು. ಈ ವರ್ತಮಾನವನ್ನು ಕೇಳಿ ನಾನು ನಿನ್ನ ಬರುವಿಕೆಯನ್ನು ಹಾರೈಸುತ್ತಿರುವಷ್ಟರಲ್ಲಿ ನನ್ನ ಸುಕೃತ ವಿಶೇಷದಿಂದ ನೀನು ಇಲ್ಲಿಗೆ ದಯಮಾಡಿಸಿದಿ. ನನ್ನ ರಕ್ಷಣಾರ್ಥವಾಗಿ ಇಲ್ಲಿಗೆ ಬಂದು ನನ್ನನ್ನು ಬಿಟ್ಟುಕೊಟ್ಟರೆ ಮುಂದೆ ನನ್ನಗತಿ ಏನಾಗುವದು? ಪರುಷವು ಕಬ್ಬಿಣದ ಗುಣಾವಗುಣಗಳನ್ನು ನೋಡುವದೇ? ನನ್ನ ಶರೀರವು ಅನೇಕ ದೋಷಗಳಿಂದ ಕೂಡಿಕೊಂಡಿರುವದು. ನೀನು ನನ್ನನ್ನು ನಿಂದಿಸಿದಾಗ್ಯೂ ಶಿಟ್ಟಿನಿಂದ ನನ್ನನ್ನು ಹೊಡದಾಗ್ಯೂ ನಿನ್ನ ಚರಣಕಮಲ ಧ್ಯಾನವನ್ನು ನಾನು ಎಂದೂ ಬಿಡಲಿಕ್ಕಿಲ್ಲ." ಎಂದು ಪ್ರಾರ್ಥಿಸಲು, ಅಲ್ಲಮನು—" ಎಲೈ ಬಸವೇಶ್ವರನೆ, ನಿನ್ನ ಮಾತಿನಲ್ಲಿ ಮಾತ್ರ ಭಕ್ತಿಯು ತೋರುವದು; ನಡತೆಯಲ್ಲಿ ಏನೂ ಕಾಣದು. ಯಾರ ನಡೆನುಡಿಗಳು ಸರಿಯಾಗಿಲ್ಲವೋ ಅಂಥವರಿಗೆ ಶಿವಾನುಗ್ರಹವುಂಟಾಗದು. ನಿನ್ನ ಭಕ್ತಿಯ ಕ್ರಮವು ನಮಗೆ ಗೊತ್ತಾಗದು, ಶಿವನಿಗೆ ಗೊತ್ತಿದ್ದರೆ ಇರಬಹುದು, ಎಂದು ಹೇಳಿ ಸುಮ್ಮನಾದನು.

ಅನಂತರ ಬಸವೇಶ್ವರನು ಮತ್ತು ಉಳಿದ ಶಿವಗಣ ಸಮುದಾಯವು ಕೂಡಿಕೊಂಡು ದಯಾಸಮುದ್ರನಾದ ಪ್ರಭುವೆ, ನಮಗೆ ಗುರುಲಿಂಗ ಜಂಗಮ ಈ ಮೂರು ವಸ್ತುಗಳ ಕೃಪೆಯಾಗುವ ರೀತಿಯನ್ನೂ, ಅವುಗಳಲ್ಲಿ ದೃಢವಾದ ವಿಶ್ವಾಸವೂ ಭಕ್ತಿಯೂ ಲಭ್ಯವಾಗುವ ಕ್ರಮವನ್ನೂ ಹೇಳಿ ನಮಗೆ ಶಿವಧರ್ಮಶಾಸ್ತ್ರದ ರಹಸ್ಯವನ್ನು ಉಪದೇಶಮಾಡಿ ಅದರಿಂದ ನಮ್ಮನ್ನು ಕೃತಾರ್ಥರಾಗಿ ಮಾಡಬೇಕೆಂದು ಬೇಡಿಕೊಳ್ಳುತ್ತಿರಲು, ಕೃಪಾಸಾಗರನಾದ ಅಲ್ಲಮನು ಬಸವೇಶ್ವರನ ಅಂತಃಕರಣಪೂರ್ವಕವಾದ ಪ್ರಾರ್ಥನೆಗೆ ಕಿವಿಗೊಟ್ಟು ಆತನಿಂದ ಲೋಕೋಪಕಾರವಾಗುವ ಸಂಗತಿಯನ್ನರಿತು ಅವನ ಅರಮನೆಯನ್ನು ಪ್ರವೇಶಮಾಡಲಿಕ್ಕೂ ಮತ್ತು ಅವನಿಗೆ ಉಪದೇಶ ಮಾಡಲಿಕ್ಕೂ ಒಪ್ಪಿಕೊಂಡು * ಅವನ ಅರಮನೆ

* " ನಡವಳಿಗಳೇನಾದಡಾಗಲಿ । ನುಡಿವಳಿಯುಲತಿ ಜಾಣರಾದಿರಿ ।
ಪೊಡವಿಯುಲಿ ನೀವಹುದು ಮರ್ಚುಭಾಪೆನುತ ನಸುನಗುತ ॥ ನ
ಡಿಯುರೈ ಶಿವಲಿಂಗಭಕ್ತಿಯು । ಬೆಡಗನೇ ಕಾಂತದಲಿ ನಿಮಗೊಡ
ಬಡಿಸಿ ಹೇಳುವೆನೆನುತ ಬಂದನು ಬಳಿಕ ಪ್ರಭುರಾಯ ॥ ,,

ಯನ್ನು ಹೊಕ್ಕು ಪ್ರಸಾದ ಕುಂಡವೆಂಬ ಬಾವಿಯ ದಂಡೆಯ ಮೇಲೆ ಕುಳಿತು ಕೊಳಲಿನಿಂದ ವೇದಧ್ವನಿಗೆಯ್ಯುವ ಮರುಳಶಂಕರದೇವರನ್ನು ನೋಡಿದನು. ಇಂದ್ರ ಜಾಲದಂತಿರುವ ಪ್ರಪಂಚವನ್ನು ಧಿಕ್ಕರಿಸಿ ಇಷ್ಟಲಿಂಗದಲ್ಲಿ ಐಕ್ಯತೆಯನ್ನು ಪಡೆದ ಅವರನ್ನು ನೋಡಿ ಅಲ್ಲಮನಿಗೆ ಅತ್ಯಂತ ಸಂತೋಷವಾಯಿತು. ಮರುಳಶಂಕ ರನಾದರೂ ಅಲ್ಲಮನನ್ನು ಕಂಡಾಕ್ಷಣವೆ ಯೋಗಾಸನದಿಂದ ಎದ್ದು, ಭಯಭಕ್ತಿ ಯಿಂದ ಅಲ್ಲಮನಿಗೆ ನಮಸ್ಕರಿಸಿ ಅವನ ಸ್ತುತಿಯನ್ನು ಮಾಡತೊಡಗಿದ್ದನು * ಇದಕ್ಕೆ ಪ್ರತಿಯಾಗಿ ಅಲ್ಲಮನು—ಶಿಲೆಯ ಮರೆಯಲ್ಲಿ ಹೊನ್ನು, ತಿಲದ ಮರೆ ಯಲ್ಲಿ ತೈಲವು, ನೆಲದ ಮರೆಯಲ್ಲಿ ನಿಧಾನವು ಇರುವಂತೆ, ಶಂಕರನೇ ಸಾಕಾ ರರೂಪವನ್ನು ತಾಳಿ ಮರುಳ ವೇಷದಿಂದ ತನ್ನಂಗಣಕ್ಕೆ ಬಂದಿರಲು ಬಸವಣ್ಣನು ಆತನ ಹೊಲಬನ್ನು ಅರಿಯನೆಂದೂ, ಸಾಕ್ಷಾತ್ಶಂಕರನೇ ಮರುಳಶಂಕರನಾದುದರಿಂದ ಇಲ್ಲಿಗೆ ಬಂದಿರುವನೆಂದೂ ಹೇಳಿ ಅವನನ್ನು ಕೊಂಡಾಡಿ ಆತನನ್ನುದ್ದೇಶಿಸಿ.

ಅಲ್ಲಮನು— ಸಿದ್ಧರಾಮನೆ, ಈ ಮರುಳಶಂಕರದೇವರನು ಭಕ್ತಿ ಜ್ಞಾನ ವೈರಾ ಗ್ಯದ ನಿಧಿಯಾಗಿದ್ದಾನೆ. ಈತನ ದಿನಚರ್ಯವು ಉಳಿದ ಮರ್ತ್ಯರಂತೆ ಇರುವ ದಿಲ್ಲ. ಈತನು ರೂಪ ರಸ ಗಂಧ ಶಬ್ದ ಮೊದಲಾದವುಗಳನ್ನು ಕಣ್ಣು, ನಾಲಿಗೆ, ಮೂಗು ತ್ವಕ್ಕು ( ಚರ್ಮ ) ಕಿವಿ ಮುಂತಾದವುಗಳ ದ್ವಾರಾ ಆಚಾರಾದಿ ಲಿಂಗ ಗಳಿಗರ್ಪಿಸಿ ಅವುಗಳಿಂದುಂಟಾದ ಪ್ರಸಾದವನ್ನು ಭುಂಜಿಸಿ ಸರ್ವದಾ ಆನಂದ ತುಂದಿಲ ಸ್ವಾಂತನಾಗಿರುವನು. ಈತನ ನಿಜಸ್ಥಿತಿಯು ಉಳಿದವರಿಗೆ ಗೊತ್ತಾ ಗದು. ಇವನಿಂದ ತೀರ ಭಿನ್ನರಾಗಿ ಕೆಲವು ವೇಷಧಾರಿಗಳಾದ ಸನ್ಯಾಸಿಗಳು ಭೂಮಿಯಲ್ಲಿ ಇರುವರು; ಅವರು ಸ್ವತಃ ಡೌಲು ಬಹಳ ಮಾಡುವರು; ಉತ್ಸವ ಪ್ರೇಮಿಗಳಾಗಿ ಜನರಲ್ಲಿ ಮೆರೆಯುವರು; ತಮ್ಮ ಚರಿತಾರ್ಥವೂ ಲೌಕಿಕತ್ವವೂ ಚನ್ನಾಗಿ ನಡಿಯಬೇಕೆಂದು ಹೀಗೆ ಕಪಟವೇಷ ಧಾರಣ ಮಾಡುವರು; ಅವರು ಬಹಳ ಧೂರ್ತರೂ ಆತ್ಮವಂಚಕರೂ ಇರುತ್ತಾರೆ. ಡಾಂಬಿಕರೂ ಮೂರ್ಖರೂ ಮಾತ್ರ ಅವರನ್ನು ತಮ್ಮ ಲಾಭಕ್ಕಾಗಿ ಪೂಜಿಸುವರು. ಹೀಗೆ ರಾಜಸ ಮತ್ತು ತಾಮ ಸಗುಣ ಸಂಪನ್ನರಾದವರನ್ನು ಪೂಜಿಸುವದರಿಂದ ಯಾರಿಗೂ ಅಂತಃಕರಣ ಶುದ್ಧಿ

* " ಗುರುವ ಕಂಡೆನು ಯಂನಭಾಗ್ಯದ | ತರುವ ಕಂಡೆನು ಯಂ
ನ ಮುಕ್ತಿಯ। ಶಿರಿಯ ಕಂಡೆನು ಜಾಗುಮರುಳು ಭಾಪೆನುತಲಡಿ
ಗಡಿಗೆ ॥ ಕರಣಗಳು ಹರುಷೋ। ತ್ಕರಷದಲಿ ಹಾ
ರೈಸಿ ಹೆಚ್ಚುತ। ಮರುಳಶಂಕರದೇವಸ್ತುತಿಸಿದನಲ್ಲಮಪ್ರಭುವ॥,,

ಯುಂಟಾಗುವದಿಲ್ಲ. ಜಗತ್ತಿನಲ್ಲಿ ಯಾವಮಾರ್ಗದಿಂದ ಪರಮೇಶ್ವರನನ್ನಾರಾಧಿಸ ಬೇಕು? ಮೋಕ್ಷಪ್ರಾಪ್ತಿಯು ತಮಗೆ ಸಹಜವಾಗಿ ಹ್ಯಾಗಾದೀತು? ಶಿವಭಕ್ತಿಯು ನ್ನಾಚರಿಸುವ ರೀತಿಯು ಯಾವದು? ಎಂಬ ಮಹತ್ವವಾದ ವಿಷಯುಗಳಬಗ್ಗೆ ಜನರು ತಮ್ಮೊಳಗೆ ಸ್ವಲ್ಪಾದರೂ ವಿಚಾರಮಾಡದೆ, ಡೊಂಬರಾಟದಂತೆ ಒಂದು ಪ್ರಕಾರದ ಪಸಾರವನ್ನು ಹರವಿದ ಕಪಟವೇಷಧಾರಿಯಾದವನಿಗೆ ಯೋಗಿ ಎಂದು ಪೂಜಿಸುವರು. ಇಂತಹ ಪೂಜೆಯಿಂದ ಪೂಜಕನಿಗೆ ಯಾವ ಸದ್ಗತಿಯೂ ದೊರಕದು. ಕಾಮ-ಕ್ರೋಧ-ನಿದ್ರಾಲಸ್ಯ ಮುಂತಾದ ರಾಜಸ ಮತ್ತು ತಾಮಸ ಗುಣಯುತರಾದ ಜಂಭದ ಜಂಗಮರು ಭವಪಾಶದಿಂದ ಹ್ಯಾಗೆ ಬಿಡುಗಡೆಯನ್ನು ಹೊಂದಬಲ್ಲರು! ಅವರ ವಿಷಯವಾಸನೆಗಳು ಎಂದೂ ನಾಶವಾಗಲಾರವು. ಹೆಸ ರಿಗೆ ಸಾಧುವೂ ಜಂಗಮನೂ ಆದವನಿಗೆ ನಿಜವಾಗಿ ಸಾಧುವೂ ಜಂಗಮನೂ ಆದವನ ಯೋಗ್ಯತೆಯು ಹ್ಯಾಗೆ ಬಂದೀತು?

ಸಿದ್ಧರಾಮ—ಎಲೈ ಗುರುವರ್ಯನೆ, ನಾವು ಹೇಳಿಕೇಳಿ ಅಜ್ಞಾನಿಗಳು ನಿನ್ನನ್ನು ನಾವು ಸಂಪೂರ್ಣವಾಗಿ ತಿಳಿದುಕೊಳ್ಳದಲೆ ನಮ್ಮಿಂದ ನಿನ್ನನ್ನು ಪೂಜಿಸು ವದಾಗದು. ನಿನ್ನ ಕೃಪೆಯುಳ್ಳವನೇ ಭಕ್ತನು. ಅವನೇ ಯುಕ್ತನೂ ಮುಕ್ತನೂ ಆಗಿರುವನಲ್ಲದೆ ನಿಮ್ಮ ಕೃಪೆಯಿಂದಲ್ಲದೆ ಅನ್ಯದರಲ್ಲಿ ಭಕ್ತಿಯನ್ನು ಮಾಡಲು ಏನೂ ಫಲವಿಲ್ಲ. ನಿನ್ನ ಕರುಣವೇ ಜನರ ಸರ್ವ ಪ್ರಕಾರದ ಸುಖಕ್ಕೆ ಮೂಲ ಕಾರಣವು. ನಿನ್ನ ಕೃಪೆಯಿಂದಲೇ ನಮ್ಮ ಸರ್ವವ್ರತಗಳೂ ನಿಯಮಗಳೂ ಸಫಲವಾ ಗುವವು. ಈ ಮರುಳ ಶಂಕರದೇವನು ಸ್ವಾನಂದರಸದಿಂದ ಪರಿಪೂರ್ಣನಾಗಿ ದ್ದಾನೆ. ಈತನ ಬ್ರಹ್ಮಜ್ಞಾನದ ರೀತಿಯನ್ನು ಅರಿತುಕೊಳ್ಳುವದು ಇತರರಿಗೆ ಆಗ ವಲ್ಲ.

ಅಲ್ಲಮ—(ಮಂದಹಾಸದಿಂದ) ಎಲೈ ಸಿದ್ಧರಾಮನೆ, ನೀನು ಸರಿಯಾಗಿ ಮಾತಾಡಿದಿ. ನಮ್ಮ ಜೋಡಿಗೆ ನೀನು ಬಂದಿರುವಿ. ಇದರಿಂದ ನಮಗೆ ಪರ ಮಾನಂದವಾಯಿತು. ಚಿಕ್ಕವರು ಹಿತವಚನವನ್ನು ಹೇಳುತ್ತಿದ್ದರೆ ಅವರ ಮಾತನ್ನು ವಯೋವೃದ್ಧರು ಕೂಡ ಕೇಳಬೇಕು. ಅವರೇನು ಹೇಳುತ್ತಾರೆಂದು ಗರ್ವದಿಂದ ನುಡಿದು ಅವರು ಹೇಳುವದರ ಕಡೆಗೆ ದುರ್ಲಕ್ಷ್ಯ ಮಾಡ ಬಾರದು. ಒಳ್ಳೇದು ಅದಿರಲಿ. ಇನ್ನು ನಾನು ನಿನಗೆ ಈ ಮರುಳ ಶಂಕರದೇ ವನ ಅಲೌಕಿಕ ಮಹಿಮೆಯನ್ನು ಹೇಳುತ್ತೇನೆ ಕೇಳು:—

“ನಾನು ಬಲ್ಲೆನು, ನನಗೆ ಗೊತ್ತುಂಟು ಎಂದು ಹೊರಗೆ ಮಾತಾಡುವ ದನ್ನು ಬಿಟ್ಟು, ತನ್ನ ಮನಸ್ಸಿನಲ್ಲಿಯೇ ತಾನು ಅಂತರ್ಜ್ಞಾನನಿಷ್ಠನಾಗಿದ್ದವನೇ ನಿಜ

ವಾದ ಜ್ಞಾನಿಯು. ಇಂತಹ ಅಂತರ್ಜ್ಞಾನವೇ ಈ ಮರುಳ ಶಂಕರನೆಂದು ತಿಳಿ. ಈತನಿಗೆ ಬಾಹ್ಯ ವ್ಯವಹಾರಗಳಿಲ್ಲದ್ದರಿಂದ ಅಂತರ್ದೃಷ್ಟಿಯು ನಿತ್ಯಲಿಂಗಸ್ವರೂಪ ದಲ್ಲಿ ದೃಢವಾಗಿದೆ. ಇವನು ಲಿಂಗೈಕ್ಯ ಪದವಿಯನ್ನು ದೃಢೀಕರಿಸಿ ಸರ್ವದಾ ಲಿಂಗಾರಾಧನ ತತ್ಪರನಾಗಿದ್ದಾನೆ. ಇವನು ಶಾಂತಿ ಇಂದ್ರಿಯನಿಗ್ರಹ ಇವುಗಳ ಜನ್ಮಸ್ಥಾನವಾಗಿದ್ದಾನೆ. ಲಿಂಗಪ್ರಸಾದ ವಿಷಯದಲ್ಲಿ ಇವನು ಹೆಚ್ಚು ಸಾವಧಾನ ವುಳ್ಳವನಿದ್ದಾನೆ. ತನ್ನ ಸ್ವಂತ ಹೊಟ್ಟೆಯ ಸಲುವಾಗಿ ಯಾವದೊಂದು ಕೃತ್ಯ ವನ್ನು ಮಾಡಿದರೂ ಅದರಿಂದ ಜೀವಜಾಲಕ್ಕೆ ನೋವುಂಟಾಗುವದರಿಂದ ಚಿಂತಿಸಿ, ಅದು ಘಟಸಬಾರದೆಂದು ತನ್ನ ಚರಿತಾರ್ಥವನ್ನು ತೊರೆದು * ಆನಂದದಿಂದ ಮೌನ ಸ್ಥಿತಿಯನ್ನು ಧಾರಣಮಾಡಿದ್ದಾನೆ. ನಿತ್ಯದಲ್ಲಿ ಯೋಗ್ಯರಾದ ಗುರುಲಿಂಗ ಜಂಗಮರ ಪೂಜೆಯನ್ನು ಮಾಡುತ್ತಿರುವ ಭಕ್ತರ ಮನೆಗಳಿಗೆ ಹೋಗಿ, ಅವರು ಕೊಟ್ಟ ಶೇಷವನ್ನುಂಡು ತನ್ನ ಶರೀರ ರಕ್ಷಣೆಯನ್ನು ಮಾಡಕೊಂಡಿದ್ದಾನೆ. ಇವ ನಿಗೆ ಮಂಣಿನ ಹೆಂಟೆಯೂ ಬಂಗಾರದ ಗಟ್ಟಿಯೂ ಏಕರೂಪವಾಗಿ ತೋರು ತ್ತವೆ. ಇವನು ಅತಿ ನಿಸ್ಪೃಹನಾಗಿದ್ದಾನೆ. ಈತನಲ್ಲಿ ನ್ಯೂನತೆಯೂ ದೈನ್ಯ ತೆಯೂ ಕಾಮ–ಕ್ರೋಧಾದಿಗಳೂ ಯಾವವೂ ಇಲ್ಲ; ನೀಚತನ, ತಾಂತ್ರಿಕತನ ಮೊದಲಾದ ದುರ್ಗುಣಗಳನ್ನು ಕಾಲಿನಿಂದ ಮೆಟ್ಟಿ ಇಲ್ಲದಂತೆ ಮಾಡಿರುವನು; ಇವನು ಸಿದ್ಧನಿದ್ದು ಇಷ್ಟಲಿಂಗ ಸಹವಾಸದಿಂದ ಈತನ ಶರೀರವೆಲ್ಲ ಪರಮ ಪವಿತ್ರವಾಗಿದೆ. ಇವನಿಗೆ ವಿಷಯೋಪಭೋಗದ ಆಶೆಯೂ ಜನರಿಂದ ಬರತಕ್ಕ ಮಾನಮನ್ನಣೆಯ ಬಗ್ಗೆ ಕೂತೂಹಲವೂ ಎಳ್ಳಷ್ಟಾದರೂ ಇಲ್ಲ. ಇಂದ್ರಿಯಾದಿ ಕರ ಣಗಳೆಲ್ಲವೂ ಲಿಂಗದಲ್ಲಿ ಕರಗಿ ಅಂತಃಕರಣ ಶುದ್ಧಿಯುಂಟಾಗಿ, ಯೋಗ್ಯರಾದ ಶಿವಭಕ್ತರೊಕ್ಕುಮಿಕ್ಕಿದ ನುಂಬ ಮಹಿಮನಿಗೆ ಗುರು ಪ್ರತ್ಯಕ್ಷವಾಗಿ ಬಂದು ಕರು ಣಿಸಿ ಪರಶಿವ ಪದವಿಯನ್ನೀಯುವನೆಂಬುದಕ್ಕೆ ಈ ಮರುಳ ಶಂಕರದೇವನೇ ದೃಷ್ಟಾಂ ತವು. ಮರಣವುಳ್ಳವಂಗೆ ಮರುಜೀವಣಿಯು ಸಿಗದಿರುವಂತೆ, ಪಾಪಿಯ ಕಣ್ಣಿಗೆ ಪರುಷವು ಕಲ್ಲಾಗಿ ತೋರುವಂತೆ ಅಚ್ಚ ಶಿವಶರಣರು ಪೃಥ್ವಿಯಲ್ಲಿ ಭವಿಗಳ ದೃಷ್ಟಿಗೆ ಜಡದೇಹಿಗಳಾಗಿ ತೋರುವರು"

ಹೀಗೆ ಅಲ್ಲಮನಿಂದ ಮರುಳ ಶಂಕರದೇವನ ಚರಿತ್ರವನ್ನು ಕೇಳಿ ಬಸವೇ ಶ್ವರನು ಸಂತೋಷಭರಿತಮಾನಸನಾಗಿ, ಆ ಮರುಳ ಶಂಕರನನ್ನು ಮನಸ್ಸಿನಿಂದ

---

* ತೀವಿ ತನ್ನೊಂದುದರಕೋಸುಗ ।
ದಾವಕೃತ್ಯವ ಮಾಡುತಿರ್ದಡೆ ।
ಜೀವಜಾಲಕೆ ನೋವು ತಪ್ಪವೆನುತ್ತ ಕರುಣದಲಿ॥

ಧ್ಯಾನಿಸಿ, ಸೂರ್ಯೋದಯವಾದ ಬಳಿಕ ರತ್ನದ ಕಾಂತಿಯು ಕಣ್ಣಿಗೆ ಚನ್ನಾಗಿ ತೋರುವಂತೆ, ಅಲ್ಲಮನ ದರ್ಶನದಿಂದುಂಟಾದ ಪುಣ್ಯದಿಂದ ತೇಜಃಪುಂಜ ಶರೀರಿಯಾದ ಮರುಳ ಶಂಕರನ ಮಹತ್ವವನ್ನು ಕಂಡೆನೆಂದು ಅನ್ನುತ್ತಿರುವ ಬಸವೇಶ್ವರನನ್ನು ನೋಡಿ ಅಲ್ಲಮನು—ಎಲೈ ಬಸವೇಶ್ವರ, ನಿನ್ನ ಸಮಾನರಾದ ಶಿವಭಕ್ತರನ್ನು ನಾನು ಮೂರು ಲೋಕಗಳಲ್ಲಿಯೂ ಕಾಣಲಿಲ್ಲ. ಬಹಳ ಹೇಳುವದೇನದೆ! ನೀನು ನನಗಿಂತಲೂ ಶ್ರೇಷ್ಠನು. ನಿನ್ನ ಮನಸ್ಸಿನ ಸ್ಥಿತಿಯನ್ನು ಪರೀಕ್ಷಿಸುವದಕ್ಕಾಗಿ ನಾನು ಇಷ್ಟುವೇಳೆ ಅನೇಕ ಪ್ರಕಾರದ ತಿರಸ್ಕಾರ ವಚನಗಳನ್ನಾಡಿ ನಿನಗೆ ಅಪಮಾನ ಮಾಡಿದೆನು. ಬೇಕಾದಷ್ಟು ಜೋರಿನಿಂದ ಗಾಳಿಯು ಬೀಸಿದರೂ ರತ್ನದ ಜ್ಯೋತಿಯು ಹೋಗದಿರುವಂತೆ ನಿನ್ನನ್ನು ಕುರಿತು ನಾನು ನಿಂದಾಪರ ಮಾತುಗಳನ್ನಾಡಿದರೂ ನೀನು ಅವುಗಳಿಗೆ ಪ್ರತ್ಯುತ್ತರ ಕೊಡದೆ ಮನಸ್ಸಿನಲ್ಲಿ ಸ್ವಲ್ಪಾದರೂ ಚಲಿಸದೆ ಶಾಂತಿಯಿಂದ ಅವೆಲ್ಲವನ್ನು ಸಹಿಸಿಕೊಂಡು ಭಕ್ತಾಗ್ರೇಸರನೆನಿಸಿಕೊಂಡಿ. ನೀನು ಇಂದ್ರಿಯನಿಗ್ರಹ, ಶಾಂತಿ, ದಯಾ, ಧೈರ್ಯ, ಭಯ ಭಕ್ತಿ ಮುಂತಾದ ಸದ್ಗುಣಗಳ ನಿಕ್ಷೇಪ ಭೂಮಿಯಾಗಿರುವಿ.

ಬಸವೇಶ್ವರ—(ಅಲ್ಲಮನನ್ನು ಸ್ತುತಿಸುತ್ತ ನಮ್ರಭಾವದಿಂದ) ಪ್ರಭುವೆ, ನಾನು ಅಲ್ಪಜ್ಞನು. ನಿನ್ನ ಸ್ತೋತ್ರಕ್ಕೆ ನಾನು ಅರ್ಹನಾಗಿಲ್ಲ. ನಾನು ಮಾಡುವದೆಲ್ಲ ಗುರುವಿನ ಶಕ್ತಿಯಿಂದಲೇ.

ಸಿದ್ಧರಾಮ—(ಬಸವೇಶ್ವರನ ನಿರಹಂಕಾರತೆಯನ್ನು ಕಂಡು) ಎಲೈ ಬಸವೇಶ್ವರನೆ, ಮಹೇಶ್ವರನ ಪಾದಸೇವೆಯಲ್ಲಿ ನಿರತರಾದ ಪ್ರಮಥಗಣರೊಳಗೆ ನೀನು ಶ್ರೇಷ್ಠನು. ನಿನ್ನ ಸಹವಾಸದಿಂದ ನಾನೂ ಧನ್ಯನಾದೆನು. ನೀನು ಶಿವಭಕ್ತಿಯೆಂಬ ಸಮುದ್ರಕ್ಕೆ ಚಂದ್ರಸ್ವರೂಪನಾಗಿದ್ದರಿಂದ ಇನ್ನು ಮುಂದೆ ಶಿವಭಕ್ತರ ಸಂತತಿಯು ಅಭಿವೃದ್ಧಿಯನ್ನು ಹೊಂದಿ ಅವರ ವರ್ತನವು ಲೋಕದಲ್ಲಿ ಮಾನ್ಯವಾಗುವದು. ಹೀಗೆ ಸಿದ್ಧರಾಮನಾಡಿದ್ದನ್ನು ಅಲ್ಲಮನು ಕೇಳಿ ಬಸವೇಶ್ವರನನ್ನು ಯಥಾರ್ಥವಾಗಿ ವರ್ಣಿಸುವದು ಯಾರಿಂದಲೂ ಆಗದೆಂದು ಹೇಳಿ ಮತ್ತೆ ಮರುಳ ಶಂಕರದೇವನನ್ನು ಕುರಿತು ಹೇಳತೊಡಗಿದನು. ಅಲ್ಲಮನ ಮುಖದಿಂದ ಆ ಮಹಾತ್ಮನ ಚರಿತ್ರವನ್ನು ಕೇಳಿ ಬಸವೇಶ್ವರನಿಗೂ ಉಳಿದ ಭಕ್ತಗಣ ಸಮೂಹಕೂ ಪರಮಾನಂದವಾಗಿ ಅವರೆಲ್ಲರೂ ಕುರಿತು—“ ನೀನು ಸಾಕ್ಷಾನ್ಮಹೇಶ್ವರ

ನಿರುವಿ. ನಿನ್ನ ನಿಜವನ್ನು ವರ್ಣಿಸಲಿಕ್ಕೆ ನಮಗೆ ಸಕ್ತಿಸಾಲದು. ನೀನು ಕೆಲವರನ್ನು ಭಕ್ತಿ ಬಲದಿಂದ ಕೆಲವರನ್ನು ಆಶೀರ್ವಾದದಿಂದ ಕೃತಾರ್ಥರಾಗಿ ಮಾಡಿರುತ್ತೀ. ಭಕ್ತರಲ್ಲಿ ಪ್ರಮಾದವಶದಿಂದ ಸೇರಿದ ಅಜ್ಞಾನವನ್ನು ಹೋಗಲಾಡಿಸಿ, ಅವರನ್ನು ನಿರ್ಮಲರಾಗಿ ಮಾಡಬೇಕೆಂದು ಲೀಲಾ ಶರೀರವನ್ನು ಧರಿಸಿ ಸಂಚರಿಸುವಿ. ನಿನ್ನ ಇಚ್ಛೆಯು ಸ್ವತಂತ್ರವಾದದ್ದೂ ನಿನ್ನ ಶಕ್ತಿಯು ಅಗಾಧವಾದದ್ದೂ ಅದೆ." ಎಂದು ಅಲ್ಲಮನನ್ನು ಕೊಂಡಾಡಿದರು.

---

## ೧೧ನೆಯ ಅಧ್ಯಾಯ.







ತು ಅಲ್ಲಮಪ್ರಭುವು ಸರ್ವರಿಂದ ಕೊಂಡಾಡಲ್ಪಟ್ಟವನಾಗಿ ಬಸವೇಶ್ವರನ ಅರಮನೆಯಲ್ಲಿ ರತ್ನಖಚಿತ ಸಿಂಹಾಸನದ ಮೇಲೆ ಮೂರ್ತ ಮಾಡಿದನು. ಬಸವೇಶ್ವರನು ಮೇಲಿಂದಮೇಲೆ ನಮಸ್ಕರಿಸಿ ಅರ್ಘ್ಯ ಪಾದ್ಯ ಪುಷ್ಪ ಮೊದಲಾದವುಗಳಿಂದ ಪ್ರಭುದೇವರನ್ನು ಯಥಾವಿಧಿ ಪೂಜಿಸಲು ಅವಂಗೆ ಪರಮಾನಂದವಾಯಿತು ಬಳಿಕ ವೇದಾರ್ಥಗರ್ಭೀಕೃತವಾದ ಸ್ತುತಿ ವಚನಗಳಿಂದ ಅಲ್ಲಮನನ್ನು ಬಸವೇಶ್ವರನು ಭಕ್ತಿಪುರಸ್ಸರವಾಗಿ ಸ್ತುತಿಸಿ—"ಎಲೈ ಈಶ್ವರ ಮೂರ್ತಿಯೇ, ನನ್ನಲ್ಲಿ ಯುಕ್ತಿಯೂ ಜ್ಞಾನವೂ ಯಾವದೂ ಇಲ್ಲದ್ದರಿಂದ ನಾನು ಆಚರಿಸುವ ಶಿವಭಕ್ತಿಯು ಕುರುಡನ ಕಯ್ಯಕನ್ನಡಿಯಂತೆ

ಯಾಗಿದೆ. ಆದ್ದರಿಂದ ಈ ಶಿವಭಕ್ತಿಮಾರ್ಗದ ಕ್ರಮವನ್ನು ನನಗೆ ಚನ್ನಾಗಿ ತಿಳಿಸಿಕೊಟ್ಟು ನನ್ನನ್ನು ರಕ್ಷಿಸು. ನಿನ್ನ ಕೃಪಾಕಟಾಕ್ಷವು ನನಗೆ ಅಮೃತ ಮಳೆಯಂತೆ ಸುಖಪ್ರದವಾಗುವದು ಇಂತಹ ಕರುಣಾದೃಷ್ಟಿಯಿಂದ ನನ್ನ ಕಡೆಗೆ ನೋಡಿ ಇದು ಭಕ್ತಿ, ಇದು ಕ್ರಿಯಾ, ಇದು ಜ್ಞಾನ, ಹೀಗೆ ಮೂರು ಮಾತುಗಳ ಬಗ್ಗೆ ನನಗೆ ಚನ್ನಾಗಿ ಬೇರೆಬೇರೆ ರೀತಿಯಿಂದ ಉಪದೇಶ ಮಾಡಬೇಕು."

ಅಲ್ಲಮಪ್ರಭು—(ಬಸವೇಶ್ವರನನ್ನು ಸಂತೋಷದಿಂದ ಅಪ್ಪಿಕೊಂಡು) ಎಲೈ ಪ್ರಮಥ ಶ್ರೇಷ್ಠನೆ, ನೀನು ಮಾಡಿದ ಪ್ರಶ್ನೆಯು ವೇದಾಗಮ ಪುರಾಣಗಳ ತಾತ್ಪರ್ಯವಾಗಿ ಉತ್ತಮವುವದೆ. ಶಾಬಾಸ! ಬಸವೇಶ್ವರಾ, ನೀನು ವೇದಾಗಮಗಳ ಹೃದಯದಲ್ಲಿರುವ ಸಾರವನ್ನು ಪ್ರಸಿದ್ಧ ಮಾಡಲಿಕ್ಕೆ ಬಂದ ಕಾರಣಪುರುಷನು. ನೀನು ಸ್ವತಃ ಚಿತ್ಸ್ವರೂಪನೂ ಮೂಲ ಪುರುಷನೂ ಇದ್ದು ಲೀಲೆಯಿಂದ ಈ ಶರೀರವನ್ನು ಧಾರಣ ಮಾಡಿರುವಿ. ನೀನು ಮಾಡಿದ ಪ್ರಶ್ನೆಯು ಲೋಕಹಿತಾರ್ಥವಾಗಿರುತ್ತದೆ; ಯಾಕಂದರೆ, ನೀನು ಸ್ವತಃ ನಿತ್ಯಸುಖ ನಿತ್ಯ ಬೋಧ ಇವುಗಳ ಉಗಮಸ್ಥಾನವಾದ್ದರಿಂದ ನಿನಗೆ ಸರ್ವವೂ ವಿದಿತವಾಗಿದೆ. ಸ್ವರ್ಗ, ಮರ್ತ್ಯ, ಪಾತಾಳ ಇವುಗಳಲ್ಲಿ ನೀನರಿಯದ ವಸ್ತುವು ಯಾವದೂ ಇಲ್ಲ. ಸರಸ್ವತಿಯ ವಿಸ್ತಾರವನ್ನೂ ಸಂಸಾರದ ರೀತಿಯನ್ನೂ ವಿದ್ಯೆಯ ರಹಸ್ಯವನ್ನೂ ಅಂತರ್ಜ್ಞಾನದಿಂದ ನಿಶ್ಚಯ ಮಾಡಿಕೊಂಡಿರುವಿ. ನೀನು ಪ್ರತ್ಯಕ್ಷ ಧರ್ಮಸ್ವರೂಪನಿದ್ದು ವೇದಗಳು ಸಹ ವೃಷಭನೆಂದು ಹೊಗಳಿರುತ್ತವೆ. ನಿನಗೆ ಸರ್ವವು ತಿಳಿದಿದ್ದರೂ ಲೋಕೋಪಕಾರಕ್ಕಾಗಿ ಈ ಪ್ರಶ್ನೆಯನ್ನು ಮಾಡಿರುತ್ತೀ. ಆದ್ದರಿಂದ ಎಲೈ ನನ್ನ ಪ್ರಿಯ ಮಿತ್ರನೆ, ಸೂರ್ಯನಿಗೆ ದೀಪದ ಹಂಗಿಲ್ಲದಿರುವಂತೆ, ಬೆಂಕಿಯ ಹನಿವೆಗೆ ಪಾಕಕ್ರಿಯಾ ವಿಧಿಯು ಇಲ್ಲದಂತೆ ದೈವಪುರುಷನಾದ ನಿನಗೆ ನನ್ನ ಉಪದೇಶದ ಪ್ರಯೋಜನವೇನು! ನೀನು ದಿವ್ಯಜ್ಞಾನದ ಕಣಿಯಾಗಿರುವಿ. ನಿನ್ನ ಭಕ್ತಿಯ ಗುಣದೋಷಗಳನ್ನು ಶೋಧಿಸಿ ತೆಗೆಯುವ ಶಕ್ತಿಯು ನನಗಾದರೂ ಇಲ್ಲ.

ಬಸವೇಶ್ವರ—( ಅತ್ಯಂತ ದೀನಸ್ವರದಿಂದ ) ಹರಹರಾ!! ನಿಗಮಾಗಮಸನ್ನುತನಾದ ನಿನೆತ್ತ! ನಿನ್ನ ಪಾದಭಕ್ತರ ಸೇವಕರಿಗೆ ಸೇವಕನಾದ ನಾನೆತ್ತ! ನಿನ್ನ ಪ್ರಶಂಸೆಗೆ ನಾನು ಸರ್ವಥಾ ಪಾತ್ರನಲ್ಲ. ಬಿತ್ತಿ ಬೆಳೆಯದೆ ಮೊದಲೇ ಮೊಳಕೆಯನ್ನು ಕಿತ್ತುನೋಡುವಂತೆ, ನೀನು ನನಗೆ ಉಪದೇಶ ಮಾಡದ ಮೊದಲೇ ನನ್ನಲ್ಲಿ ಜ್ಞಾನಾರೋಪಣೆ ಮಾಡುವದು ಯುಕ್ತವಲ್ಲ. ನಾನೆತ್ತ! ನಿನ್ನೀ ಸ್ತುತಿಯೆತ್ತ! ನನ್ನ ಮನದಲ್ಲಿದ್ದ ಕತ್ತಲೆಯನ್ನು ಕಳೆದು ಜ್ಞಾನವೆಂಬ ಸೂರ್ಯನಿಂದ ಅದನ್ನು ಪ್ರಕಾಶಗೊಳಿಸು,

ಅಲ್ಲಮ – ( ತತ್ವೋಪದೇಶಕ್ಕೆ ಬಸವೇಶ್ವರನು ಅರ್ಹನಿದ್ದಾನೆಂದು ತಿಳಿದು ಆತನನ್ನು ಕೃಪಾದೃಷ್ಟಿಯಿಂದ ನೋಡಿ) ಬಸವೇಶ್ವರನೆ, ಅಮೃತಕ್ಕಿಂತ ಬೇರೊಂದು ಉತ್ತಮವಾದ ಭೋಗ್ಯವಸ್ತುವಿಲ್ಲದಿರುವಂತೆ, ನಿರಹಂಕಾರಿಯಾದ ನಿನ್ನ ಹೊರತು ಲಿಂಗದ ಮಹಾಸೇವಾನುಭವ ಸುಖಕ್ಕೆ ಯೋಗ್ಯರು ಯಾರೂ ಇಲ್ಲ. ಸಂಸಾರ ಸಮುದ್ರದಲ್ಲಿ ಮುಳುಗಿ ಶೋಕ ಮೋಹ ಮುಂತಾದವುಗಳಿಂದ ವ್ಯಾಕುಲಗೊಂಡು ಅನೇಕ ವೇಳೆ ಹುಟ್ಟಿ ಸಾಯುತ್ತಿರುವ ಪ್ರಾಣಿಗಳು ಹೇರಳವಾಗಿರುವವು. ಎಂಬತ್ತನಾಲ್ಕುಲಕ್ಷ ಜೀವರಾಸಿಗಳ ಉದಯಕ್ಕೆ ಮುಖ್ಯವಾಗಿ ಅವುಗಳ ಪುಣ್ಯ ಪಾಪವೇ ಕಾರಣವಾಗಿದೆ. ಅವುಗಳಲ್ಲಿ ಮನುಷ್ಯ ಜನ್ಮವು ಪ್ರಾಪ್ತವಾದ ಬಳಿಕ ಶರೀರವೂ ಮನಸ್ಸೂ ಸದೃಢವಾಗಿರುವಾಗಲೇ ಕೆಟ್ಟ ಬುದ್ಧಿಯನ್ನು ಬಿಟ್ಟು ಪುಣ್ಯಮಾರ್ಗದಿಂದ ಮತ್ತು ವಿಚಾರದಿಂದ ವರ್ತಿಸಿ, ಅಜ್ಞಾನರೂಪ ನಿದ್ರೆಯಿಂದ ಎಚ್ಚತ್ತು ಈ ಭವಭಾರವನ್ನು ಹ್ಯಾಗಾದರೂ ಮಾಡಿ ನೀಗಬೇಕೆಂದು ಚಿಂತಿಸಿ, ಅದರ ಉಪಾಕ್ಕನುವಾದ ಮನುಷ್ಯನೇ ಕೃತಕೃತ್ಯನು. ಹೀಗೆ ಎಚ್ಚರಿಕೆಯುಂಟಾಗಲು ಅವನು ಈ ಜನ್ಮವನ್ನು ವ್ಯರ್ಥವಾಗಿ ಉಪಯೋಗಿಸಲ್ಪಡತಕ್ಕದ್ದಲ್ಲೆಂದು ತಿಳಿದು, ಅಹಂಕಾರ ಮಮಕಾರಗಳನ್ನು ತೊರೆಯುವನು. ಹಾಲಿದ್ದಾಗ ಹಬ್ಬವನ್ನು ಮಾಡುವಂತೆ, ಗಾಳಿಬಿಟ್ಟಾಗ ತೂರಿಕೊಳ್ಳುವಂತೆ, ಕೈ ಕಾಲು ಕಂಣು ಮೊದಲಾದವುಗಳು ನೆಟ್ಟಗಿರುವಾಗಲೇ ಯಮನ ಭೀತಿಯನ್ನು ನಿವಾರಿಸಿ ( ಮೃತ್ಯುವನ್ನು ಜಯಿಸಿ) ಮೇಲುಗತಿಯನ್ನು ( ಮೋಕ್ಷವನ್ನು ) ಅರಸುವವನೇ ಜಾಣನು. ಹೀಗೆ ಅಹಂಕಾರ ಮಮಕಾರಗಳನ್ನು ದೂರಮಾಡಿ ಸ್ವಧರ್ಮನಿಷ್ಠರಾದ ಸಜ್ಜನರ ಸಂಗತಿಯಿಂದ ಮೋಕ್ಷವನ್ನು ಪಡೆದುಕೊಳ್ಳಬೇಕೆಂದು ಉತ್ಸುಕತೆಯು ಅವನಲ್ಲಿ ಅಂಕುರಿಸಲು, ಗುರುಕಾರುಣ್ಯವನ್ನು ಪಡೆಯಲೆತ್ನಿಸುವನು. ಕಯ್ಯಲ್ಲಿ ದುಡ್ಡು ಮತ್ತು ಅಧಿಕಾರವಿರುವ ಕಾಲದಲ್ಲಿ, ದಾನಧರ್ಮ ಪರೋಪಕಾರ ಸುಖೋಪಭೋಗ ಮುಂತಾದ ಸತ್ಕಾರ್ಯಗಳನ್ನು ಆಚರಿಸಿ ವೇದಾಗಮ ಶಾಸ್ತ್ರಾರ್ಥವನ್ನು ಚನ್ನಾಗಿ ಮನನ ಮಾಡಿಕೊಂಡು ಅದರಂತೆ ನಡೆಯಹತ್ತಿದರೆ ಅವನಿಗೆ ಗುರುಕೃಪೆಯು ಅತಿ ಬೇಗನೆ ದೊರೆಯುವದು. ಮಟ್ಟಮೊದಲು ಅವನು ತನುಮನಧನಗಳಲ್ಲಿರುವ ಮಮಕಾರವನ್ನು ನಾಶಗೊಳಿಸಬೇಕು. ಹೀಗೆ ಗುರುಕಾರುಣ್ಯ ಬಲದಿಂದ ಶರೀರದಲ್ಲಿ ಇಷ್ಟಲಿಂಗ ಸಂಬಂಧವನ್ನು ಮಾಡಿಕೊಂಡು ಗುರುವು ಹೇಳಿದಂತೆ ಅದು ತನ್ನ ಪ್ರಾಣಸ್ವರೂಪವೆಂದು ತಿಳಿದು ಅದನ್ನು ಎಂದೂ ತನ್ನ ದೇಹದಿಂದ ಅಗಲಿಸಬಾರದು. ಹೀಗೆ ಸರ್ವದಾ ಲಿಂಗಧಾರಣ ಮಾಡಿಕೊಂಡಿರುವವನೇ ಮೋಕ್ಷಕ್ಕೆ ಅಧಿಕಾರಿ

ಯಾದ ಮಂಗಳಾತ್ಮಕನೆನಿಸುವನು. * ಹೀಗೆ ಹಸ್ತಗತವಾದ ಇಷ್ಟಲಿಂಗವನ್ನು ಅಂತಜ್ಞಾನದಿಂದ ಮನೋಮಯ ಲಿಂಗವೆಂದು ತಿಳಿದು, ಗುರುಕೃಪೆಯಿಂದ ಪ್ರಾಪ್ತವಾದ ಶ್ರೀ ಮುದ್ರೆಯಿಂದ ತತ್ವಜ್ಞಾನವನ್ನು ಸಂಪಾದಿಸಿ, ಆದರಿಂದ ಅಂತ ರ್ಬಾಹ್ಯದ ಐಕ್ಯತೆಯನ್ನು ಪಡೆದು, ಇಷ್ಟಲಿಂಗ ಪ್ರಾಣಲಿಂಗ ಇವುಗಳು ಏಕರೂ ಪವೆಂದು ತಿಳಿಯುವನು. ಯಾಕಂದರೆ, ಅವನಲ್ಲಿ ಪರಿಪೂರ್ಣ ದೃಷ್ಟಿಯುಂಟಾಗಿ ಅವುಗಳಲ್ಲಿ ಒಂದು ಹೆಚ್ಚು ಒಂದು ಕಡಿಮೆ ಎಂಬ ಭೇದಬುದ್ಧಿಯು ಸಂಪೂರ್ಣ ವಾಗಿ ಅಳಿದು ಹೋಗುವದು. ಗುರುಕಟಾಕ್ಷದಿಂದ ಅಂಗದ ಮೇಲೆ ಲಿಂಗಧಾ ರಣವಾದ ಕೂಡಲೆ ಶರೀರವು ಲಿಂಗಕ್ಕರ್ಪಿಸಲ್ಪಟ್ಟಂತಾಯಿತು. ಯಾವನು ಸ್ಥೂಲತನುವನ್ನು ಇಷ್ಟಲಿಂಗಕ್ಕೆ ಸೂಕ್ಷ್ಮ ಶರೀರವನ್ನು ಪ್ರಾಣಲಿಂಗಕ್ಕೆ ಕಾರಣ ದೇಹವನ್ನು ಭಾವಲಿಂಗಕ್ಕೆ ಅರ್ಪಿಸುವನೋ ಅಂದರೆ--ಯಾವಾತನು ತನ್ನ ಮೂರೂ ಶರೀರಗಳೆಂಬ ವಸ್ತ್ರಗಳಲ್ಲಿ ಇಷ್ಟ ಪ್ರಾಣಭಾವಗಳೆಂಬ ಮೂರೂ ಲಿಂಗಗಳನ್ನು ಧರಿಸಿಕೊಂಡಿರುವನೋ-- ಅವನೇ ಪ್ರತ್ಯಕ್ಷವಾದ ಗುರುವೆಂದು ಭಾವಿಸಬೇಕು. ಅಂಥವನ ಮನಸ್ಸು ಲಿಂಗಸ್ವರೂಪದಲ್ಲಿ ತಲ್ಲೀನವಾಗಿ ಶರೀರದ ವಿಸ್ಮೃತಿಯು ಬೆಳೆದು ಆತ್ಮಜ್ಞಾನವು ಉದಯವಾಗಲು, ಅವನು ಶಿವಾನಂದ ಸಮುದ್ರದಲ್ಲಿ ವಿಹರಿಸುವನು. ಅವನಿಗೆ ಮೋಕ್ಷಪದವು ಬೇಗನೆ ಪ್ರಾಪ್ತವಾಗುವದು.

ಇಷ್ಟಲಿಂಗ ಸಂಬಂಧಿಯಾದವನು ತನ್ನ ಚಿತ್ತಚಾಂಚಲ್ಯ ಪರಿಹಾರಕ್ಕಾಗಿ ಕೆಳಗೆ ಹೇಳಿದಂತೆ ಶಿವಲಿಂಗದ ಮಾನಸ ಪೂಜೆಯನ್ನಾಚರಿಸಬೇಕು. ಅದು ಹೇಗಂದರೆ-- ಸ್ಥಾವರ ಜಂಗಮಾತ್ಮಕವಾದ ಜೀವರಾಶಿಗಳಿಗೆ ಹಿಂಸೆಯು ಘಟಿಸ ದಂತೆ ಅವುಗಳಲ್ಲಿ ಕರುಣಾಶೀಲನಾಗಿರುವದೇ ಶಂಕರನ ಮಾನಸಪೂಜೆಯಲ್ಲಿ ಅಭಿಷೇಕವೆರೆದಂತಾಗುವದು. ಇವರು ನಮ್ಮವರು ಅವರು ಪರಕೀಯರು, ಇವರು ಶತ್ರುಗಳು, ಅವರು ಮಿತ್ರರು ಎಂಬ ಭೇದಬುದ್ಧಿಯನ್ನು ಬಿಟ್ಟು ಮನಸ್ಸಿನಲ್ಲಿ ಸಮತೆ ಯನ್ನೂ ಶಾಂತಿಯನ್ನೂ ಹೊಂದಲು, ಆ ಪೂಜೆಯಲ್ಲಿ ಚಂದನವನ್ನು ಲೇಪಿಸಿದಂತಾಗು

---

* " ಲಿಂಗವ ಪ್ರಾಣಸ್ವರೂಪೆಂ ।
ದಂಗವಿಸಿ ತಾನೋತು ಬಳಿಕಾ ।
ಲಿಂಗವನು ಬ್ಯಾಂಗಿಸಲಾಗದು ಭಕ್ತಿಭಾವಕರೂ ॥
ಅಂಗಸಂಗದ ಲಗಲದಂತಿರೆ ।
ಲಿಂಗಧಾರಣವಾದಡಾತನೆ ।
ಮಂಗಳಾತ್ಮಕನಾತನೈ ಬಸವಂಣ ಕೇಳೆಂದಾ ॥ "

ವದು. ಪವಿತ್ರವಾದ ಶೈವಧರ್ಮದ ಪ್ರಕಾರ ಸತ್ಕಾರ್ಯಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡಬೇಕೆಂಬ ತತ್ವವನ್ನರಿತು ಅವುಗಳಲ್ಲಿ ನಿರ್ಲಿಪ್ತನಾಗಿರುವದೇ ಶಂಕರನಿಗೆ ಅಕ್ಷತೆಯನ್ನು ಅರ್ಪಿಸಿದಂತಾಗುವದು. ಪ್ರಪಂಚದಲ್ಲಿ ಉದರನಿರ್ವಾಹಕ್ಕಾಗಿ ಕೈಕೊಂಡ ವ್ಯವಹಾರಗಳಲ್ಲಿ ಪ್ರಮಾಣಿಕದಿಂದ ವರ್ತಿಸಿದಾಗ್ಯೂ ಒದಗಬಹುದಾದ ಹಲ ಕೆಲವು ಪಾತಕಗಳ ನಿವೃತ್ತಿಗಾಗಿ ಶಿವಲಿಂಗದ ಕಡೆಗೆ ಏಕಚಿತ್ತದಿಂದ ಮನಸ್ಸನ್ನು ಹರಿದು ಬಿಡುವದು ಶಂಕರನಿಗೆ ಉತ್ತಮೋತ್ತಮ ಹೂವುಗಳನ್ನು ಅರ್ಪಿಸಿದಂತಾಗುವದು. ಸ್ಥೂಲ ಸೂಕ್ಷ್ಮ ಕಾರಣವೆಂಬ ಶರೀರತ್ರಯಂಗಳಲ್ಲಿ ಕಾಣಬರುವ ದುರ್ಗುಣಗಳನ್ನು ಜ್ಞಾನಾಗ್ನಿಯಿಂದ ಸುಟ್ಟ ಬಳಿಕ ಅದರಿಂದ ಹೊರಡುವ ಸದ್ವಾಸನೆಯೇ ಶಂಕರನಿಗೆ ಧೂಪಾರ್ಪಣೆ ಮಾಡಿದಂತಾಗುವದು. ಶರೀರದಲ್ಲಿದ್ದ ತಮೋಗುಣಗಳನ್ನು ನಾಶಗೊಳಿಸಿ ಸಾತ್ವಿಕಗುಣಗಳನ್ನು ಅಭಿವೃದ್ಧಿಗೊಳಿಸುವದೇ ಶಿವಲಿಂಗಕ್ಕೆ ದೀಪಾರ್ಪಣೆಮಾಡಿದಂತಾಗುವದು. ಸರ್ವಸುಖ ದಃಖಗಳಲ್ಲಿ ಉದಾಸೀನನಾಗಿರುವದೇ ಶಿವನಿಗೆ ನೈವೇದ್ಯವನ್ನು ತೋರಿಸಿದಂತಾಗುವದು ಸಾತ್ವಿಕ ರಾಜಸ ತಾಮಸವೆಂಬ ಗುಣತ್ರಯಗಳಿಂದ ದೂರವಾಗಿರುವದೇ ಶಿವನಿಗೆ ತಾಂಬೂಲವನ್ನು ಅರ್ಪಿಸಿದಂತಾಗುವದು. ಇಂತಹ ಮಾನಸ ಪೂಜೆಯೊಂದರಿಂದಲೇ ನಮ್ಮನ್ನು ಸುತ್ತಿರುವ ಸಂಸಾರವು ನಾಶವಾಗದು. ಅದು ಇಷ್ಟಲಿಂಗ ಧಾರಣಲಿಂಗ ಪೂಜಾ ಮೊದಲಾದವುಗಳಿಂದ ಸಂಪೂರ್ಣವಾಗಿ ನಾಶ ಹೊಂದುವದು. ಜಗತ್ತಿನಲ್ಲಿ ತೋರುವ ವಸ್ತುಗಳ ರೂಪವನ್ನು ಇಷ್ಟಲಿಂಗಕ್ಕೆ, ಅವುಗಳ ರುಚಿಯನ್ನು ಪ್ರಾಣಲಿಂಗಕ್ಕೆ ತೃಪ್ತಿಯನ್ನು ಭಾವಲಿಂಗಕ್ಕೆ ಅರ್ಪಿಸುವದರಿಂದ ಸುಲಭವಾಗಿ ವಿಷಯಗಳು ನಾಶವಾಗುವವು ವಿಷಯ ವಸ್ತುಗಳ ನಾಶದಿಂದ ಸಂಸಾರವು ನಾಶವಾಗುವದೆಂದು ಸಂದೇಹವಿಲ್ಲದೆ ಹೇಳಬಹುದು. ಹೀಗೆ ನಿತ್ಯವೂ ಯೋಗ್ಯವಾದ ಮುಖ್ಯ ಮುಖ್ಯ ವಸ್ತುಗಳನ್ನು ಲಿಂಗಕ್ಕರ್ಪಿಸುವ ಶಿವಯೋಗಿಯೇ ಸಹಜವಾಗಿ ಮತ್ತು ಸುಲಭವಾಗಿ ಲಿಂಗಾಂಗಸಾಮರಸ್ಯ ಸುಖವನ್ನು ಅನುಭವಿಸುವನು. ಎಲೈ ಬಸವೇಶ್ವರನೆ, ಇನ್ನುಮೇಲೆ ಹೇಳತಕ್ಕದ್ದನ್ನು ನಿಶ್ಚಲಚಿತ್ತದಿಂದ ಕೇಳು. ಯಾವಾತನು ಸರ್ವದಾ ಧರಿಸಲ್ಪಡತಕ್ಕದ್ದಾದ ತನ್ನ ಪ್ರಾಣಸ್ವರೂಪವಾದ ಇಷ್ಟಲಿಂಗವನ್ನು ಶಿವಜ್ಞಾನವೆಂಬ ಶಿವದಾರದಿಂದ ಚನ್ನಾಗಿ ಬಿಗಿದು ಕಟ್ಟಿಕೊಂಡು ಮೋಕ್ಷ ಪದವಿಯಲ್ಲಿ ಜಾಗರೂಕನಾಗಿರುವನೋ, ಅಂತಹ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನನಾದ ವೀರಶೈವನೇ ಧನ್ಯನು. ಅವನೇ ಕೃತಾರ್ಥನು. ಸ್ಥೂಲದೇಹ ಸಂಬಂಧವುಳ್ಳ ಇಷ್ಟಲಿಂಗದಲ್ಲಿ ನೋಟವೂ, ಸೂಕ್ಷ್ಮಶರೀರ ಸಂಬಂಧವುಳ್ಳ ಪ್ರಾಣಲಿಂಗದಲ್ಲಿ ಮನಸ್ಸೂ, ಕಾರಣತನುವಿನ ಸಂಬಂಧವನ್ನು ಪಡೆದ ಭಾವಲಿಂಗದಲ್ಲಿ ಭಾವವೂ, ಸ್ಥಿರವಾಗಿ ನೆಲಿ

ಸುವದರಿಂದ ಲಿಂಗಾನುಸಂಧಾನವು ತಡೆಯಿಲ್ಲದೆ ನಡೆಯುವದು. ವಿಶೇಷವೇನಂ ದರೆ-ಇಷ್ಟಲಿಂಗದಲ್ಲಿ ನೋಟವು ಸಂಪೂರ್ಣವಾಗಿ ನಿಲುಕಡೆಯನ್ನು ಹೊಂದಿದ ರೇನೇ ಉಳಿದೆರಡು ಲಿಂಗಗಳಲ್ಲಿ-ಅಂದರೆ-ಪ್ರಾಣಲಿಂಗ ಭಾವಲಿಂಗಗಳಲ್ಲಿ ಮ ನಸ್ಸೂ ಭಾವವೂ ಸ್ಥಿರವಾಗಿ ನಿಲ್ಲುವವು; ಮತ್ತು ಪ್ರಾಣಲಿಂಗ ಭಾವಲಿಂಗಗಳ ಪೂಜೆಯು ಸಾಂಗವಾಗಿ ನಡೆಯುವದು. ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣ ಲಿಂಗಿ ಶರಣ ಐಕ್ಯವೆಂಬದಾಗಿ ಷಟ್‍ಸ್ಥಲಗಳು ಹೇಳಲ್ಪಟ್ಟವೆ ಸ್ಥೂಲತನುವಿ ನೊಡನೆ ಸಂಬಂಧವುಳ್ಳ ಇಷ್ಟಲಿಂಗದಲ್ಲಿ ಶ್ರದ್ಧಾಭಕ್ತಿಯುಳ್ಳಾತನೇ ಭಕ್ತನೆಂದೂ, ಅವನೇ ನಿಷ್ಠಾಭಕ್ತಿಯನ್ನು ತೋರಿಸಲು ಮಾಹೇಶ್ವರನೆಂದೂ ಹೇಳಿದೆ. ಇಂತ ಹ ಮಾಹೇಶ್ವರನು ಸೂಕ್ಷ್ಮದೇಹದೊಡನೆ ಸಂಬಂಧವಾದ ಪ್ರಾಣಲಿಂಗಾರಾಧನೆ ಯಲ್ಲಿ ಅವಧಾನ ಭಕ್ತಿಯುಕ್ತನಾಗಿದ್ದರೆ ಪ್ರಸಾದಿಯೆಂದೂ, ಅನುಭವಭಕ್ತಿಸಹಿತ ನಾಗಿದ್ದರೆ ಪ್ರಾಣಲಿಂಗಿ ಎಂದೂ ಕರೆಯಲ್ಪಡುವನು. ಈ ಪ್ರಾಣಲಿಂಗಿಯು ಕಾರಣ ಶರೀರದೊಡನೆ ಸಂಬಂಧವುಳ್ಳ ಭಾವಲಿಂಗದ ಅರ್ಚನೆಯಲ್ಲಿ ಆನಂದ ಭಕ್ತಿಯನ್ನು ತೋರಿಸಲು ಶರಣನೆಂದೂ ಸಮರಸ ಭಕ್ತಿಯನ್ನು ವ್ಯಕ್ತಪಡಿ ಸಲು ಐಕ್ಯನೆಂದೂ ನಿರೂಪಿಸಲ್ಪಡುವನು. ಹೀಗೆ ತನುತ್ರಯಗಳೆಂಬ ವಸ್ತ್ರಗಳಲ್ಲಿ ಲಿಂಗತ್ರಯಗಳನ್ನು ಶ್ರದ್ಧಾಭಕ್ತಿ ಮೊದಲಾದ ಆರು ಗಂಟುಗಳಿಂದ ಸ್ಥಿರವಾಗಿ ಮಾಡಿದ ಭಕ್ತಾದಿ ಐಕ್ಯಾಂತವಾದ ಷಟ್ ಸ್ಥಲದ ವಿಚಾರದಿಂದ ಯಾವಾತನು ಅವ್ಯಯ ಸ್ವರೂಪನಾದ ಭಕ್ತ್ಯೈಕಗಮ್ಯನಾದ ಶಿವನನ್ನು ಪೂಜಾದಿ ಸತ್ಕ್ರಿಯೆಗಳಿಂದ ಆರಾಧಿಸುವನೋ ಅವನೇ ಶಿವಯೋಗಿ ಶ್ರೇಷ್ಠನೂ ಜಗದ್ಗುರುವೂ ಎನಿಸುವನು.

ವೀರಶೈವರು ಇಷ್ಟಲಿಂಗವೇ ತಮ್ಮ ಪ್ರಾಣಸ್ವರೂಪವೆಂದೂ ಶಾಸ್ತ್ರದ ತಾತ್ಪರ್ಯವಾದರೂ ಹೀಗೆಯೇ ಇರುವದೆಂದೂ ತಿಳಿದು, ಪಂಚಸೂತ್ರಘಟಿತವಾದ ಇಷ್ಟಲಿಂಗವನ್ನು ತಮ್ಮ ಅಂಗದಿಂದ ಎಂದೂ ದೂರಮಾಡಬಾರದು. * ಬಸ

---

* "ನಲಿಂಗಮುತ್ಸೃಜೇತ್ಕ್ವಾಪಿ ಪ್ರಾಣೈಃಕಂಠಗತೈರಪಿ |
ಯಲ್ಲಿಂಗಮಾದಿತೋಲಬ್ಧಂ ಯದ್ಧತ್ತಂಗುರುಣಾ ತತಃ |
ಯಾವಜ್ಜೀವಂತದೇವಸ್ಯಾದ ನ್ಯಥಾಯಾತಿರೌರವಂ |
ಯಲ್ಲಿಂಗಂ ಗುರುಣಾ ದತ್ತಂ ಪ್ರಾಣಲಿಂಗಂ ತದೇವಹಿ |
ಮಧ್ಯೇನಷ್ಟೇ ಪ್ರಮಾದೇನ ದೇಹಂತ್ಯಕ್ತ್ವಾಶಿವಂವ್ರಜೇತ್ ||
ಇಷ್ಟಲಿಂಗಮಿದಂ ಸಾಕ್ಷಾತ್ಸರ್ವಾರಿಷ್ಟ ನಿವಾರಕಂ |
ಧಾರಯಸ್ಸಸದಾದೇಹೇ ನಷ್ಟೇ ಪ್ರಾಣಾನ್ಪರಿತ್ಯಜ ||—

ಮೇಶ್ವರನೆ, ಲಿಂಗಪೂಜಾಸಮಯದಲ್ಲಿ ಪದಾರ್ಥ ಸಮುದಾಯಗಳ ರೂಪವನ್ನು ಇಷ್ಟಲಿಂಗಕ್ಕೂ ರುಚಿಯನ್ನು ಪ್ರಾಣಲಿಂಗಕ್ಕೂ ತೃಪ್ತಿಯನ್ನು ಭಾವಲಿಂಗಕ್ಕೂ ಸಮರ್ಪಿಸಬೇಕು. ಇಷ್ಟಲಿಂಗವಿಲ್ಲದಲೆ ಪ್ರಸಾದವು ಘಟಸದು. ಇಷ್ಟಲಿಂಗವಿಲ್ಲದಲೆ ಪ್ರಾಣಲಿಂಗವು ದೊರಕದು. ಇಷ್ಟ ಗರುವಿಗೆ ತನುವನ್ನೂ ಇಷ್ಟಲಿಂಗಕ್ಕೆ ಮನವನ್ನೂ ಇಷ್ಟಜಂಗಮಕ್ಕೆ ಧನವನ್ನೂ ಸಲ್ಲಿಸಲು ಕಲಿತವನಿಗೆ ಗುರುಲಿಂಗ ಜಂಗಮ ಈ ಮೂರೂ ತನ್ನೊಳಗೆ ಗೋಚರವಾಗುವವು. ದಿನಂಪ್ರತಿ ಗುರುಲಿಂಗ ಜಂಗಮ ಪಾದೋದಕ ಪ್ರಸಾದ ಇವುಗಳ ಸೇವನೆಯಿಂದ ಶಿವಭಕ್ತನು ನಿರ್ಮಲನಾಗಿ ಪಾಪರಹಿತನಾಗುತ್ತಾನೆ. ವಿಮಲವಾದ ಶಿವಭಕ್ತಿಸುಖಾನುಭವಕ್ಕೆ ಆತನು ಅಧಿಕಾರಿಯಾಗಿ ಬ್ರಹ್ಮವಿಷ್ಣ್ವಾದಿ ದೇವತೆಗಳಿಗೂ ದುಸ್ಸಾಧ್ಯವಾದ ಶಿವೈಕ್ಯ ಸುಖಕ್ಕೆ ಭಾಗಿಯಾಗುವನು. ಧೀರನು ಸಮಸ್ತ ಸತ್ಕ್ರಿಯೆಗಳನ್ನು ಇಷ್ಟಲಿಂಗಕ್ಕರ್ಪಿಸಬೇಕು. ಕಪಟ, ಆಡಂಬರ, ಅಹಂಕಾರ, ಮಮತೆ, ಗರ್ವ ಮುಂತಾದ ದುರ್ಗುಣಗಳಿಂದ ದೂರನಾಗಿರಬೇಕು. ಬಸವೇಶ್ವರಾ—ಯಾವನು ತಾನು ಜ್ಞಾನಿಯಾದೆನೆಂದು ಭಾವಿಸಿ ಇಷ್ಟಲಿಂಗಾರ್ಚನೆಯನ್ನು ಬಿಟ್ಟು ಬರೀ ಪ್ರಾಣಲಿಂಗ ಧ್ಯಾನವನ್ನು ಮಾಡತೊಡಗುವನೋ ಅವನ ಸ್ಥಿತಿಯು ಸುಡದೆ ಇದ್ದ ಮಣ್ಣಿನ ಗಡಿಗೆಯಲ್ಲಿ ತುಂಬಿದ ನೀರಿನಂತೆ ಆಗುವದು. ಅವವಲ್ಲಿ ಪ್ರಾಣಲಿಂಗ ಧ್ಯಾನವಾ

---

## (ಪಾರಮೇಶ್ವರಾಗಮ)

"ದೀಕ್ಷಾಮುಖೇನ ಗುರುಣಾ ಬದ್ಧಂಲಿಂಗಂ ಕುಲೇಶ್ವರಿ।
ಯದಿಕ್ಷಣ ಮಲಿಂಗೀ ಸ್ಯಾದ್ರೌರವಂ ನರಕಂ ವ್ರಜೇತ್॥

ಇವುಗಳ ತಾತ್ಪರ್ಯ—ಪ್ರಾಣಹೋಗುವ ಪ್ರಸಂಗದಲ್ಲಿಯೂ ಕೂಡ ಗುರು ಕೊಟ್ಟ ಇಷ್ಟಲಿಂಗವನ್ನು ಬಿಡಕೂಡದು. ಜೀವಿಸಿರುವತನಕ ಅದನ್ನು ಧರಿಸಲೇ ಬೇಕು. ಇಲ್ಲದಿದ್ದರೆ ಅದನ್ನು ಬಿಟ್ಟುಕೊಟ್ಟವನಿಗೆ ರೌರವನರಕವೆಂದು ಹೇಳಿದೆ. ಗರುಕೊಟ್ಟ ಇಷ್ಟಲಿಂಗವೇ ಪ್ರಾಣಲಿಂಗವಲ್ಲದೆ ಪ್ರಾಣಲಿಂಗವೆಂಬುವದು ಬೇರೆ ಇಲ್ಲ. ನಮ್ಮ ದುರ್ಲಕ್ಷ್ಯದಿಂದ ಇಷ್ಟಲಿಂಗವು ಕಳೆದು ಹೋದಲ್ಲಿ ನಾವು ಪ್ರಾಣವನ್ನು ತ್ಯಜಿಸಿ ಶಿವಾಧೀನರಾಗಬೇಕು. ಸರ್ವಾರಿಷ್ಟವನ್ನು ದೂರ ಮಾಡುವಂಥ ಈ ಇಷ್ಟಲಿಂಗವನ್ನು ದೇಹದಲ್ಲಿ ಸರ್ವದಾ ಧರಿಸಬೇಕು. ಅದು ನಷ್ಟವಾದಲ್ಲಿ ಪ್ರಾಣವನ್ನು ಬಿಡಬೇಕು. ಈ ಗುರು ಕೊಟ್ಟ ಇಷ್ಟಲಿಂಗವು ನಮ್ಮ ದೇಹದಿಂದ ಕ್ಷಣಮಾತ್ರವಗಲಿದಲ್ಲಿ ನಮಗೆ ರೌರವ ನರಕ ಸಂಭವಿಸುವಾಗ ಜ್ಞಾನಿಯಾದನೆಂದು ಅದನ್ನು ಚಲ್ಲಿಕೊಟ್ಟವನಿಗೆ ಎಂಥ ಕಠಿಣ ಶಿಕ್ಷೆಯುಂಟಾಗಬಹುದೆಂಬುದನ್ನು ವಾಚಕರು ಊಹಿಸಬಹುದು.

ಗದೆ ಬಾಯಿಂದ ಜಪದಂತೆ ಸುಮ್ಮನೆ ಬಡಬಡಿಸುತ್ತ ಕೂಡ್ರುವನು. ಅದರಿಂದ ಏನೂ ಪ್ರಯೋಜನವಾಗದೆ ಅವನು ನಿಜವಾಗಿ ಅಂತ್ಯದಲ್ಲಿ ನಾಶಹೊಂದುವನು ಭೂವಾಶನು ಉತ್ತಮ ಪ್ರಾಣಲಿಂಗಾನುಸಂಧಾನಿಯಾಗಬೇಕೆಂದೂ ಶಿವಜ್ಞಾನಾ ನಂದ ಸಮುದ್ರದಲ್ಲಿ ಪರಿಪೂರ್ಣವಾಗಿ ಕ್ರೀಡಿಸಬೇಕೆಂಬೂ ಇಚ್ಛಿಸುವನೋ ಅಂಥ ಜ್ಞಾನನು ಇಷ್ಟಲಿಂಗ ಪೂಜೆಯಲ್ಲಿ ನಿರತನಾಗಿರಬೇಕು ಇಷ್ಟಲಿಂಗಪೂಜೆ ಎಂಬುದು ಸರ್ವ ಮಂಗಲ ಕೃತ್ಯಗಳಲ್ಲಿ ಮುಖ್ಯವಾಗಿದೆ. ಆದ್ದರಿಂದ ಕಯ್ಯೊಳಗಿನ ಇಷ್ಟ ಲಿಂಗ ಪೂಜೆಯನ್ನು ಅತಿ ನಿಶ್ಚಲಭಕ್ತಿಯಿಂದ ಸರ್ವದಾ ಆಚರಿಸಬೇಕು ಲಿಂಗಾಂಗ ಸಾಮರಸ್ಯ ಸುಖ ಪ್ರಾಪ್ತಿಗಾಗಿ ಸ್ವಧರ್ಮ ಸಂಪನ್ನರಾದ ಉತ್ತಮೋ ತ್ತಮ ಶಿವಶರಣರ ಕಥೆಗಳನ್ನು ಲಾಲಿಸುತ್ತಿರಬೇಕು. ಶಿವಭಕ್ತಿಯ ರಹಸ್ಯವನ್ನು ಗೊತ್ತುಮಾಡಿಕೊಳ್ಳುವದಕ್ಕಾಗಿ ಸದ್ಗುರುವನ್ನು ಆಶ್ರಯಿಸಬೇಕು. ಶಿವಭಕ್ತರ ಸೇವೆಯನ್ನು ಮಾಡಬೇಕು. ಭಕ್ತಿಭಾವದಿಂದ ಅವರ ಶೇಷವನ್ನು ಸೇವಿಸಬೇಕು ಇವುಗಳ ಬಗ್ಗೆ ಭಕ್ತನು ಸರ್ವದಾ ಚಿಂತಾಪರನಾಗಿರಬೇಕು. ಲಿಂಗಧಾರಿಗಳ ಸಂಗತಿಯನ್ನು ಮಾಡದ, ಆ ಶಿವಲಿಂಗಯುತರಾದ ಭಕ್ತರ ಚರಿತ್ರೆಗಳನ್ನು ಕೇಳದ ಶೇಷಾನ್ನಕ್ಕೆ ಆತುರಪಡದ ಅವರಲ್ಲಿ ವಿಶ್ವಾಸ ಪ್ರೀತಿ ಮುಂತಾದವುಗಳನ್ನು ಮಾಡದ, ಅವರ ದಾಸೋಹಿಯಾಗದ, ಸಂಸಾರ ವಿಕಾರವುಳ್ಳವನಿಗೆ ಶಿವಭಕ್ತಿಯು ಲಭಿಸುವದೇ? ಎಂದೂ ಇಲ್ಲ * ದಿನಾಲು ಯಾರಿಗೆ ಯೋಗ್ಯರಾದ ಜಂಗ ಮರ ಪಾದಪೂಜೆ, ಪಾದೋದಕ ಪ್ರಸಾದಗಳು ಲಭಿಸುವದಿಲ್ಲ. ಅವರು ಪರಮ ಭಕ್ತರಲ್ಲ; ಸಂಸಾರಪಾಶ ವಿಮೋಚನೆಯು ಅವರಿಗೆ ಶೀಘ್ರದಲ್ಲಿ ಆಗುವದಿಲ್ಲ. ಪಾದೋದಕ ಪ್ರಸಾದಗಳಲ್ಲಿ ವಿಶ್ವಾಸವಿಲ್ಲದ ಮತ್ತು ನಿಷೇಧಿಸಲ್ಪಟ್ಟ ಪದಾರ್ಥಗಳಲ್ಲಿ ಕೆಲವನ್ನು ಮಾತ್ರ ವರ್ಜಿಸಿ ಉಳಿದವುಗಳನ್ನು ಉಪಯೋಗಿಸುವ ಜನರು ಡಾಂಭಿಕ ಭಕ್ತರೆನಿಸುವರು. ಶಿವನಲ್ಲಿ ದೃಢವಾದ ಭಕ್ತಿಯು ಅವರಲ್ಲಿ ಎಂದೂ ನೆಲೆಗೊಳ್ಳದು. ಲಿಂಗಾರ್ಚನೆಯಲ್ಲಿ ತತ್ಪರರು, ಪ್ರಮಾಣಿಕರು, ಒಳಗೂ ಹೊರಗೂ ಶುಚಿಯುಳ್ಳವರು, ಶಾಂತಿದಾಂತಿಯುಕ್ತರು, ಅಹಿಂಸಾಪರರು, ಅರಿಷಡ್ವರ್ಗವಿವ ಹಿತರು, ಈ ಸದ್ಗುಣಸಂಪನ್ನರೇ ಶೀಲವಂತರು, ಜನನಮರಣಾತ್ಮಕ ಕರ್ಮರೂಪ ವಾದ ಅರಣ್ಯದಲ್ಲಿ ತಿರುಗುವದನ್ನು ಬಿಡದೆ, ಮಾಯೆಯನ್ನು ಗೆಲ್ಲದೆ ಇರುವವರೆ

* " ಶಿವಯುತರ ಸಂಗವನು ಮಾಡದ । ಶಿವಯುತರ ಸಂಗತಿಯ ಕೇಳದ । ಶಿವಯುತರ ಸವಿದೊಕ್ಕುಮಿಕ್ಕುದು ಹಾರೈಕೊಂಡಿರದ ॥ ಶಿವಯುತರನೆರೆ ನಂ ಬಿನಚ್ಚದ । ಶಿವಯುತರ ದಾಸೋಹಿಯಾಗದ । ಭವವಿಕಾರಿಗೆ ಭಕ್ತಿಯುಹು ದೇ ಬಸವ ಕೇಳೆಂದಾ ॥

ಲ್ಲರು, ಶಿವತತ್ವಸುಖೋಪಭೋಗವನ್ನು (ಲಿಂಗಾಂಗ ಸಾಮರಸ್ಯಸುಖವನ್ನು) ಪಡೆಯಲು ಸಮರ್ಥರಾಗುವದಿಲ್ಲ. ಹೊಟ್ಟೆಹೊರುವದಕ್ಕಾಗಿಯೂ, ಇಲ್ಲದ ಪ್ರತಿಷ್ಠೆಯನ್ನು ಹೊಂದುವದಕ್ಕಾಗಿಯೂ, ವೃಥಾವೇಷಧಾರಣ ಮಾಡುವವರಲ್ಲಿ ದೃಢವಾದ ಶಿವಭಕ್ತಿಯು ಉತ್ಪನ್ನವಾಗದು. ತಾವೇ ದೊಡ್ಡವರೆಂದು ಉಬ್ಬಿಕೊಂಡು ಜೀವಿಸುವರು. ಬಾಯಿಂದ ಬ್ರಹ್ಮಜ್ಞಾನವನ್ನು ಹೇಳಿದಾಗ್ಗ್ಗ್ಯೂ ಒಳಗೆ ಅತ್ಯಂತ ದುರಾಗ್ರಹದಿಂದ ಕೂಡಿರುವರು. ಈ ತರದ ಜನರು ಶಿವಕೃಪೆಗೆ ಎಂದೂ ಪಾತ್ರರಾಗರು. ಇಷ್ಟಲಿಂಪ ಭಜನೆಯಲ್ಲಿ ಆಸಕ್ತರಾದವರಿಗೆ ಮಾತ್ರ ಭಕ್ತಿಯೂ ಶುದ್ಧಿಯೂ ಉದಯಿಸಿ, ಚಿತ್ಸ್ವರೂಪ ಪ್ರಾಣಲಿಂಗದ ಸ್ಫುರಣೆಯು ಸಹಜವಾಗಿ ಘಟಿಸುವದು. ಯಾಕಂದರೆ ವೀರನು ಪೂರ್ವಭೂಮಿಯಲ್ಲಿ ಜಯಶೀಲನಾದರೆ, ಮುಂದೆ ಆತನಿಗೆ ಸರ್ವವೂ ಕೈಸೇರುವವು. ಇಷ್ಟಲಿಂಗಪೂಜೆಯೆಂಬುವದು ಮಹಲಿಂಗರೂಪನಿಧಿಯನ್ನು ತೋರಿಸುವ ಅಂಜನವಾಗಿದೆ"

ಬಸವೇಶ್ವರ—(ನಮ್ರಭಾವದಿಂದ) ಎಲೈ ಗುರುವೆ, ಸರ್ವದಾ ಕ್ರಿಯೆಯಲ್ಲಿ ಮಗ್ನನಾದ ಮನುಷ್ಯನಿಗೆ ಜ್ಞಾನ ಪ್ರಾಪ್ತಿಯಾಗುವ ಬಗೆ ಹೇಗೆ?

ಅಲ್ಲಮ—(ಆತನನ್ನು ಕೃಪಾದೃಷ್ಟಿಯಿಂದ ನೋಡಿ) ಬಸವೇಶ್ವರನೆ, ನಿನಗೆ ಭಕ್ತಿಮಾರ್ಗದ ರಹಸ್ಯವು ಚನ್ನಾಗಿ ಗೊತ್ತಾಗಲಿಲ್ಲ. ಕ್ರಿಯೆಗಳ ಫಲವೆ ಪಾಪರಹಿತವಾದ ಭಕ್ತಿಯು; ಆ ನಿರ್ಮಲವಾದ ಶಿವಭಕ್ತಿಯಿಂದ ಶಿವಜ್ಞಾನವು ಉದಯಿಸುವದು. ಶಿವಜ್ಞಾನವುಂಟಾದವರೂ ಜ್ಞಾನಿಯಾದನು ಲಿಂಗಪೂಜಾದಿ ಸತ್ಕ್ರಿಯೆಗಳನ್ನು ಆಚರಿಸದಿದ್ದರೆ ಆತನಿಗೆ ಸಜ್ಜನರು ಮಹತ್ವ ಕೊಡುವದಿಲ್ಲ. * [ಜ್ಞಾತ್ವಾಪ್ಯನುಷ್ಠಾನವಿವರ್ಜಿತಶ್ಚೇನ್ನಸಾಧವಸ್ತಂ ಬಹುಮಾನಯಂತಿ] ಆದ್ದರಿಂದ ಶಿವಭಕ್ತರು ಆಲಸ್ಯವನ್ನು ತೊರೆದು ಲಿಂಗಾಪೂಜಾದಿ ಸತ್ಕ್ರಿಯೆಗಳಿಂದ ಶಿವನನ್ನು ಆರಾಧಿಸಬೇಕು.

---

* ಲಿಂಗಪೂಜೆ ಲಿಂಗಧ್ಯಾನ ಮೊದಲಾದವುಗಳು ಯಜ್ಞಾದಿ ಕರ್ಮಗಳಂತೆ ಭವಹೇತುಕಗಳಾಗುವದಿಲ್ಲ. ಭಕ್ತಿಯು ಜ್ಞಾನದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಯಾಕಂದರೆ, ಶಿವಭಕ್ತಿ ಶಿವಾಚಾರಕ್ರಿಯೆಗಳು ಜ್ಞಾನಕ್ಕೆ ಪ್ರತಿಬಂಧಕಗಳಾಗುವದಿಲ್ಲ. ವಿಷಯಾಕಾರವೃತ್ತಿಯಲ್ಲಿ ಸಂಚರಿಸತಕ್ಕ ಇಂದ್ರಿಯಗಳನ್ನು ಲಿಂಗಾಕಾರವೃತ್ತಿಯಲ್ಲಿ ಸ್ಥಿರಗೊಳಿಸಲುಪಕ್ರಮಿಸುವದೇ ಇಷ್ಟಲಿಂಗಪೂಜೆಯಾದ್ದರಿಂದ, ಯಜ್ಞಾದಿ ಕರ್ಮಗಳಂತೆ ಶಿವಪೂಜೆಯು ಜಡವಾದ ಕಾರ್ಯವಲ್ಲ. ಅದು ಜ್ಞಾನಾಂಗಭೂತವಾದ ಕ್ರಿಯೆಯೆನಿಸುವದು. ಜ್ಞಾನಿಯು ಕೂಡ ಇದನ್ನು ಮರಣಾವಧಿ ನಡಿಸಲೇ ಬೇಕು.

ಬಸವೇಶ್ವರ— ಎಲೈ ಪರಮಾತ್ಮನೆ, ಇಷ್ಟಲಿಂಗ ಪೂಜೆಯಿಂದಲೇ ಮನಸ್ಸಿನಲ್ಲಿ ಶಿವಭಕ್ತಿಯು ಮರ್ಮವು ತಿಳಿಯುವದಾದರೆ, ಮನುಷ್ಯನು ಶಿವಜ್ಞಾನದಿಂದ ಸ್ವತಃ ಶಿವನು ಹೇಗೆ ಆಗುವನು.?

ಅಲ್ಲಮ— (ಲೋಕದ ಜನರಲ್ಲಿ ಬಹುತರವಾಗಿ ತಲೆದೋರುವ ಸಂಶಯವನ್ನೇ ತಾನು ಪ್ರಶ್ನರೂಪದಿಂದ ಲೋಕಹಿತಾರ್ಥವಾಗಿ ಕೇಳಿದನೆಂದು ಭಾವಿಸಿ ಮುಗುಳ್ನಗೆಯಿಂದ) ಬಸವೇಶ್ವರನೆ, ನೀನು ಮಾಡಿದ ಪ್ರಶ್ನೆಯು ಮಹತ್ವವಾದದ್ದಿದೆ, ಅದರ ಸಮಾಧಾನವನ್ನು ಚಿತ್ತವಿಟ್ಟು ಕೇಳು. ಇಷ್ಟಲಿಂಗಪೂಜೆಯಲ್ಲಿ ಪರಿಪೂರ್ಣರಲ್ಲದವರಿಗೆ ಇಂಥಹ ಸಂದೇಹಗಳು ಪದೆಪದೆ ತೋರುವವು. ಸರ್ವದಾ ಲಿಂಗಪೂಜಾಸಕ್ತರಲ್ಲಿ ಅದು ಗೋಚರಿಸದು. ಇದಕ್ಕೊಂದು ಬಳಿಕೆಯೊಳಗಿನ ದೃಷ್ಟಾಂತವನ್ನು ಕೊಟ್ಟು ನಿನ್ನ ಸಂಶಯಗಳನ್ನು ದೂರ ಮಾಡುವೆನು. ಹೂವಿನ ಸುಗಂಧವು ಹೇಗಿರುವದೆಂಬದನ್ನು ಬಾಯಿಂದ ಹೇಳಲಾಗುವದಿಲ್ಲ. ಅದರ ಅನುಭವವಾಗಬೇಕಾದರೆ ಗುಂಗೀಹುಳವಾದರೆ ಮಾತ್ರ ಗೊತ್ತಾಗುವದು, ಅದರಂತೆ ಭಕ್ತಿರಸಾನುಭವವನ್ನು ಭಕ್ತನಾಗಿಯೇ ನಿಶ್ಚಯಿಸಿಕೊಳ್ಳಬೇಕು. ಉಳಿದವರಿಗೆ ಅದು ಗೋಚರವಾಗದು. ಆದಂಂದ ಇಷ್ಟಲಿಂಗವನ್ನು ನಿನ್ನಂಗದಿಂದ ಅಗಲಿಸದೆ, ಅದರ ಭಜನೆಯಲ್ಲಿ ಯಥಾವಿಧಿ ತತ್ಪರನಾದರೆ, ನಿನಗೆ ಭಕ್ತಿಯ ರಹಸ್ಯವು ಗೊತ್ತಾಗಿ ಅದು ನಿನ್ನಲ್ಲಿ ಸ್ಥಿರವಾದ ಕೂಡಲೆ ಶಿವಜ್ಞಾನವು ಸಹಜವಾಗಿ ಉತ್ಪನ್ನವಾಗಿ ನೀನೇ ಶಿವನೆಂಬ ಸಾಕ್ಷಾತ್ಕಾರವೂ ಸ್ಫುಟವಾಗುವದು. ಇದೇ ಶಿವತತ್ವಾನುಭವದ ಮುಖ್ಯ ಮಾರ್ಗವು. ಬಸವೇಶ್ವರನೆ, ಶಿವನ ಪ್ರತ್ಯಕ್ಷ ದರ್ಶನವುಂಟಾಗುವದು ಮೂರು ಲೋಕಗಳಲ್ಲಿ ಸುಲಭ ಕಾರ್ಯವಲ್ಲ. ಅದರಿಂದ ಇಷ್ಟಲಿಂಗಧಾರಣ ಭಜನಾದಿ ಕ್ರಿಯೆಗಳು ವಿಧಿವಾಕ್ಯಗಳೆಂದು ನಂಬು. ಅದರಿಂದಲೇ ಶಿವತತ್ವಾನುಭವವುಂಟಾಗುವದು.

ಬಸವೇಶ್ವರ— ಸ್ವಾಮಿ, ಸಹಜ ಲಿಂಗೈಕ್ಯವಾಗುವ ರೀತಿಯನ್ನುಪದೇಶಿಸಿ, ನನ್ನನ್ನು ಕೃತಾರ್ಥನಾಗಿ ಮಾಡು.

ಅಲ್ಲಮ— ಬಸವೇಶ್ವರನೆ, ನಿಜಲಿಂಗೈಕ್ಯ ಪದವಿಯನ್ನು ಹೊಂದಲಿಕ್ಕೆ ನೀನೇ ಪಾತ್ರನು. ಮಹಾತ್ಮನಾದ ನಿನಗೆ ಸಮಾನರು ಮೂರೂ ಲೋಕಗಳಲ್ಲಿ ಯಾರೂ ಇಲ್ಲ. ಶಶಿಕಲೆಯನ್ನು ಮಸ್ತಕದಲ್ಲಿ ಧರಿಸಲು ಶಿವನೊಬ್ಬನೇ ಸಮರ್ಥನಿರುವಂತೆ, ನೀನೊಬ್ಬನೇ ಲಿಂಗೈಕ್ಯಾನುಭವರೂಪ ಮೋಕ್ಷವೆಂಬ ಅಮೃತವನ್ನು ಪಾನ ಮಾಡಲಿಕ್ಕೆ ಯೋಗ್ಯನಿರುವಿ. ನಿನ್ನಂಥ ಯೋಗಿಗಳು ಜಗತ್ತಿನಲ್ಲಿ ಯಾರೂ ಇಲ್ಲ. ಬಸವನೆಂಬ ನಾಮವು ಬಲಿಷ್ಠತನ, ಸುಜ್ಞಾನತ್ವ, ವಿತರಣೆ (ದಾನಶೂರತ್ವ)

ಮುಂತಾದ ಸದ್ಗುಣಗಳ ಸೂಚಕವಾಗಿದೆ. ನಿನ್ನ ನಾಮ ಸಂಕೀರ್ತನೆಯಿಂದ ಶಿವನ ಉತ್ತಮೋತ್ತಮ ಗುಣಗಳನ್ನು ಸ್ತುತಿಸಿದಂತಾಗುವದು. ನಿನ್ನ ನಾಮವೆಂಬ ಮಂತ್ರವು ಸಕಲಸಿದ್ಧಿಪ್ರದವಾಗಿದೆ. ನಿನ್ನ ಮೂರ್ತಿ ಧ್ಯಾನಮಾಡಿದರೆ ಶಿವಭಕ್ತಿಯನ್ನಾಚರಿಸಿದಂತಾಗುವದು. ಆದರಿಂದ ನಿನ್ನ ಭಕ್ತರು ಭವಸಮುದ್ರವನ್ನು ದಾಂಟ ಶಿವಸಾಯುಜ್ಯವನ್ನು ಹೊಂದುವರು ಯಾವಾಗೆ ಶಿವನು ಭೂಮಿಯಲ್ಲಿ ಅವತರಿಸಲು ಚಿಂತಿಸುವನೋ, ಆಗ್ಗೆ ನಿನ್ನನ್ನೂ ಲೋಕೋದ್ಧಾರಕ್ಕಾಗಿ ಭೂಮಿಯಮೇಲೆ ಕಳಿಸುವನು. ಬಸವಾಕ್ಷರಗಳು ಅಷ್ಟವಸುಗಳ ಸರ್ವ ಸೌಂದರ್ಯ ರಾಶಿಯ ದರ್ಶಕಗಳಾಗಿವೆ. ಆದ್ದರಿಂದ ಬಸವೇಶ್ವರನೆ, ನಿನ್ನಾಗಮನದಿಂದ ಪಾರ್ವತೀದೇವಿಯ ತಾಮಸೀ ಮಾಯೆಯು ಈ ಭೂಮಿಯನ್ನು ಬಿಟ್ಟು ಓಡಿ ಹೋದಳು. ಆದರಿಂದ ಶಂಕರನಿಗೆ ಜಯವಾಯಿತು. ಈ ಕಾರಣದಿಂದ ಪಾರ್ವತಿಯು ತನ್ನ ಸಾತ್ವಿಕ ಕಳೆಯನ್ನು ಪೃಥ್ವಿಯಮೇಲೆ ಕಳಿಸುವಳು. ಅವಳಿಗೆ ಸರ್ವಪ್ರಕಾರದಿಂದ ಕಲ್ಯಾಣವಾಗಲಿ.

ಹೀಗೆ ಬಸವಾದಿ ಭಕ್ತರಿಗೆ ಇಷ್ಟಲಿಂಗ ಭಜನಾದಿ ಕ್ರಮವನ್ನು ಅಲ್ಲಮನು ಬೋಧಿಸಿ ಮೆರೆದನು.

---

## ೧೧ ನೆಯ ಅಧ್ಯಾಯ ಸಂಪೂರ್ಣಂ.



## ೧೨ನೆಯ ಅಧ್ಯಾಯ.



### ಮಹಾದೇವಿಯಕ್ಕಗೆ ಪ್ರಭುದೇವರು ಲಿಂಗತತ್ವವನ್ನು ಬೋಧಿಸಿದ್ದು.



ಇತ್ತ ಮಹಾದೇವಿ ಅಕ್ಕನು ಅಲ್ಲಮಪ್ರಭುವಿನ ದರ್ಶನಕ್ಕಾಗಿ ಎಲ್ಲ ಕಡೆಗೂ ಸಂಚರಿಸಿದಳು. ಮುನಿಗಳ ಆಶ್ರಮಗಳನ್ನೂ ಪರ್ವತಗಳ ಗುಹೆಗಳನ್ನೂ ಗಿಡಗಳಿಂದ ದಟ್ಟವಾದ ಅಡವಿಗಳನ್ನೂ ಯೋಗಸಾಧನಕ್ಕೆ ನಿರ್ಮಿಸಿದ ಶಿವಯೋಗಿಗಳ ಮಠಗಳನ್ನೂ ಹುಡುಕಿದಳು ಆದರೂ ಗುರುವಿನ ದರ್ಶನವಾಗಲಿಲ್ಲ. ತಿರುಗಾಟದಲ್ಲಿ ಅವಳ ಶರೀರವು ಕೃಶವಾಯಿತು; ಪಾದದಲ್ಲಿ ತೂತುಗಳುಂಟಾಗಿ ಅವುಗಳಿಂದ ರಕ್ತವು ಹರಿಯಹತ್ತಿತು. ಆದರೂ ಅವಳಿಗೆ ಅದರ ಚಿಂತೆಯು ಸ್ವಲ್ಪಾದರೂ ಇರಲಿಲ್ಲ. ಕ್ಷಣಮಾತ್ರ ಕೂಡ ಅವಳಿಗೆ ವಿಶ್ರಾಂತಿಯು ಇಲ್ಲದಾಯಿತು. ಆಹಾರವಿಲ್ಲದೆ ರಾತ್ರಿಯೆನ್ನದೆ ಬೇಸಿಗೆ ಮಳೆ ಚಳಿ ಇವುಗಳನ್ನು ಗಣನೆಗೆ ತಾರದೆ ನಿದ್ರೆಯಿಲ್ಲದೆ ತಾನು ಕಂಡ ಪ್ರತಿಯೊಂದು ಪಟ್ಟಣವನ್ನೂ ಹಳ್ಳಿಯನ್ನೂ ಶೋಧಮಾಡಿ ಅಲ್ಲಿಂದ ಮುಂದಕ್ಕೆ ಸಾಗುತ್ತಿದ್ದಳು. ತದನಂತರ ದೈವಯೋಗದಿಂದ ಕಲ್ಯಾಣ ನಗರದಿಂದ ಬಂದ ಕೆಲವು ಸ್ವಧರ್ಮ ಸಂಪನ್ನರಿಂದ ಅಲ್ಲಮನ ವರ್ತಮಾನವನ್ನು ಕೇಳಿ, ತನ್ನ ಹೃದಯಕಮಲದಲ್ಲಿ ವಾಸಮಾಡಿಕೊಂಡಿರುವ ಈಶ್ವರ ಮೂರ್ತಿಯು ಸಮೀಪದಲ್ಲಿಯೇ ತನ್ನ ದೃಷ್ಟಿಗೆ ಬೀಳುವದೆಂದು ಉತ್ಸಕತೆಯುಳ್ಳವಳಾಗಿ, ಕಲ್ಯಾಣಪಟ್ಟಣಕ್ಕೆ ಬಂದಳು. ಬಸವೇಶ್ವರನ ಅರಮನೆಯ ಸಿಂಹಾಸನದ ಮೇಲೆ ಮೂರ್ತಮಾಡಿಸಿದ ಅಲ್ಲಮಪ್ರಭುವನ್ನು ಕಂಡು, ಆನಂದಭರಿತಳಾಗಿ, ಆತನಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಪದೆಪದೆ ಮಾಡಹತ್ತಿದಳು. ಗುರು ದರ್ಶನದಿಂದ ಆಕೆಯ ಕಂಗಳೊಳಗಿಂದ ಆನಂದಾಶ್ರುಗಳು ಸುರಿಯಹತ್ತಿದವು. ಹರ್ಷದಿಂದ ಅವಳ ಶರೀರದಲ್ಲಿ ರೋಮಾಂಚವು ಉತ್ಪನ್ನವಾಯಿತು.

ಹೀಗೆ ಶ್ರೀಗುರುವಿನ ಚರಣಾರವಿಂದವನ್ನು ಕಂಡು ಸಂತುಷ್ಟಳಾಗಿ ಅವನಿಗೆ ಬಾರಿ ಬಾರಿಗೆ ನಮಸ್ಕರಿಸಿ, ಆತನನ್ನು ಅನೇಕ ರೀತಿಯಿಂದ ಸ್ತುತಿಸಿ, ಭಕ್ತ್ಯತಿಶಯದಿಂದ ಅತ್ತಿತ್ತ ಕುಣಿದಾಡುತ್ತ ಅಲ್ಲಿ ನೆರದಿದ್ದ ಬಸವಣ್ಣ ಮೊದಲಾದ ಪ್ರಮಥ ಗಣ ಸಮೂಹಕ್ಕೆ ವಿನಯಪೂರ್ವಕವಾಗಿ ವಂದನೆಗೈದು, ಶರಣಾಗತಳಾದ ತನ್ನನ್ನು ರಕ್ಷಿಸಬೇಕೆಂದು ಅಲ್ಲಮನನ್ನು ಬೇಡಿಕೊಳ್ಳಲು. ಅಲ್ಲಮನು ಅನುರಕ್ತಳಾದ ಮತ್ತು ಬಾಡಿದ ಮುಖಕಮಲವುಳ್ಳ ಮಹಾದೇವಿ ಅಕ್ಕನನ್ನು ಕೃಪಾದೃಷ್ಟಿಯಿಂದ ನೋಡಿ ಅವಳ ನಿರ್ಮಲ ಭಕ್ತಿಗೆ ಮೆಚ್ಚಿ, ತನ್ನ ಕೃಪೆಗೆ ಈಗ ಯೋಗ್ಯಳಿರುವಳೆಂದು ಭಾವಿಸಿ, ಬಸವೇಶ್ವರನನ್ನು ನೋಡಿ, ಎಲೈ ಭಕ್ತಶಿಖಾಮಣಿಯೆ. ಮಹಾದೇವಿಯಕ್ಕನ ಪಾಪರಹಿತವಾದ ಭಕ್ತಿಯನ್ನು ನೋಡು. ಇವಳ ಭಕ್ತಿಯು ಸೀಮಾತೀತವಾದ್ದರಿಂದ ಅದರಲ್ಲಿಯೇ ತಲ್ಲೀನಳಾಗಿರುವಳು ಇವಳು ಪರಮ ಧೈರ್ಯವಂತಳೂ ನಿಗರ್ವಿಯೂ ನಿರಭಿಮಾನವುಳ್ಳವಳೂ ಇದ್ದಾಳೆ. ಮಲಮಾಯಾಕರ್ಮಗಳೆಂಬ ಪಾಶತ್ರಯಗಳನ್ನು ಕಿತ್ತುಹಾಕಿ, ಷಡ್ರಿಪುಗಳನ್ನು ಜಯಿಸಿದ್ದರಿಂದಲೇ ಲೋಕದಲ್ಲಿ ಬತ್ತಲೆಯಾಗಿ ಚರಿಸುತ್ತಿರುವಳು. + ಈಕೆಯ ವೈರಾಗ್ಯವು ಅಚಿಂತ್ಯವಾದದ್ದು ಎಂದು ಬಸವೇಶ್ವರನೊಡನೆ ಮಾತಾಡಿ ಮಹಾದೇವಿಯಕ್ಕನ ಕಡೆಗೆ ತಿರುಗಿ-ಎಲೈ ಸುಕುಮಾರಸ್ತ್ರೀಯಳೆ, ನಿನ್ನ ಶರೀರವು ತಾರುಣ್ಯ ಸೌಂದರ್ಯ ಮುಂತಾದವುಗಳಿಂದ ಕೂಡಿರುವ ಕಾರಣ ನಿನ್ನ ದೇಹರಚನೆಯು ಅತಂತ ಮನೋಹರವಾಗಿದೆ ಹೀಗಿದ್ದರೂ ನೀನು ವಿರಕ್ತಳಾಗಿ ಏನು ಕಾರಣ ಸಂಚರಿಸುವಿ? ಸ್ತ್ರೀಯರು ಉಟ್ಟ ವಸ್ತ್ರಗಳನ್ನು ಚೆಲ್ಲಿಕೊಟ್ಟ ದಿಗಂಬರರಾಗಿ ಭೂಮಿಯ ಮೇಲೆ ಸಂಚರಿಸುವದನ್ನು ನಾವು ಹಿಂದೆ ಎಂದೂ ಕೇಳಿರಲಿಲ್ಲವಾದ್ದರಿಂದ ಜನರು ನಿನ್ನನ್ನು ನೋಡಿ ನಗುತ್ತಿದ್ದಾರೆ, ನೀನು ಈ ಸಭೆಗೆ ಯಾವ ಉದ್ದೇಶದಿಂದ ಬಂದಿರುವಿ?—ಎಂದು ಮೂರು ಲೋಕಗಳಿಗೆ ಬಂಧುವಿನಂತೆ ಹಿತಕಾರಿಯಾದ ಅಲ್ಲಮನು ಅವಳನ್ನು ಕೇಳಲು, ಆಗ ಅವಳು ಪ್ರಭುದೇವರಿಗೆ ಭಕ್ತಿಭಾವದಿಂದ ಪುನಃ ನಮಸ್ಕರಿಸಿ-ಎಲೈ ಗುರು ಮರ್ಯನೆ, ಯಾವ ಪರಮೇಶ್ವರನು ತನ್ನ ಅದ್ಭುತವಾದ ಶಕ್ತಿಯಿಂದ ಈ ಜಗ

\+ "ರೂಪವಿಲ್ಲದವಂಗೆ ವಲಿದವರಿಗೆ ತನುವಿನ ಹಂಗುಂಟೆ।
ಮನವಿಲ್ಲದವಂಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೆ।
ದಿಗಂಬರಂಗೊಲಿದವಳಿಗೆ ಕೌಪೀನದ ಹಂಗುಂಟೆ।
ಕೂಡಲಸಂಗಮದೇವಯ್ಯ ಮಹದೇವಿಯಕ್ಕನೆಂಬ ಭಕ್ತೆಯ
ರೂಪಿಂಗೆ ಅವ ಹೊಲ್ಲೆಯವಿಲ್ಲಾ ಪ್ರಭುವೇ॥ (ವಚನ)

ತ್ರೆಲ್ಲವನ್ನು ವ್ಯಾಪಿಸಿಕೊಂಡಿರುವನೋ ಅಂತಹ ಪರಮೇಶ್ವರನ ಪತ್ನಿಯು ನಾನಿರುವದರಿಂದ ನನಗೆ ವಸ್ತ್ರಗಳ ಆಚ್ಛಾದನೆ ಮಾಡಿಕೊಳ್ಳುವ ವ್ಯರ್ಥ ಶ್ರಮವಿಲ್ಲ. ನನಗೆ ಯಾರಿಂದ ಲಜ್ಜೆಯುಂಟಾಗಬೇಕು? ಸ್ವತಃ ಮನ್ಮಥ ಧ್ವಂಸಿಯಾದ ಆ ಶಂಕರನ ತೊಡೆಯ ಮೇಲೆ ನಾನು ಯಾವಾಗಲೂ ವಿರಾಜಮಾನಳಾಗಿರುವದರಿಂದ ಮದನ ಪೀಡೆಯು ನನ್ನಲ್ಲುಂಟಾಗುವ ಬಗೆ ಹೇಗೆ? ಮನಸ್ಸಿನೊಳಗಿನ ಸರ್ವ ಪ್ರಕಾರದ ವಿಕಾರಗಳನ್ನೂ ವಿಕಲ್ಪಗಳನ್ನೂ ದೂರ ಮಾಡಿದಂಥ ನನಗೆ ವಸ್ತ್ರದ ಹಂಗೇಕೆ? * ಗುರುವೆ, ಇದೆಲ್ಲ ತನಗೆ ವಿದಿತವೆ ಆದೆ

ಅಲ್ಲಮ – ಎಲೈ ತರುಣಳೆ, ನೀನು ಪ್ರತ್ಯಕ್ಷವಾಗಿ ನಮ್ಮ ಕಣ್ಣಿಗೆ ಕಾಣುವಿ; ನಿನ್ನಂತೆ ಆ ಪರಮಾತ್ಮನು ನಮ್ಮ ಕಣ್ಣಿಗೆ ಕಾಣುವದಿಲ್ಲ. ಕತ್ತಲೆಗೂ ಬೆಳಕಿಗೂ ಎಳ್ಳಷ್ಟಾದರೂ ಸಂಬಂಧವು ಘಟಿಸದಂತೆ, ದೃಶ್ಯಳಾದ ನಿನಗೂ ಅದೃಶ್ಯನಾದ ಪರಮೇಶ್ವರನಿಗೂ ಪರಸ್ಪರ ವಿರುದ್ಧ ಗುಣಗಳಿರುವದರಿಂದ ಗಂಡಹೆಂಡರ ಸಂಬಂಧವು ಹ್ಯಾಗಾದೀತು? ಜಗತ್ತಿನ ಉಳಿದ ಸ್ತ್ರೀಯರಂತೆ ನೀನು ಅಜ್ಞಾನಿಯಲ್ಲ; ಯಾಕಂದರೆ ಲೋಕವಿರುದ್ಧ ವೇಷಧಾರಣ ಮಾಡಿಕೊಂಡು ಸಂಚರಿಸುತ್ತಿದ್ದಾಗ್ಗ್ಯೂ ಬಾಯಿಂದ ಬ್ರಹ್ಮಜ್ಞಾನದ ಮಾತುಗಳನ್ನಾಡುತ್ತಿ.

ಮಹಾದೇವಿ—ಎಲೈ ಗುರುವೆ, ಪರಮೇಶ್ವರನು ನಿರಾಕಾರನಿದ್ದರೂ ತನ್ನಿಚ್ಛೆಯಿಂದ (ಲೀಲೆಯಿಂದ) ಸಾಕಾರ ಮೂರ್ತಿಯಾಗುತ್ತಾನೆ. ಆದ್ದರಿಂದ ಸಗುಣ ನಿರ್ಗುಣ ವೆಂಬೆರಡು ರೂಪಗಳು ಜ್ಞಾನಸ್ವರೂಪವಾದ್ದರಿಂದ, ನಾನು ಸಗುಣಳಾದರೂ ಶಿವೈಕ್ಯದ ದೆಸೆಯಿಂದ ನಿರಾಕಾರಳೇ ಆಗಿದ್ದೇನೆ. ನಿರಾಕಾರವು ಒಮ್ಮೊಮ್ಮೆ ಸಾಕಾರವಾಗಿ ಕಾಣುತ್ತದೆ. ಸಾಕಾರವುಳ್ಳದ್ದು ಒಮ್ಮೊಮ್ಮೆ ನಿರವಯುವ ನಿರ್ಗುಣ ಚೈತನ್ಯದಂತೆ ಭಾಸಿಸುತ್ತದೆ. ಆದ್ದರಿಂದ ಸಾಕಾರ ನಿರಾಕಾರ ವೆರಡೂ ಒಂದೇ ಎಂಬದಾಗಿ ನನಗೆ ನಿಶ್ಚಯಾತ್ಮಕಜ್ಞಾನವಿರುವ ಮೂಲಕ ಶಿವಸಾಮರಸ್ಯದ ದೆಸೆಯಿಂದ ಸಗುಣಳೂ ನಿರ್ಗುಣಳೂ ಆಗಿದ್ದೇನೆ.

ಅಲ್ಲಮ – ಎಲೈ ಮಗಳೆ, ಹಾಲಿನಲ್ಲಿ ತುಪ್ಪವಿರುವದು ನಿಜವಿದ್ದರೂ ಅದನ್ನು ಯಥಾಕ್ರಮದಿಂದ ಬಹಿರ್ಗತ ಮಾಡುವ ಪೂರ್ವದಲ್ಲಿಯೆ ಹಾಲಿನಲ್ಲಿ ತುಪ್ಪವದೆ

---

* ಕರಣಗಳು ಸರ್ವ ಶುದ್ಧವಾದವು। ಶರಣರನು ನೆನನೆನೆದು ಸಂತತ।
ಶರಣರಿಗೆ ಶರಣೆಂದು ಕಾಯುಪುನೀತಮಯುವಾಯ್ತು॥
ಶರಣರಿಂದಾ ನಿಂದು ಶುಚಿಯಾ। ಗಿರಲು ತನುಮನಗಳ ವಿಕಾರದ।
ಭರಕೆ ನಾನಂಜುವೆನೆ ಯೆಂದಳು ಮತ್ತೆ ಮಹಾದೇವಿ॥

ಅನ್ನುವದರಿಂದ ಏನೂ ಪ್ರಯೋಜನವಾಗದು. ಶಿವಭಕ್ತಿ ಲಿಂಗನಿಷ್ಠೆಗಳ ಸಹಾಯದಿಂದ ಶಿವನ ಪ್ರತ್ಯಕ್ಷಾನುಭವವಾಗುವ ಪೂರ್ವದಲ್ಲಿಯೇ ನನ್ನೊಳಗೆ ಪರಮೇಶ್ವರನಿದ್ದಾನೆಂದು ನಗ್ನಳಾಗಿ ಸಂಚರಿಸುವದರಿಂದ ಜನರ ಅಪಹಾಸ್ಯಕ್ಕೆ ಮಾತ್ರ ಗುರಿಯಾಗಬೇಕಾಗುವದು.

ಮಹಾದೇವಿ—(ಅಲ್ಲಮನು ತನ್ನನ್ನು ಕುರಿತು ವ್ಯೂದಲಿಸಿ ನುಡಿದದ್ದನ್ನು ಕೇಳಿ) ಎಲೈ ಅಲ್ಲಮಗುರು ಶ್ರೇಷ್ಠನೆ, ನಿನ್ನ ತೇಜಃಪುಂಜ ಚರಣಕಮಲ ದರ್ಶನದಿಂದ ಕೆಟ್ಟ ಮಾಯೆಯು ನಾಶವಾಗಿ ತೇಜೋಮಯುವಾದ ಲಿಂಗಮೂರ್ತಿಯು ನನ್ನ ಸಮಿಪದಲ್ಲಿಯೇ ಇದೇ. ಆದ್ದರಿಂದ ನಾನು ನಿನ್ನನ್ನು ಅನನ್ಯಭಾವದಿಂದ ಆಶ್ರಯಿಸಿದ್ದೇನೆ. ನೀನು ಕಠಿಣೋಕ್ತಿಗಳನ್ನಾಡಿ ನನ್ನನ್ನು ನಿರಾಕರಿಸಿದರೆ ಮುಂದೆ ನನ್ನ ಗತಿ ಏನಾಗಬೇಕು? ನಿನ್ನ ಹೊರತು ನನಗೆ ಪರಬ್ರಹ್ಮಸ್ವರೂಪವನ್ನು ತಿಳಿಸಿಕೊಡಲು ಯಾರು ಸಮರ್ಥರಿದ್ದಾರೆ?

ಅಲ್ಲಮ—(ತನ್ನ ಪಾದುಗಳ ಮೇಲೆ ಬಿದ್ದುಕೊಂಡು ವಿಲಾಪಿಸುತ್ತಿರುವ ಮಹಾದೇವಿಯನ್ನು ಕಾರುಣ್ಯಭಾವದಿಂದ ನೋಡಿ) ತಂಗಿ, ಯಾರು ತಮಗೆ ಬ್ರಹ್ಮವು ತಿಳಿದಿರುವದಿಲ್ಲೆಂದು ನಿರಹಂಕಾರಿಗಳಾಗಿ ನುಡಿಯುತ್ತಾರೋ ಅವರಿಗೆ ಮಾತ್ರ ಅದು ಗೋಚರವಾಗಿರುತ್ತದೆ. ಯಾರು ತಾವು ಬ್ರಹ್ಮವನ್ನು ಅರಿತಿರುವೆವೆಂಬದಾಗಿ ಬಾಯುಬ್ರಹ್ಮವನ್ನು ನುಡಿಯುವರೋ ಅವರಿಗೆ ಏನೂ ತಿಳಿದಿರುವದಿಲ್ಲ. ಹೀಗೆ ಭೂಮಿಯಲ್ಲಿ ವಿರೋಧ ಸೂಚಕ ಸಂಗತಿಗಳಿವೆ. ಆದ್ದರಿಂದ ಶಿವಭಕ್ತಿಯು ದೂರವದೆ ಎಂದು ಹೇಳುವವರಿಗೆ ಅದು ಸಮೀಪವಾಗಿರುತ್ತದೆ; ಸಮೀಪದಲ್ಲಿದೆ ಎಂದು ಅನ್ನುವವರಿಗೆ ಅದು ದೂರವಾಗಿರುತ್ತದೆ. ಈ ವಿಷಯವು ಬಸವೇಶ್ವರನಿಗೆ ಯಥಾರ್ಥ ತಿಳಿದದೆ. ಆತನ ಮುಖದಿಂದ ನೀನು ಸರ್ವವನ್ನು ತಿಳಿದುಕೋ—ಎಂದು ಹೇಳಲು, ಮಹಾದೇವಿಯು ಬಸವಂಣನ ದರ್ಶನದಿಂದ ನಿರ್ದೋಷಿಯೂ ಪಾಪರಹಿತಳೂ ಆದ್ದರಿಂದ ಮೋಕ್ಷಪ್ರಾಪ್ತಿಯು ತನಗೆ ಹಸ್ತಗತವಾಗಿದೆ ಎಂದು ತನ್ನ ಪರಿಪೂರ್ಣವಾದ ಶಿವಭಕ್ತಿಯನ್ನು ಅಲ್ಲಿ ನೆರೆದವರೆಲ್ಲರಿಗೂ ವ್ಯಕ್ತಪಡಿಸಲು ಅವಳನ್ನು ಅಲ್ಲಿದ್ದ ಸರ್ವ ಪ್ರಮಥರು—“ಇವಳು ಪಾರ್ವತೀದೇವಿಯ ಪ್ರತ್ಯಕ್ಷ ಸಾತ್ವಿಕ ಕಲೆಯು. ಯಾವ ಸ್ತ್ರೀಜನ್ಮದಲ್ಲಿ ಜಾಣತನವೆಂಬುದು ಹೆಸರಿಗೆ ಸಹ ಇರುವದಿಲ್ಲವೋ. + ಅಂತಹ ಸ್ತ್ರೀಜನ್ಮವು ಮಹಾದೇವಿಗೆ ಪ್ರಾಪ್ತವಾದರೂ ಇವಳು ಸರ್ವವಿಕಾರಗಳನ್ನು ನೀಗಿ ಕಾಮವಿಕಾರವನ್ನು ಮನಸ್ಸಿನಿಂದೋಡಿಸಿ ಶಾಂತಸ್ವರೂಪಳಾಗಿದ್ದಾಳೆ. ಸೌಂದರ್ಯದ ಕಣಿಯಾಗಿದ್ದರೂ ಪರಮವಿರ

+ ಇದು ಸಂದೇಹಾಸ್ಪದವಾದ ಮಾತು. ಪುರುಷರಂತೆ ಸ್ತ್ರೀಯರಿಗೂ ದೇವರು ಬುದ್ಧಿಯನ್ನು ದಯಪಾಲಿಸಿದ್ದಾನೆ.

ಕ್ತಳಾಗಿದ್ದಾಳೆ. ಇವಳೇ ಪರಮಧನ್ಯಳು. ಈ ವಯಸ್ಸಿನಲ್ಲಿ ಅಂತಃಪುರವಾಸಿ ಯಾಗತಕ್ಕದ್ದಿದ್ದು, ಅದನ್ನು ಬಿಟ್ಟು ತನು-ಮನ-ಧನ ಮುಂತಾದವುಗಳ ಮೇಲೆ ಆಶೆಯನ್ನು ತೊರೆದ ಕಾರಣ ಅತ್ಯಂತ ಶೋಭಾಯಮಾನಳಾಗಿ ತೋರುತ್ತಾಳೆ. ಶರೀರವು ನೀರಿಗೆಗಟ್ಟ ಕೂದಲು ಬೆಳ್ಳಗಾಗಿ ತಲೆಯು ಅಗಳಾಡಹತ್ತಿದ ಮಾತ್ರ ದಿಂದಲೇ ಜನರು ವೃದ್ಧರೆಂದು ತಿಳಿಯುತ್ತಾರೆ ಆದರೆ ವಯಸ್ಸು ಎಷ್ಟೇ ಇರಲಿ, ಚಿಕ್ಕವರಲ್ಲಿ ಸುವಿಚಾರವೂ ಸದ್ಗುಣವೂ ನಿಶ್ಚಲಭಕ್ತಿಯೂ ತಲೆದೋರಿದರೆ, ಅವರೇ ವೃದ್ಧರೂ ಅನುಭವಿಗಳೂ ಎಂಬದಾಗಿ ಶಾಸ್ತ್ರಗಳು ಸಾರುತ್ತವೆ. ಅಕಟಕಟಾ!! ಜನರ ಮೂರ್ಖತನದಿಂದ ಅವರ ಆಯುಷ್ಯವೆಲ್ಲ ವ್ಯರ್ಥವಾಗಿ ಹೋಗುತ್ತದೆ. ಆದರೆ ಈ ಮಹಾದೇವಿಯಕ್ಕನು ಬಾಲ್ಯದಲ್ಲಿಯೇ ವೃದ್ಧರಿಗೆಸಹ ದುಸ್ಸಾಧ್ಯವಾದ ಆತ್ಮಜ್ಞಾನವನ್ನು ಸಂಪಾದನೆ ಮಾಡಿಕೊಂಡಳು. ಅದ್ದರಿಂದ ಇವಳೇ ಕೃತಾರ್ಥಳು. ಇವಳೇ ಧನ್ಯಳು." ಎಂದು ಬಸವೇಶ್ವರನೇ ಮೊದಲಾದ ಪ್ರಮಥಗಣರು ಅವಳನ್ನು ಸ್ತುತಿಸುತ್ತಿದ್ದರು. * ಅನಂತರ ಅಲ್ಲಮನು ಅವಳ ವಿಚಿತ್ರ ರೀತಿಯನ್ನೂ ಮನಸ್ಸಿನ ಶಾಂತತೆಯನ್ನೂ ತನ್ನ ಮೇಲಿರುವ ಭಕ್ತಿಯನ್ನೂ ಚನ್ನಾಗಿ ಅರಿತುಕೊಂಡು, ಶಿವತತ್ವವನ್ನು ತಿಳಿದುಕೊಳ್ಳಲೋಸುಗ ಮಹಾದೇವಿಯಕ್ಕನು ತನ್ನಲ್ಲಿಗೆ ಬಂದಿರುವಳೆಂದು ನಿಶ್ಚಯಿಸಿದನು. ಆದ್ದರಿಂದ ಅವಳಿಗೆ ಉಪದೇಶ ಮಾಡಬೇಕೆಂದು ನೆನೆದು—ಎಲೈ ಮಗಳೆ, ಶಿವಭಕ್ತರ ಪ್ರಸಾದ ಸೇವನೆಯಿಂದ ನಿನ್ನ ಶರೀರವೂ ಶಿವಶರಣರ ಸ್ಮರಣೆಯಿಂದ ನಿನ್ನ ಹೃದಯವೂ ಶಿವಶರಣರ ಮುಖಾವಲೋಕನದಿಂದ ನಿನ್ನ ನೇತ್ರಗಳೂ ಶಿವಶರಣರಚರಿತ್ರ ಶ್ರವಣದಿಂದ ನಿನ್ನ ಶ್ರೋತ್ರಗಳೂ ಪರಿಶುದ್ಧವಾಗಿವೆ; ಆದಕಾರಣ ಶಿವಧರ್ಮವು ನಿನಗೆ ಪೂರ್ಣ ಗೋಚರವಾಗಿರಲು ಸದ್ಗುಣಗಳೂ ಇಂದ್ರಿಯ ನಿಗ್ರಹವೂ ಗುರುಕೃಪೆಯೂ ನಿನ್ನ ಸ್ವಾಧೀನವೆಂದೇ ತಿಳಿಯಲು ಯಾವ ಅಭ್ಯಂತರವಿಲ್ಲ. ಈ ಸದ್ಗುಣಗಳು ನಿನ್ನಲ್ಲಿ ಉತ್ಪನ್ನವಾಗುವದಕ್ಕೋಸ್ಕರ ನೀನು ಭಯಂಕರವಾದ ಅಡವಿಗಳನ್ನು ಸಂಚರಿಸಿದಿ. ನಿನ್ನಂಥ ವೈರಾಗ್ಯ ಸಂಪನ್ನರು ಜಗತ್ತಿನಲ್ಲಿ ಯಾರೂ ಇಲ್ಲವು. ಆದ್ದರಿಂದ ಶ್ರೇಷ್ಠಳಾದ ಮಹಾದೇವಿಯೆ, ನಿನಗೆ ಹೆಚ್ಚಿಗೆ ಏನು ಹೇಳತಕ್ಕದ್ದದೆ. ಹಾಲು ಉತ್ತಮ

---

* ಲೋಕದೊಳು ಸತಿ ಜನ್ಮವನುತಾ। ಸ್ವೀಕರಿಸಿ ತನುಮೋಹ ಲೋಭವ।
ನೂಕಿ ನಿಸ್ಪೃಹೆಯಾಗಿ ನಿಲುವವರಾರು ಸೃಷ್ಟಿಯಲಿ॥
ಈಕೆಗಾರಣೆ ಶಿವಶಿವಾಯೆನುತ। ತಾಕೆಯನು ಬಸವಂಣ ಮುಖ್ಯರ।
ನೇಕಪರಿಯಲಿ ಹೊಗಳುತಿರ್ದರು ಶರಣುಶರಣೆನುತ॥

ವಿದ್ದರೂ ನೆಲದ ಮೇಲೆ ಚಲ್ಲಿದರೆ ತುಪ್ಪವು ಹೊರಡದು. ಯೋಗ್ಯ ಪ್ರಮಾಣ ದಿಂದ ಹೆಪ್ಪನ್ನು ಹಾಕಿ ಮೊಸರನ್ನು ಕಡೆದು ಬೆಣ್ಣೆಯಿಂದ ತುಪ್ಪವನ್ನು ತೆಗೆಯ ಬೇಕಾಗುವದು. ಅದರಂತೆ ಮನಸ್ಸಿನಲ್ಲಿ ಚನ್ನಾಗಿ ವಿರಕ್ತಭಾವವನ್ನು ತಾಳಿ ಸುವಿ ಚಾರದಿಂದ ಉತ್ತಮ ಮಾರ್ಗವನ್ನು ಕಂಡುಹಿಡಿದು, ಶಿವದೀಕ್ಷಾ ಸಂಸ್ಕಾರ ಬಲ ದಿಂದ ನಾನು ನೀನೆಂಬ ಭೇದಭಾವವನ್ನಳಿದು ಶಿವರಹಸ್ಯದ ಜ್ಞಾನವನ್ನುಂಟುಮಾ ಡಿಕೊಳ್ಳಬೇಕು. ಹೀಗೆ ಸಾವಧಾನ ಚಿತ್ತವುಳ್ಳವನಾಗಿ ಲಿಂಗಧ್ಯಾನಪರನಾದವ ನಿಗೆ ತೇಜೋಮಯವಾದ ಲಿಂಗಜ್ಯೋತಿಯು ಪ್ರತ್ಯಕ್ಷವಾಗುವದು. ಮಹಾದೇವಿ, ನಿನ್ನ ಹಸ್ತಗತವಾದ ಇಷ್ಟಲಿಂಗವು ತನ್ನ ಪರಿಪೂರ್ಣತೆಯ ಮೂಲಕ ಬಾಹ್ಯಾಭ್ಯಂ ತರ ಪ್ರಪಂಚವನ್ನು ನಾಶಗೊಳಿಸುವದು. ಆದ್ದರಿಂದ ನಿನ್ನ ಶರೀರದ ಭಾನವು ಸಹ ನಿನಗಿಲ್ಲದೆ ಚಿತ್ಸ್ವರೂಪವಾದ ಇಷ್ಟಲಿಂಗದಲ್ಲಿ ಸಹಜವಾಗಿ ಐಕ್ಯತ್ವವನ್ನು ಹೊಂ ದುವಿ -ಎಂದು ಸುಲಭಪ್ರಕಾರದಿಂದ ಅವಳಿಗೆ ತತ್ವೋಪದೇಶ ಮಾಡಿದನು. ಮ ಹಾದೇವಿಯಕ್ಕನು ಅಲ್ಲಮಪ್ರಭುವಿನ ಉತ್ತಮವಾದ ಉಪದೇಶದಿಂದ ಪರುಷಸ್ಪರ್ಶ ದಿಂದ ಕಬ್ಬಿಣವು ಬಂಗಾರವಾಗುವಂತೆ, ಸಂಸಾರದ ಅಲ್ಪಸುಖವನ್ನು ನೀಗಿ ತೇ ಜೋಮಯವಾದ ಚಿತ್ಸ್ವರೂಪ ಲಿಂಗ ಚಿಂತನೆಯಲ್ಲಿ ಮಗ್ನಳಾದಳು ಅಲ್ಲಮ ಪ್ರಭುವಿನಿಂದ ಅವಳಿಗೆ ಜ್ಞಾನೋದಯವಾಗಲು ಬಸವೇಶ್ವರನ ಮಂದಿರದಿಂದ ಹೊರಟು ಶಿವಯೋಗ ಸಮಾಧಿಯನ್ನು ಬೆಳಿಸಬೇಕೆಂದು ಶ್ರೀಮಲ್ಲಿಕಾರ್ಜುನ ಪರ್ವತಕ್ಕೆ ಹೊರಟುಹೋದಳು. ಅಲ್ಲಿ ತನ್ನ ಹೃದಯಕಮಲದೊಳಗೆ ಗುರುಶ್ರೇ ಷ್ಠನಾದ ಅಲ್ಲಮಪ್ರಭುವಿನ ಚರಣಕಮಲಗಳನ್ನು ಧ್ಯಾನಿಸುತ್ತ ಶಿವಯೋಗಸಾಧ ನದಿಂದ ಲಿಂಗೈಕ್ಯಸ್ಥಿತಿಯನ್ನು ಹೊಂದಿದಳು.

೧೨ ನೆಯ ಅಧ್ಯಾಯ ಸಂಪೂರ್ಣಂ.



## ೧೩ನೆಯ ಅಧ್ಯಾಯ.




ಅಲ್ಲಮ ಪ್ರಭುವು ಶಿವರಹಸ್ಯದ ಉಪದೇಶದಿಂದ ಮಹಾದೇವಿ ಅಕ್ಕನ ಮನಸ್ಸನ್ನು ನಿರ್ಮಲ ಮಾಡಿದ ಬಳಿಕ ಜ್ಞಾನಮಾರ್ಗೋಪದೇಶದಿಂದ ಬಸವೇಶ್ವರನ ಭಕ್ತಿಯನ್ನು ದೃಢಪಡಿಸಬೇಕೆಂದು ಚಿಂತಿಸಿ, ಪ್ರಸನ್ನಮುದ್ರೆಯಿಂದ ಬಸವೇಶ್ವರನನ್ನು ನೋಡಿ ಶ್ರೇಷ್ಠವಾದ ಶಿವತತ್ವೋಪದೇಶವನ್ನು ತಾನೇ ಹೇಳತೊಡಗಿದನು. " ಭಕ್ತಿಭಾವದಿಂದ ಇಷ್ಟಲಿಂಗ ಪೂಜೆಯಲ್ಲಿ ಸದಾ ತತ್ಪರನಾದವನಿಗೆ ಗುರುಲಿಂಗ ಜಂಗಮದಲ್ಲಿ ಸದ್ಭಕ್ತಿಯು ತಾನೇ ದೃಢವಾಗುವದು. ಭಕ್ತನು ಈ ತ್ರಿವಿಧ ವಸ್ತುಗಳ ವಶವರ್ತಿಯಾಗಲು ಆತನ ಅಂತಃಕರಣ ವೃತ್ತಿಗಳು ಸ್ಥಿರತ್ವಹೊಂದಿ ಮನಸ್ಸು ಪ್ರಾಣಲಿಂಗದ ಕಡೆಗೆಳಸುವದು. ಮನಸ್ಸು ಪ್ರಾಣಲಿಂಗದಲ್ಲಿ ಲೀನವಾಗಲು ಮಾಯಾಮೋಹವು ಹರಿದು ಹೋಗುವದು. ಮತ್ತೂ ಇಷ್ಟ ಪ್ರಾಣ-ಭಾವಗಳೆಂಬ ಲಿಂಗತ್ರಯಗಳಲ್ಲಿ ನಿಶ್ಚಲ ಭಕ್ತಿಯುಳ್ಳಾತನಿಗೆ ಮಾತ್ರ ಪ್ರಾಣಲಿಂಗಾನುಸಂಧಾನಕ್ಕೆ ಅನುಗುಣವಾದ ಮನೋವೃತ್ತಿಯುಂಟಾಗುವದು. ಬಸವೇಶ್ವರನೆ, ಯಾವನ ಮನಸ್ಸು ಚಿತ್ಸ್ವರೂಪ ಪ್ರಾಣಲಿಂಗನಲ್ಲಿ ಮಗ್ನವಾಗಿರುವದೋ ಅವನನ್ನು ಅಜ್ಞಾನವು ಎಂದೂ ಮುಟ್ಟಲರಿಯದು. ಈ ದುರ್ಧರವಾದ ಮಾಯೆಯನ್ನು ಜಯಿಸಿದೊಡನೆಯೇ ಆತನಿಗೆ ಮೋಕ್ಷಮಾರ್ಗವು ಗೋಚರಿಸುವದು. "

ಬಸವೇಶ್ವರ—ಗುರುವೆ, ನೀವು ಮಹಾಸಮರ್ಥರು ಮಾಯೆಯನ್ನು ನಾಶಗೊಳಿಸಿ ಪ್ರಾಣಲಿಂಗಾನುಸಂಧಾನಕ್ಕೆ ಅನಕೂಲವಾದ ಉಪದೇಶವನ್ನು ಮಾಡಿ ನನಗೆ ಕೈವಲ್ಯರೂಪ ಮೋಕ್ಷ ಮಾರ್ಗವನ್ನು ತೋರಿಸಬೇಕು.

ಅಲ್ಲಮಪ್ರಭು—ಬಸವೇಶ್ವರ, ಆಕಳ ಕೆಚ್ಚಲಕ್ಕೆ ಉಣ್ಣೆಯು ಯಾವಾಗಲು ಅಂಟಕೊಂಡಿದ್ದರೂ ಅದಕ್ಕೆ ಹಾಲಿನ ಹನಿಯೊಂದಾದರೂ ಕುಡಿಯಲು ಸಿಗದಿರು

ವಂತೆ, ಶಿವಭಕ್ತಿಯನ್ನು ಬಿಟ್ಟು ಅನ್ಯದೇವತಾ ಭಕ್ತಿಯಲ್ಲಿ ವರ್ತಿಸುತ್ತಿರುವ ಅಂಧ ಕರಿಗೆ ಎಂದೂ ಸ್ವರೂಪಜ್ಞಾನವಾಗುವದಿಲ್ಲ. ಸ್ವರೂಪಜ್ಞಾನವಿಲ್ಲದೆ ಮೋಕ್ಷವಾಗದ್ದರಿಂದ ಅನ್ಯ ದೇವತಾರ್ಚಕರಿಗೆ ಸ್ವರೂಪಜ್ಞಾನವಾಗುತ್ತದೆಂಬ ಮಾತು ಸಟೆಯು * ಶಿವಲಿಂಗದಲ್ಲಿ ಲಕ್ಷವು ಕೂಡ್ರುವದಕ್ಕಾಗಿ ಮನದಲ್ಲಿ ನಿರಂತರ ಶಿವಭಕ್ತಿಯನ್ನಾಚರಿಸಬೇಕು. ಬಾಹ್ಯದಲ್ಲಿ ಶಿವಪೂಜೆಮಾಡುವವರಿಗೆ ಸುಗಂಧ ಪುಷ್ಪ, ಸ್ವಚ್ಛನೀರು ಬಿಲ್ವಪತ್ರೆ, ಕೃಷ್ಣಾಗರುಚಂದನ ಮುಂತಾದವುಗಳೂ ನೈವೇದ್ಯಕ್ಕಾಗಿ ಉತ್ತಮ ಪ್ರಕಾರದ ಧಾನ್ಯಗಳೂ ಇರುವವು. ಈ ಇಷ್ಟಲಿಂಗ ಪೂಜೆಯೊಂದಿಗೆ ಅಂತರಂಗದಲ್ಲಿ ಪ್ರಾಣಲಿಂಗ-ಭಾವಲಿಂಗಗಳ ಆರಾಧನೆಯೂ ಸಾಂಗವಾಗಿ ನಡೆಯುವಿದ್ದರೆ, ಪೂಜಕನಿಗೆ ದೃಢವಾದ ಭಕ್ತಿಯು ಲಭಿಸಿದರೂ ಅವನಿಗೆ ಶಿವೈಕ್ಯಪ್ರಾಪ್ತಿಯಾಗದು. ಡಾಂಭಿಕತನದಿಂದ ಶಿವಲಿಂಗ ಪೂಜೆಯನ್ನು ಮಾಡುವವನಿಗೆ ಶಿವಭಕ್ತಿಯು ಎಂದೂ ಲಭಿಸುವದಿಲ್ಲವೆಂದ ಬಳಿಕ ಅವನ ವಿಷಯದಲ್ಲಿ ಶಿವೈಕ್ಯದ ಮಾತಂತೂ ದೂರೇ ಉಳಿಯಿತು. ನನಗೆ ಡಾಂಭಿಕ ಭಕ್ತಿಯು ಸೇರುವದಿಲ್ಲ ಅದು ಗಾಳಿಗೊಡ್ಡಿದ ದೀಪದಂತಿರುವದು. ಇಂತಹ ಭಕ್ತಿಯು ವೈರಾಗ್ಯವಿಲ್ಲದ ಸನ್ಯಾಸಿಗಳಂತೆ ಕಡೆಗಾಣುವದಿಲ್ಲ. ಆದರೆ ಕುಂಭಕದಿಂದ ಪಂಚಪ್ರಾಣ ವಾಯುಗಳನ್ನು ನಿರೋಧಗೊಳಿಸಿ, ಶರೀರವನ್ನು ತನ್ನ ಅಂಕಿತದಲ್ಲಿಟ್ಟುಕೊಂಡು ಹಸಿವು ನೀರಡಿಕೆಗಳೆಂಬ ವೈರಿಗಳನ್ನು ಗೆದ್ದು, ಇಂದ್ರಿಯಗಳನ್ನು ನಿಗ್ರಹಿಸಿ, ಮನಸಿನ ಸರ್ವ ಸಂಕಲ್ಪವಿಕಲ್ಪಗಳನ್ನು ಕಿತ್ತುಹಾಕಿ, ಹಾಲಿನಲ್ಲಿ ನೀರು ಹಾಕಲು ಅದು ಭೇಧವಳಿದು ಹಾಲಿನಲ್ಲಿ ಕೂಡಿಕೊಳ್ಳುವಂತೆ ತನ್ನ ಮನಸ್ಸನ್ನು ಲಿಂಗಸ್ವರೂಪದ ಕಡೆಗೆ ತಿರುಗಿಸುವವನಿಗೆ ಮಾತ್ರ ಸಿದ್ಧರಾಮನಂತೆ ಉತ್ಕೃಷ್ಟವಾದ ಶಿವಜ್ಞಾನವು ದೊರಕುವದು, ” ಎಂದು ಅಲ್ಲಮಪ್ರಭುವು ನುಡಿಯಲು, ಸಿದ್ಧರಾಮನು ಅದನ್ನು ಕೇಳಿ— “ ಶಿವಭಕ್ತರ ದಾಸನಾದ ನಾನು ಗುರುವಿನ ಪ್ರಶಂಸೆಗೆ ಎಳ್ಳಷ್ಟೂ ಪಾತ್ರನಲ್ಲ. ಆದರೆ ತನಗೆ ಪರಮಗುರು ಸ್ವರೂಪನಾದ ಹಾಗೂ ಕಲಿಯುಗದಲ್ಲಿಯ ಪಾತಕೀಗಳನ್ನು ನಾಶಗೊಳಿಸಿ ಶಿವಭಕ್ತಿಯನ್ನು ಜಗತ್ತಿನಲ್ಲಿ ಪ್ರಸರಿಸುವದಕ್ಕಾಗಿ ಅವತರಿಸಿದ ಬಸವೇಶ್ವರನು ಮಾತ್ರ ಗುರುವಿನ ಸ್ತೋತ್ರಕ್ಕೆ ಅರ್ಹನು. ” ಎಂದು ನುಡಿದನು.

---

* “ ಉಣಕೆಚ್ಚಲಪೇಸುದಿನವಿ। ದ್ದಂಣೆವಾಲುಣ ಬಲ್ಲುದೇಕೇ।
ಳೆನ್ನಭಕ್ತಿ ದ್ವಾರವನು ಹುಗದನ್ಯ ಮಾರ್ಗದಲಿ।
ಕಂಣುಗಾಣದೆ ನಡದಡದರಲಿ। ತನ್ನ ನಾವುದು ಹುಸಿಕಣಾಬಸ।
ವಂಣ ಕೇಳೆನುತಲ್ಲಮ ಪ್ರಭುರಾಯ ನಿಂತೆಂದ ॥ ”

ಅಮಲ್ಲ—(ಇದನ್ನು ಕೇಳಿ ತನ್ನ ಸಮ್ಮುಖದಲ್ಲಿ ಎರಡೂ ಕೈಗಳನ್ನು ಜೋಡಿಸಿ ನಿಂತಿರುವ ಬಸವೇಶ್ವರನನ್ನು ನೋಡಿ) ಬಸವೇಶ್ವರನೆ, ದೃಢವಾದ ಭಕ್ತಿಯು ಅನುಭವದಲ್ಲಿ ಅಂಗವೂ ಲಿಂಗವೂ ಸಮಾನ ಯೋಗ್ಯತೆಯುಳ್ಳವುಗಳಿರುತ್ತವೆ. ಹೀಗೆ ಯಥಾವಿಧಿ ಇಷ್ಟಲಿಂಗ ಪೂಜೆಯನ್ನು ಮಾಡು. ಅದರ ಉತ್ತಮ ಪ್ರಸಾದಾನ್ನವನ್ನು ಭುಂಜಿಸು. ಉಪಾಧಿರಹಿತವಾದ ಚೈತನ್ಯರೂಪ ಶಿವಯೋಗಾನುಭವವನ್ನು ಹೊಂದು. ಈ ಮೂರು ಪ್ರಕಾರದ ಸಾಧನಗಳಿಂದ ಜ್ಞಾನವು ಉದಯಿಸುವದು. ಇವುಗಳ ಶ್ರವಣ-ಮನನ-ಧ್ಯಾನಗಳನ್ನು ತಪ್ಪದೆ ಮಾಡು. ವಾಕ್ಯಾರ್ಥದ ಭೋದಯೇ ಶ್ರವಣವೆನಿಸುವದು. ಈ ಅರ್ಥವನ್ನು ಜಾಣತನದಿಂದ ಚನ್ನಾಗಿ ಮಂಡನ ಮಾಡುವದೇ ಮನನವೆನಿಸುವದು. ಸಗುಣಾತ್ಮಕ ಪ್ರಾಣಲಿಂಗ ಚಿಂತನೆಯೇ ಧ್ಯಾನವೆನಿಸುವದು. ಪರಮಾತ್ಮ ಸ್ವರೂಪವಾದ ಲಿಂಗದಲ್ಲಿ ನಿರಂತರ ಲೀನವಾಗಿರುವ ಸ್ಥಿರಬುದ್ಧಿಯೇ ಜಪಯಜ್ಞವೆನಿಸುವದು. ನಾನೇ ಬ್ರಮ್ಮನು. ಬ್ರಮ್ಮನೇ ನಾನು ಎಂದು ಅಂತರಂಗದಲ್ಲಿ ಸಹಜವಾಗಿ ಧ್ಯಾನಪರವಾಗಿರುವ ಮನಸ್ಸಿನ ಸ್ಥಿತಿಯೇ ಸಮಾಧಿಯೆನಿಸುವದು. ಆದ್ದರಿಂದ ಬಸವೇಶ್ವರನೇ, ಮನೋವಾಕ್ಕಾಯಗಳಿಂದ ಸರ್ವದರಲ್ಲಿಯೂ ಏಕತ್ವಾನುಸಂಧಾನ ಪರನಾಗಿ * ಅನ್ಯದರ ಕಡೆಗೆ ಲಕ್ಷ್ಯವಿಡದೆ ಲಿಂಗಸ್ವರೂಪದಲ್ಲಿ ಏಕಾಗ್ರ ಚಿತ್ತದಿಂದ ಧಾನ್ಯಮಾಡು.

---

* ಅಂದರೆ ಲಿಂಗಾನುಸಂಧಾನಪರನಾಗಿ ಎಂದು ತಿಳಿಯಬೇಕು. ಜಗತ್ತು ಲಿಂಗಮಯವಾಗುವಬಗೆ ಹೇಗೆಂದರೆ—"ಇಂದ್ರಿಯಗಳಿಗೆ ವಿಷಯಗಳು ಗೋಚರವಾಗುವವು. ವಿಷಯಗಳಿಂದ ಜನರಿಗೆ ಬಂಧನವುಂಟಾಗುವದು. ಆದ್ದರಿಂದ ಇಂದ್ರಿಯಗಳು ವಿಷಯಾಕಾರವಾಗದೆ ಲಿಂಗಾಕಾರವನ್ನು ಹೊಂದಬೇಕಾದರೆ ಬಾಹ್ಯದಲ್ಲಿ ಇಷ್ಟಲಿಂಗಪೂಜೆಯು ಅವಶ್ಯವಾಗಿಬೇಕು. ಇಷ್ಟಲಿಂಗದಲ್ಲಿ ದೃಷ್ಟಿಯನ್ನೂ ಅದರ ಪೂಜೆಯಲ್ಲಿ ಕೈಗಳನ್ನೂ ತೊಡಕಿಸಿ, ಮನಸ್ಸಿನಲ್ಲಿ ಲಿಂಗಧ್ಯಾನಪರನಾಗಿ ನಾಲಿಗೆಯಿಂದ ಶಿವಮಂತ್ರೋಚ್ಚಾರಣೆ ಶಿವಸ್ತುತಿ ಮುಂತಾದ್ದನ್ನು ಮಾಡುತ್ತ ಕಿವಿಗಳಿಂದ ಶಿವಕಥೆಗಳನು ಕೇಳುತ್ತ ಭಾವದಲ್ಲಿ ಲಿಂಗಾನಂದ ಭರಿತನಾದ ಲಿಂಗನಿಷ್ಟನಿಗೆ ಮಾತ್ರ ಸರ್ವ ಜಗತ್ತು ಲಿಂಗಮಯವಾಗಿ ತೋರುವದು. ಅಂದರೆ ಜಗತ್ತನ್ನು ಲಿಂಗದೃಷ್ಟಿಯಿಂದ ನೋಡಿದರೆ ಮಾತ್ರ ಅದು ಲಿಂಗಮಯವಾಗುವದಲ್ಲದೆ ವಿಷಯ ದೃಷ್ಟಿಯಿಂದ ನೋಡಿದರೆ ಆಗಲಾರದು ಹೀಗೆ ಜಗತ್ತು ಲಿಂಗಮಯವಾಗಲಿಕ್ಕೆ ಇಷ್ಟಲಿಂಗ ಪೂಜೆಯು ಅವಶ್ಯವಾಗಿ ಬೇಕಾಗುತ್ತದೆ. ಇಷ್ಟಲಿಂಗ ಪೂಜೆಯಿಲ್ಲದೆ ಉಳಿದೆರಡು ಪ್ರಾಣಲಿಂಗ ಭಾವಲಿಂಗಗಳ ಪೂಜೆಯಿಂದ

ಹೀಗೆ ವರ್ತಿಸುವ ಶಿವಯೋಗಿಯು ಪರಮಸ್ವತಂತ್ರನು. ಯಾವನು ತನ್ನ ಹೃದಯದಲ್ಲಿರುವ ಚಿತ್ಸ್ವರೂಪವಾದ ದಿವ್ಯಲಿಂಗವನ್ನು ಗೊತ್ತುಮಾಡಿಕೊಳ್ಳಲಾರನೋ, ಅವನಿಗೆ ಶಿವನು ದೊರಕನು. ಇದಕ್ಕಾಗಿ ಬಾಹ್ಯಕರ್ಮಗಳನ್ನು ಇಷ್ಟ ಲಿಂಗಕ್ಕರ್ಪಿಸಿ ನಿಷ್ಕಾಮ ಭಕ್ತಿಯಿಂದ ನಿರ್ಮಲ ಲಿಂಗವನ್ನು ಶೋಧಮಾಡಬೇಕು. ವಿಷಯಗಳಲ್ಲಿ ವಿಹರಿಸುವ ಪಂಚೇಂದ್ರಿಯಗಳನ್ನು ತನ್ನ ವೈರಾಗ್ಯ ಬಲದಿಂದ ನಿಗ್ರಹಿಸಿ ಮನಸ್ಸನ್ನು ಪರಮಾತ್ಮ ಸ್ವರೂಪ ಲಿಂಗದ ಕಡೆಗೆ ಒಲಿಸಲು, ಅದಕ್ಕೆ ನಿಶ್ಚಲ ಸಮಾಧಿಯೆನ್ನುವರು. ಮನಸ್ಸಿನ ಚಾಂಚಲ್ಯವು ನಾಶಹೊಂದಿದ ಹೊರ್ತು ಚಿತ್ಸ್ವರೂಪದ ಅನುಭವವಾಗಲಾರದು. ಲಗಾಮು ಜಗ್ಗಿಹಿಡಿದರೆ ಕುದುರೆಯು ನಿಲ್ಲುವಂತೆ, ಪ್ರಾಣವಾಯುವನ್ನು ಬಂಧಿಸಿದರೆ ಮನಸ್ಸು ಸ್ಥಿರವಾಗಿ ನಿಲ್ಲುವದು. ಕಣ್ಣಿನ ವಿಷಯ ವ್ಯಾಪಾರಗಳು ಇಷ್ಟಲಿಂಗ ನಿರೀಕ್ಷಣೆಯಿಂದ ನಿಂತಕೂಡಲೆ ಮನಸ್ಸಿನ ವ್ಯಾಪಾರಗಳು ಸಹ ಅಳಿಯುವವು. ಮನಸ್ಸು ನಿರ್ವಿಷಯವಾದದ್ದೇ ಪ್ರಾಣವಾಯು ನಿರೋಧ. ಈ ರೀತಿಯಿಂದ ವೀರಶೈವನು ತನ್ನ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಆತ್ಮಜ್ಞಾನದ ಯಥಾರ್ಥಾನುಭವವನ್ನು ಉಪಭೋಗಿಸುವನು.

ಮಾಯೆಯೇ ಮನಸ್ಸು ಮನಸ್ಸಿನ ವಿಸ್ತಾರವೇ ವಾಯುವು. ಈ ವಾಯುವು ಹರಿದಾಡಿ ಶರೀರವನ್ನು ಕಂಗೆಡಿಸಿ ಮನಸ್ಸಿಗೆ ಪೀಡೆಯನ್ನು ಕೊಡುವದು. ಆದ್ದರಿಂದ ಬಸವೇಶ್ವರನೆ, ಯಾವನು ತನ್ನ ಮನಸ್ಸನ್ನು ವಶಮಾಡಿಕೊಂಡಿರುವನೋ ಅವನೇ ಪರಾಕ್ರಮಿಯೂ ಭಕ್ತಶ್ರೇಷ್ಠನೂ ಆಗಿದ್ದಾನೆ. ಮನಸ್ಸೆಂಬುದು ಒಂದು ವಿಚಿತ್ರವಾದ ಪಕ್ಷಿಯು; ನಮ್ಮೆರಡು ಕಂಬುಗಳು ಅದರ ಎರಡು ಪಾದಗಳು; ಈಡಾ ಪಿಂಗಳಗಳೆಂಬೆರಡು ನಾಡಿಗಳಲ್ಲಿ ಸಂಚರಿಸುವ ಪ್ರಾಣವಾಯುಗಳು ಅದರೆರಡು ರೆಕ್ಕೆಗಳು. ಆದ್ದರಿಂದ ಕಂಬುಗಳ ಎಡೆಯಾಟವನ್ನು ನಿಲ್ಲಿಸುವದು ಮನಸ್ಸಿನ ಚಾಂಚಲ್ಯವನ್ನು ನಿಲ್ಲಿಸುವ ಉಪಾಯಗಳಲ್ಲಿ ಮುಖ್ಯವಾಗಿದೆ. ಯಾಕಂದರೆ ದೃಷ್ಟಿಯು ನಿಶ್ಚಲವುಳ್ಳದ್ದಾದರೆ ಮನಸ್ಸು ಕೂಡಲೆ ಚಂಚಲತ್ವವನ್ನು ಬಿಡು

---

ವದು ಸಾಧ್ಯವಲ್ಲ. ಇಷ್ಟಲಿಂಗ ಪೂಜೆಯೊಳಗೆ ಕಣ್ಣುಗಳು ಲಿಂಗನಿರೀಕ್ಷಣೆಯಲ್ಲಿ ಆಸಕ್ತವಾಗಲು ಮನಸ್ಸು ಲಿಂಗಧ್ಯಾನದಲ್ಲಿ ಲೀನವಾಗುವದು. ಇದೇ ಪ್ರಾಣಲಿಂಗ ಪೂಜೆಯೆನಿಸುವದು. ಲಿಂಗ ಪೂಜೆಯಿಂದ ಆನಂದಪರವಶನಾಗಿರುವದೇ ಭಾವಲಿಂಗ ಪೂಜೆಯೆನಿಸುವದು. ಇಷ್ಟಲಿಂಗ ಪೂಜೆಯಿಲ್ಲದೆ ಉಳಿದೆರಡು ಲಿಂಗಗಳ ಪೂಜೆಯು ಘಟಸದು.

ವದು. ಚಲಿಸುವ ನೋಟವನ್ನೂ ತದ್ವಾರಾ ಮನಸ್ಸನ್ನೂ ಕಟ್ಟಿಹಾಕಲಿಕ್ಕೆ ಇಷ್ಟ ಲಿಂಗ ಪೂಜೆಯು ಅವಶ್ಯವದೆ ಹೀಗೆ ಚಿತ್ತವು ನಿಶ್ಚಲವುಳ್ಳದ್ದಾಗಲು, ಕೂಡಲೆ ಅಸದೃಶವಾದ ಚಿದ್ಬಿಂದು ರತ್ನವು (ಶಿವಚೈತನ್ಯವು) ಸ್ಫುರಿಸುವದು. ಮನಸ್ಸು ಶಿವಚೈತನ್ಯದಲ್ಲಿ ಸ್ಥಿರವಾದರೆ ಕಾಲ ಮತ್ತು ಕರ್ಮಗಳಿಗೆ ಮೂಲಕಾರಣವಾದ ಮಾಯೆಯೂ ಅದರ ಕಾರ್ಯಗಳಾದ ಕಾಲಕರ್ಮಗಳೂ ಸಂಪೂರ್ಣವಾಗಿ ನಾಶ ಹೊಂದುವವು. ಆದ್ದರಿಂದ ಬಸವೇಶ್ವರ, ನಿನ್ನ ಮನಸ್ಸನ್ನು ನೀನು ಪ್ರಾಣಲಿಂಗಾ ನುಸಂಧಾನದಲ್ಲಿ ಸ್ಥಾಪಿಸು. ಅಂಗವೆಂಬ ಭೂಮಿಯಲ್ಲಿ ಪ್ರಸಾದವೆಂಬ ನಿರ್ಮಲ ವಾದ ಬೀಜವನ್ನು ಅಂಗಸಂಬಂದವಾದ ಲಿಂಗದ ನೆನಹಿನಿಂದ ಬಿತ್ತಿ, ಪಾದೋ ದಕದಿಂದ ಅದನ್ನು ಬೆಳಸಿ ಅಂತಹ ವೃಕ್ಷದಿಂದುಂಟಾದ ನಿರ್ಮಲ ಜ್ಞಾನವೆಂಬ ಫಲವನ್ನು ಭೋಗಿಸುತ್ತ ಅಂಗ ಗುಣಗಳನ್ನು ಅಳಿವಾತನೆ ಲಿಂಗಾವಧಾನಿಯೆನಿ ಸುವನು. ಆಧಾರಾದಿ ಆರು ಚಕ್ರಗಳ ಸ್ವರೂಪವನ್ನು ಗೊತ್ತುಮಾಡಿಕೊಂಡು ಅವುಗಳನ್ನು ದಾಟಿ ಆತ್ಮಜ್ಞಾನಿಯಾದ ವೀರಶೈವನು ಷಟ್‌ಸ್ಥಳ ವಿಚಾರವನ್ನು ಮಾಡಬೇಕು. ಇಂತಹ ಷಟ್‌ಸ್ಥಳ ಜ್ಞಾನಸಂಪನ್ನನೇ ಶಿವನ ವಿಷಯವಾಗಿ ವಿಮಲಜ್ಞಾನವನ್ನೂ ನಿಸ್ಸೀಮ ಭಕ್ತಿಯನ್ನೂ ದೊರಕಿಸಲು ಸಮರ್ಥನಾಗುತ್ತಾನೆ. ಲಿಂಗಾಂಗ ಸಾಮರಸ್ಯ ಜ್ಞಾನಕ್ಕೆ—ಶಿವತತ್ವಸಾಕ್ಷಾತ್ಕಾರಕ್ಕೆ—ಶಿವೈಕ್ಯತೆಗೆ—ಸ್ವಸ್ವ ರೂಪ ಜ್ಞಾನಸಂಪಾದನೆಗೆ ಶಿವಸಾಯುಜ್ಯರೂಪ ಮುಕ್ತಿಗೆ ಈ ಷಟ್‌ಸ್ಥಲ ವಿಚಾ ರವೇ ಮುಖ್ಯವಾಗಿದೆ.

ಇಂತಹ ಷಟ್‌ಸ್ಥಳ ಜ್ಞಾನಸಂಪನ್ನನಾದ ಭಕ್ತನೇ ನನಗೆ ಅತ್ಯಂತ ಪ್ರಿಯಕರನಾಗಿದ್ದಾನೆ. ಆದ್ದರಿಂದ ಬಸವೇಶ್ವರನೆ, ನೀನು ಶಿವಭಕ್ತಿಯಿಂದ ಎಂದೂ ಚಲಿಸಬೇಡ. ಅದರಲ್ಲಿ ನೀನು ಪರಿಪೂರ್ಣನಾಗಿರು. ಮನೋವೃತ್ತಿಗಳನ್ನು ಕೆಳ ಗಿಳಿಸದೆ ಊರ್ಧ್ವಮಾರ್ಗದಿಂದ ಒಯ್ದು ಅವುಗಳನ್ನು ನಿರಂಜನ ಸ್ಥಳಕ್ಕೆ ಮುಟ್ಟಿಸು. ಚಿಂತೆಯನ್ನು ನೀಗಿ ಸದಾ ಇಷ್ಟಲಿಂಗದಲ್ಲಿ ದೃಷ್ಟಿಯನ್ನೂ ಮನ ವನ್ನೂ ಕೀಲಿಸು; ಇದರಿಂದುಂಟಾಗುವ ಸ್ವರೂಪಾನಂದಾನುಭವ ಸುಖದಲ್ಲಿ ವಿಹ ರಿಸು. ನಾನು ಈ ವರೆಗೆ ಹೇಳಿದ್ದನ್ನು ಮರೆಯದೆ ಉತ್ತರೋತ್ತರ ಗತಿಯನ್ನು ಸಂಪಾದಿಸುತ್ತ ಹೋದರೆ ಅದೇ ಸಾರತರವಾದ ಲಿಂಗೈಕ್ಯ ಪದವಿಯೆನಿಸುವದು.

ಹೀಗೆ ಅಲ್ಲಮಪ್ರಭುವು ಬಸವೇಶ್ವರನಿಗೆ ಪ್ರಾಣಲಿಂಗಾನುಸಂಧಾನ ಕ್ರಮವನ್ನು + ಉಪದೇಶ ಮಾಡಿ, ನಾನು ಈಗ ಭಕ್ತೋದ್ಧಾರಾರ್ಥ ಅನ್ಯತ್ರ ಸಂಚರಿಸತಕ್ಕವನಿರುವೆನು; ನಿನ್ನ ಅನುಭವ ಪರೀಕ್ಷಾರ್ಥವಾಗಿ ಪುನಃ ಇಲ್ಲಿಗೆ ಕೆಲವು ದಿನಗಳ ಮೇಲೆ ಬರುವೆನು ಎಂದು ಹೇಳಿ ಬಸವೇಶ್ವರನನ್ನೂ ಉಳಿದ ಶಿವಭಕ್ತರನ್ನೂ ಆಶೀರ್ವದಿಸಿ ಲೀಲೆಯಿಂದ ಮುಂದೆ ಸಾಗಿದನು.

---

## ೧೩ ನೆಯ ಅಧ್ಯಾಯ ಸಂಪೂರ್ಣಂ.

---

× ಈ ಅಧ್ಯಾಯದಲ್ಲಿ ಕಂಡ ವಿಷಯವು ಅತಿಗಹನವಾದುದರಿಂದ ಅದು ವಾಚಕರಿಗೆ ಸುಲಭವಾಗಿ ತಿಳಿಯಬೇಕೆಂಬ ಹೇತುವಿನಿಂದ ಮ. ರಾ. ರಾ. ಪಾವಟೇ ಸಿದ್ಧರಾಮಪ್ಪನವರು " ಏಕೋತ್ತರಶತ ಸ್ಥಳಗಳ ವಿಷಯವಾಗಿ ಶಿವಪ್ರೇಯಸೀ ವ್ಯಾಖ್ಯಾನಮಾಲೆಯಲ್ಲಿ ಪ್ರಾಣಲಿಂಗಿಸ್ಥಳ ಪ್ರಾಣಲಿಂಗಾರ್ಚನಾಸ್ಥಳ ಇವುಗಳ ಮೇಲೆ ಮಾಡಿದ ಉಪನ್ಯಾಸಗಳ " ಸಾರಾಂಶವನ್ನು ಇಲ್ಲಿ ಕೊಡುತ್ತೇವೆ—

" ಪ್ರಾಣಲಿಂಗಿಯ ಸ್ಥಳವು ಚನ್ನಾಗಿ ತಿಳಿಯಬೇಕಾದರೆ ಪ್ರಸಾದಿ ಸ್ಥಳದ ಮಹತ್ವವನ್ನು ಒಳಿತಾಗಿ ವಿಚಾರಿಸಬೇಕಾಗುತ್ತದೆ. ಯಾಕಂದರೆ, ಪ್ರಸಾದವು ಉತ್ಪನ್ನವಾಗುವ ಕ್ರಮವನ್ನು ನೋಡಲು ಅದಕ್ಕಾಗಿ ಇಷ್ಟಲಿಂಗವು ಅವಶ್ಯವಾಗಿ ಬೇಕೆಂತಲೂ ಎಷ್ಟು ಜ್ಞಾನಿಯಾದರೂ ಅದನ್ನು ತ್ಯಜಿಸಕೂಡದೆಂತಲೂ ಸ್ಪಷ್ಟವಾಗುವದು.

ಸ್ವಪ್ನದಲ್ಲಿ ಕಂಡ ಸುಖ-ದುಃಖಗಳು ಜಾಗ್ರತಾವಸ್ಥೆಯಲ್ಲಿ ಸುಳ್ಳಾಗುವ ಮೂಲಕ ಅವುಗಳಿಂದ ಯಾರಿಗೂ ತೊಂದರೆ ಇಲ್ಲದಿರುವಂತೆ, ವಿಷಯಗಳು ಸ್ವಾಭಾವಿಕವಾಗಿ ಸುಳ್ಳು ಇದ್ದುದರಿಂದ ಅವು ಯಾರಿಗೂ ಬಾಧಕವಲ್ಲವೆಂದು ಶ್ರೀಶಂಕರಾಚಾರ್ಯರ ಮತವುಂಟು. ಮತ್ತು ಅವರು ಶರೀರವಿರುವ ವರೆಗೆ ಜೀವಾತ್ಮ ಪರಮಾತ್ಮರಿಗೆ ವ್ಯವಹಾರ ದೆಶೆಯಲ್ಲಿ ಭೇದವಿರುವದಾಗಿ "ಅಧಿಕಂತು ಭೇದನಿರ್ದೇಶಾತ್" ಎಂಬ ಬ್ರಹ್ಮಸೂತ್ರದಲ್ಲಿ ಒಪ್ಪಿಕೊಂಡಿದ್ದಾರೆ. ಆದರೂ ವಿಷಯಗಳು ಸುಳ್ಳೆಂಬ ಮತವು ಮಂದಮತಿಗಳಿಗೆ ಭ್ರಾಂತಿಕಾರಕವದೆ. ಈ ವಿಷಯದಲ್ಲಿ ವೀರಶೈವ ಸಿದ್ಧಾಂತವೇನಂದರೆ—ಜಗತ್ತೂ ಅದರಲ್ಲಿಯ ವಿಷಯಗಳೂ ನಿಜವಾದವುಗಳು. ಶಂಕರಾಚಾರ್ಯರ ಮತದಂತೆ ಜಗತ್ತು ಮಿಥ್ಯವಾಗದೆ ಪರಮೇಶ್ವರನ ಒಂದು ಪ್ರಕಾರದ ಶಕ್ತಿಯಾಗಿದೆ. ಜಗತ್ತು ಮಿಥ್ಯವೆಂಬದಾಗಿ ಹೇಳಿದರೆ,

## ೧೪ನೆಯ ಅಧ್ಯಾಯ.






ಪ್ರಭುದೇವರು ಬಸವೇಶ್ವರ ಮೊದಲಾದ ಸರ್ವ ಭಕ್ತರನ್ನು ಕೃಪಾದೃಷ್ಟಿಯಿಂದ ನೋಡಿ, ಅವರನ್ನು ಕೃತಕೃತ್ಯರಾಗಿ ಮಾಡಿ, ಅನ್ಯಪ್ರದೇಶವನ್ನು ಕುರಿತು ಗಮಿ

---

ಈಶ್ವರನ ಸತ್ಯಸಂಕಲ್ಪಕ್ಕೆ ಹಾನಿಬರುವದರಿಂದ ವಿಷಯುಗಳು ಸತ್ಯವೆಂದು ತಿಳಿಯ ತಕ್ಕದ್ದು. ಹೀಗೆ ತಿಳಿದಬಳಿಕ ಜೀವನು ತನ್ನಲ್ಲಿರುವ ಕುಚಿತ್ತ-ಕಬುದ್ಧಿ ಮುಂತಾ ದವುಗಳಿಂದ ವಿಕಾರವನ್ನು ಹೊಂದಿ ಬದ್ಧನಾಗುವನು. ಯಾಕಂದರೆ, ವಿಷಯುಗ ಳನ್ನು ನೇತ್ರವು ನೋಡಿ ತದನಂತರ ಮನಸ್ಸು ಅವುಗಳನ್ನು ಚಿಂತಿಸುವದಾದರೆ, ಆ ವಿಷಯುಗಳ ತದಾಕಾರವು ಕಣ್ಣಿನಲ್ಲಿಯೂ ಮನಸ್ಸಿನಲ್ಲಿಯೂ ಉಳಿಯುವದು. ವಿಷಯುಗಳನ್ನು ಅವುಗಳ ಸ್ವಾಭಾವಿಕ ಸ್ಥಿತಿಯಲ್ಲಿಯೇ ಭೋಗಿಸಿದರೆ ಅವು ಜೀವ ನಿಗೆ ನಿಶ್ಚಯವಾಗಿ ಬಂಧಕಾರಕವಾಗುವವು. ಅಂದರೆ, ಅವನನ್ನು ಪದೆಪದೆ ಜನನ ಮರಣಾತ್ಮಕವಾದ ಸಂಸಾರ ಚಕ್ರದಲ್ಲಿ ತಿರುಗುವಂತೆ ಮಾಡುವವು. ಆದರೆ ವಿಷಯುಗಳಲ್ಲಿರತಕ್ಕ ಪೂರ್ವಸ್ಥಿತಿಯನ್ನು — ಮಾಯಾಂಶವನ್ನು - ವಿಷಯ ಭಾವವನ್ನು ಕಳೆದು ಪ್ರಸಾದವನ್ನಾಗಿ ಮಾಡಲು ಅವು ಬಂಧುಗಳಾಗುವದಿಲ್ಲ. ಹೀಗೆ ವಿಷಯುಗಳು ಪ್ರಸಾದವಾಗದವಿನಾ ಅವುಗಳ ಸಂಪರ್ಕವು ಹೋಗುವದಿಲ್ಲ. ಹಾಲು ಇದ್ದದ್ದು ಮೊಸರಾಗಬೇಕಾದರೆ ಹೆಪ್ಪುಹಾಕುವ ಕ್ರಿಯೆಯೂ, ಕಬ್ಬಿಣವು ಬಂಗಾರವಾಗಬೇಕಾದರೆ ಪರುಷ ಸ್ಪರ್ಶ ಕ್ರಿಯೆಯೂ ಮತ್ತು ಕೆಲವು ಸಿದ್ಧರ ಅಭಿಪ್ರಾಯದಂತೆ ಗಿಡ ಮೂಲಿಕೆಗಳ ರಸದ ಪ್ರಯೋಗ ಕ್ರಿಯೆಯೂ ಅವಶ್ಯವಿರು ವಂತೆ ವಿಷಯುಗಳು ಸ್ವರೂಪದಲ್ಲಿ ಬದಲಾಗಬೇಕಾದರೆ ಒಂದು ವಿಶಿಷ್ಟ ಕ್ರಿಯೆಯು—ಅಂದರೆ ಸತ್ಕ್ರಿಯಾ ಸದಾಚಾರ ಮುಂತಾದವುಗಳು ಅವಶ್ಯವಾಗಿ

ಸಬೇಕೆಂದು ಉದ್ದೇಶಿಸಿ—"ಎಲೈ ಭಕ್ತೋತ್ತಮರೆ, ಇನ್ನು ಮುಂದೆ ನಾನು ಸಂಚಾರಮಾಡತಕ್ಕವನಿದ್ದೇನೆ. ನಾನು ಉಪದೇಶಿಸಿದಂತೆ ಲಿಂಗಚಿಂತನೆಯಲ್ಲಿ ನಿಮ್ಮ ಮನಸ್ಸು ಸ್ಥಿರವಾಗಿರಲಿ. ಗುರುಲಿಂಗ ಜಂಗಮಪೂಜೆಯಲ್ಲಿ ತತ್ಪರರಾಗಿರಿ. ಧರ್ಮವಂತರಾದ ಸಜ್ಜನರೊಂದಿಗೆ ಸಂಗವನ್ನು ಬೆಳಿಸಿರಿ. ಪರಮಾರ್ಥ ತತ್ವದ

---

ಬೇಕು. ಮನುಷ್ಯನಲ್ಲಿ ಕುಚಿತ್ತ-ಕುಮನಸ್ಸು ಮುಂತಾದವುಗಳಿರುವಂತೆ, ಸುಚಿತ್ತ-ಸುಮನಸ್ಸು ಮೊದಲಾದವುಗಳು ಇರುತ್ತವೆ. ಸುಚಿತ್ತ ಮೊದಲಾದವುಗಳು ಶಿವನ ಶಕ್ತಿಗಳಿದ್ದು ಅವುಗಳಿಂದ ಮನುಷ್ಯನು ಸದಾಚಾರಿಯಾಗುತ್ತಾನೆ. ಈ ಸದಾಚಾರವು ಅವನಲ್ಲಿ ದೃಢವಾಗಿ ನೆಲಗೊಳ್ಳಬೇಕಾದರೆ ಅವನು ಸಂಸಾರದಲ್ಲಿ ನಿವೃತ್ತಿಯನ್ನು ಹೊಂದಿ ಸ್ವತಃ ಸದ್ರೂಪನಾಗಬೇಕು ಸಂಸಾರ ನಿವೃತ್ತಿಯು ಶಿವಭಕ್ತಿ ಶಿವಪೂಜಾ ಮೊದಲಾದ ಕ್ರಿಯೆಗಳಿಂದಾಗುವದಲ್ಲದೆ ಯಜ್ಞಾದಿಕರ್ಮಗಳಿಂದಾಗುವದಿಲ್ಲ. ಈ ಸದಾಚಾರ ಕ್ರಿಯೆಗಳಿಗೆ ಇಷ್ಟಲಿಂಗಪೂಜೆಯು ಮುಖ್ಯಾಧಾರವಾಗಿದೆ, ಇಷ್ಟಲಿಂಗಕ್ಕೆ ಕ್ರಿಯಾಲಿಂಗವೆಂದು ಹೇಳಿದ್ದಾರೆ. ಯಾಕಂದರೆ, ಇಷ್ಟಲಿಂಗವು ಸರ್ವಕ್ರಿಯೆಗಳ ಒಬ್ಬುಳಿಯಾಗಿದೆ. ಇಷ್ಟಲಿಂಗ ಪೂಜೆಯಲ್ಲಾಸಕ್ತವಾದ ಹಸ್ತ-ಮನ-ಇಂದ್ರಿಯ ಮೊದಲಾದವುಗಳಲ್ಲಿ ವಿಷಯಗಳ ಸ್ವಾಭಾವಿಕ ರೂಪವನ್ನು ಕಳೆದು ಅವುಗಳನ್ನು ಪ್ರಸಾದವಾಗಿ ಮಾಡುವ ಶಕ್ತಿಯುಂಟಾಗಿದೆ. ಮತ್ತು ಶಿವಮಂತ್ರೋಚ್ಚಾರಣೆಯಿಂದ ಸಹ ಇದು ಘಟಿಸುವದು. ವಿಷಯಗಳನ್ನು ವಿಷಯಗಳಂತೆ ಭುಂಜಿಸಿದರೆ ಜೀವನು ಜೀವನಾಗಿಯೇ ಉಳಿಸುವನು. ಆದರೆ ಅವುಗಳಲ್ಲಿ ಸೂಕ್ಷ್ಮವಾಗಿ ಅಡಗಿಕೊಂಡಿರುವ ಶಿವಚೈತನ್ಯವನ್ನು ಕಂಡು ಅದನ್ನು ಲಿಂಗಪ್ರಸಾದವಾಗಿ ಅನುಭೋಗಿಸಿದರೆ, ಜೀವನೇ ಶಿವನಾಗುವನು. ಪ್ರಸಾದವು ಘಟಿಸಬೇಕಾದರೆ ಇಷ್ಟ-ಪ್ರಾಣ-ಭಾವ ಹೀಗೆ ಮೂರೂ ಲಿಂಗಗಳು ಅವಶ್ಯವಾಗಿ ಬೇಕು. ಯಾಕಂದರೆ ಸರ್ವ ಪದಾರ್ಥಗಳು—ವಿಷಯಗಳು—ರೂಪ-ರುಚಿ-ತೃಪ್ತಿ ಈ ಮೂರು ಗುಣಗಳಿಂದ ಕೂಡಿಪುತ್ತವೆ. ಅವುಗಳನ್ನು ಲಿಂಗಕ್ಕರ್ಪಿಸುವಾಗ ಅವುಗಳ ರೂಪವನ್ನು ಇಷ್ಟಲಿಂಗಕ್ಕೆ ರುಚಿಯನ್ನು ಪ್ರಾಣಲಿಂಗಕ್ಕೆ, ತೃಪ್ತಿಯನ್ನು ಭಾವಲಿಂಗಕ್ಕೆ ಅರ್ಪಿಸಬೇಕು. ಹೀಗೆ ಮೂರು ಲಿಂಗಗಳಿಗೆ ಅರ್ಪಿತವಾದದ್ದೇ ಪ್ರಸಾದವೆನಿಸುವದು. ಇಷ್ಟಲಿಂಗವಿಲ್ಲದಿದ್ದರೆ ವಿಷಯಗಳು ಕೆಲವು ಅಂಶದಲ್ಲಿ ಶುದ್ಧವಾಗಿಯೂ ಕೆಲವು ಅಂಶದಲ್ಲಿ ಅಶುದ್ಧವಾಗಿಯೂ ಉಳಿಯುವದರಿಂದ ಪ್ರಸಾದವಾಗಲಾರವು. ವಿಷಯಗಳಲ್ಲಿ ಸ್ವಾಭಾವಿಕವಾಗಿರುವ ಭಂಧಕತ್ವವನ್ನು ಶರಣನು (ವೀರಶೈವರು) ತೆಗೆದುಹಾಕಿ ಅವುಗಳನ್ನು ಲಿಂಗಾರ್ಪಿತದಿಂದ ಪ್ರಸಾದವಾಗಿ ಮಾಡುವದರಿಂದ, ಅವನಿಗೆ ಜಗತ್ತು ಯಾವ ಪ್ರಕಾರದಿಂದಲೂ ಪ್ರತಿಬಂಧಕವಾಗುವದಿಲ್ಲ.

ಧ್ಯಾನ್ಯದಲ್ಲಿ ಮಗ್ನರಾಗಿ ಸ್ವರೂಪಜ್ಞಾನ ಮಾಡಿಕೊಂಡು ಸುಖದಿಂದ ಕಾಲಕ್ರಮ್ಣ ಣ ಮಾಡಿರಿ. ಭೂಮಿಯಲ್ಲಿರತಕ್ಕ ಸರ್ವಭಕ್ತರಿಗೆ ಧರ್ಮೋಪದೇಶ ಮಾಡಿ ಅವ

ಇಷ್ಟಲಿಂಗವನ್ನು ಪರ್ಯಾಯದಿಂದ ಬಾಹ್ಯಲಿಂಗವೆಂದು ಹೇಳಬೇಕಲ್ಲದೆ ನಿಜವಾಗಿ ಅದು ಬಾಹ್ಯಲಿಂಗವಲ್ಲ. ಅಂತರ್ಗತವಾದ ತಾಯಿಯ ಮಮತೆಯೇ ಬಹಿರಂಗದಲ್ಲಿ ಮಗನ ಮುದ್ದಾಡುವ ಕ್ರಿಯೆಯಾದಂತೆ, ಒಳಗಿದ್ದ ಶಿವಸುಖವೇ ಬಹಿರ್ಗರಿಸಿ ಬ್ಯಾಹದಲ್ಲಿ ಇಷ್ಟಲಿಂಗವಾಗಿದೆ. ಇಂತಹ ಇಷ್ಟಲಿಂಗ ಪೂಜಾದಿಕ್ರಿಯೆಗಳಿಂದ ಭಕ್ತನು ಶುದ್ಧನಾಗಿ ಅಂತರಂಗದಲ್ಲಿರುವ ಚಿತ್ಕಳೆಯನ್ನು ನೋಡಲು ಸಮರ್ಥನಾಗುತ್ತಾನೆ. ಇಷ್ಟಲಿಂಗದ ನಿರೀಕ್ಷಣದಿಂದ ಕಂಣಿನಲ್ಲಿ ತದನಂತರ ಮನಸ್ಸಿನಲ್ಲಿ ಸರ್ವತ್ರ ಇಷ್ಟಲಿಂಗದ ವ್ಯಾಪ್ತಿಯುಂಟಾದದ್ದೇ ಪ್ರಾಣಲಿಂಗವು

## ಇನ್ನು ಪ್ರಾಣಲಿಂಗಾನು ಸಂಧಾನಕ್ರಮ.

ಮನುಷ್ಯರಲ್ಲಿರತಕ್ಕ ಸರ್ವ ಇಂದ್ರಿಯಗಳು ಪ್ರಾಣಾಪಾನ ವಾಯುಗಳ ಮೇಲೆ ಅವಲಂಬಿಸಿರುತ್ತವೆ. ಇಂದ್ರಿಯಗಳನ್ನು ಚಂಚಲತ್ವದಿಂದ ಬಿಡಿಸಿ ಸ್ಥಿರಗೊಳಿಸಬೇಕಾದರೆ, ಅವುಗಳಿಗೆ ಆಧಾರ ಭೂತವಾದ ಪ್ರಾಣವಾಯು ಮುಂತಾದವುಗಳನ್ನು ನಿಗ್ರಹಿಸಬೇಕಾಗುತ್ತದೆ. ಇದಕ್ಕಾಗಿ ಪ್ರಾಣಾಯಾಮ ಮೊದಲಾದ ಅಷ್ಟಾಂಗಯೋಗ ಸಾಧನೆಗಳು ಹೇಳಲ್ಪಟ್ಟವೆ. ಮತ್ತು ಮನುಷ್ಯರ ಹೃದಯಕಮಲ ಮೊದಲಾದವುಗಳಲ್ಲಿ ಆಧಾರಚಕ್ರ ಮೊದಲಾದ ಆರು ಚಕ್ರಗಳು ಹೇಳಲ್ಪಟ್ಟವೆ. ಪ್ರಾಣಾಯಾಮ ಮೊದಲಾದ ಸಾಧನಗಳಿಂದ ಹೃತ್ಕಮಲದಲ್ಲಿ ತೋರತಕ್ಕ ಜ್ಯೋತಿರ್ಲಿಂಗವೇ ಪ್ರಾಣಲಿಂಗವು ಇದರಲ್ಲಿ ವಿಹರಿಸುವವನೇ ಪ್ರಾಣಲಿಂಗಿಯು. ನಾನು ಇದ್ದೇನೆಂಬ ಸದ್ರೂಪ ಪರಾಮರ್ಶವೇ ಪ್ರಾಣಲಿಂಗಾನುಸಂಧಾನವೆಂದು ಹೇಳಲ್ಪಡುವದು. ಚಿತ್ತವನ್ನು ಸದ್ಭಕ್ತಿ–ಸದಾಚಾರಗಳಿಂದ ನಿಗ್ರಹಿಸುವದು ಕಠಿಣವಿರುವದರಿಂದ ಪ್ರಾಣಾಯಾಮ ಮೊದಲಾದ ಸಾಧನೆಗಳಿಂದ ಮನಸ್ಸನ್ನು ನಿಗ್ರಹಿಸಿ ಒಳಗಿರುವ ಜ್ಯೋತಿರ್ಲಿಂಗವನ್ನು ಯೋಗಿಗಳು ನೋಡುವರು. ಆದರೆ ಪ್ರಾಣಾಯಾಮ ಮೊದಲಾದವುಗಳ ಹಂಗಿಲ್ಲದೆ ಇಷ್ಟಲಿಂಗದಲ್ಲಿ ದೃಷ್ಟಿನಿಬ್ಬೆರಗಾಗಿ ಮನಸ್ಸು, ಪ್ರಾಣ ಮುಂತಾದವುಗಳಲ್ಲಿ ಲಿಂಗಾಕಾರವು ನೆಲೆಗೊಂಡದ್ದೇ ಪ್ರಾಣಲಿಂಗಿಯ ಸ್ಥಿತಿಯು. ಇದೇ ವೀರಶೈವ ಸಿದ್ಧಾಂತದ ಪ್ರಕಾರ ಪ್ರಾಣಲಿಂಗಿಯು ಅನುಸರಿಸಬೇಕಾದ ಮಾರ್ಗವು. ಈ ಮೇರೆಗೆ ಸರ್ವ ವ್ಯವಹಾರಗಳ ಆಶ್ರಯಸ್ಥಾನವಾದ ಇಂದ್ರಿಯ ಮತ್ತು ಮನಸ್ಸು ಇವು ನಿಶ್ಚಲತೆಯನ್ನು ಹೊಂದಿದಕೂಡಲೆ ಪ್ರಾಣಲಿಂಗವು ಗೋಚರವಾಗುವದು. ಇಂತಹ ಪ್ರಾಣಲಿಂಗವನ್ನು ಮನಸ್ಸು ಪೂಜಿಸುವದೇ ಪ್ರಾಣಲಿಂಗ ಪೂಜೆಯೆನಿಸುವದು. ಪ್ರಾಣಲಿಂಗ ಸ್ವರೂಪವು ನಮ್ಮಲ್ಲಿ ಸರ್ವದಾ ಉಳಿಯಬೇಕೆಂಬದಾಗಿ ನಾವು ಯಾವಾಗಲು ಸದಾಚಾರ ಮಾರ್ಗವನ್ನವಲಂಬಿಸಬೇಕು.

ಠನ್ನು ರಕ್ಷಿಸಬೇಕೆಂದು ನಾನು ಅವತರಿಸಿರುವೆನಷ್ಟೆ! ಸೂರ್ಯನು ಒಂದೇ ಕಡೆಗೆ ನಿಲ್ಲದಿರುವಂತೆ ನಾನು ಒಂದೆಡೆಯಲ್ಲಿಯೇ ನಿಲ್ಲುವದಿಲ್ಲ. ನಾನು ಮಾಡತಕ್ಕ ಸರ್ವ ಪ್ರಯತ್ನಗಳೂ ಉಪದೇಶವೂ ಕೇವಲ ಭಕ್ತೋದ್ಧಾರಕ್ಕಾಗಿಯೇ ಅವೆ. ಅವರ ಮನಸ್ಸಿನ ಸಂಶಯವನ್ನೂ ಭ್ರಾಂತಿಯನ್ನೂ ದೂರ ಮಾಡಿ ಅವರಲ್ಲಿ ನಿಶ್ಚಲತ್ವವನ್ನುಂಟು ಮಾಡುವದಕ್ಕಾಗಿ ನಾನು ಭೂಮಿಗೆ ಇಳಿದು ಬಂದಿರುವೆನು. ನಾನು ಸ್ವತಃ ಜಂಗಮಸ್ವರೂಪನಿದ್ದರೂ ಲಿಂಗಕ್ಕೂ ಜಂಗಮಕ್ಕೂ ಭೇದವನ್ನು ಕಲ್ಪಿಸಕೂಡದು. ಈ ಜಂಗಮರೂಪದಿಂದಲೇ ನೀವು ನನ್ನನ್ನು ಧ್ಯಾನಿಸುವಲ್ಲಿ ನಿಮ್ಮೆಡೆಗೆ ಶೀಘ್ರದಲ್ಲಿ ಬರುವೆನು." ಎಂದು ಮಧುರವಾದ ಮಾತುಗಳಿಂದ ಹೇಳಿದ್ದಲ್ಲದೆ, "ನಿಮ್ಮೆಲ್ಲರ ಶಿವಭಕ್ತಿಯು ಮೇಲಿಂದ ಮೇಲೆ ಅಭಿವೃದ್ಧಿಯನ್ನು ಹೊಂದಲಿ, ನೀವು ಸರ್ವದಾ ಸತ್ಯಸಂಧರಾಗಿರಿ. ಗುರುಲಿಂಗ ಜಂಗಮರ ಸೇವೆಯು ನಿಮ್ಮಲ್ಲಿ ನೆಲೆಗೊಳ್ಳಲಿ. ಇದರಿಂದ ನೀವು ಜನ್ಮಸಾರ್ಥಕ್ಯವನ್ನು ಪಡೆಯುವಿರಿ" * ಎಂದು ಅನೇಕ ಪರಿಯಿಂದ ಅವರಿಗೆ ಆಶೀರ್ವಾದ ಮಾಡಿ ಸಿದ್ಧರಾಮನನ್ನು ಸೊನ್ನಲಾಪುರಕ್ಕೆ ಕಳಿಸಿಕೊಟ್ಟು, ಬಸವೇಶ್ವರ ಮೊದಲಾದ ತನ್ನನ್ನು ಕಳಿಸಲಿಕ್ಕೆ ಬಂದ ಭಕ್ತರಿಗೂ ಆಶೀರ್ವದಿಸಿ ತಾನು ಉತ್ತರದಿಕ್ಕಿನ ಮಾರ್ಗವಾಗಿ ನಡೆದನು.

ಅಲ್ಲಮಪ್ರಭುವು ತೆರಳಿದ ನಂತರ ಬಸವೇಶ್ವರ ಮೊದಲಾದ ಭಕ್ತರು ತಮ್ಮ ಸ್ಥಾನಗಳಿಗೆ ಬಂದು ಮೊದಲಿಗಿಂತ ಹೆಚ್ಚಾಗಿ ಜಂಗಮಭಕ್ತಿಯನ್ನು ಮಾಡತೊಡಗಿದರು. ಜಗತ್ತಿನಲ್ಲಿರುವವರು ಶಾಸ್ತ್ರೋಕ್ತವಾದ ಯಾವ ಆಚರಣೆಯನ್ನೇ ನಡಿಸುತ್ತಿದ್ದರೂ ಅವರವರಿಗೆ ಯಥೋಚಿತವಾಗುವಂತೆ ಅನುಗ್ರಹವನ್ನುಂಟು ಮಾಡುವೆನೆಂದು ಸಚರಾಚರ ಪ್ರಪಂಚಕ್ಕುಪಕಾರವಾಗುವಂತೆ ಬೋಧಿಸುತ್ತ ನಡೆದು ಬರುವಾಗ್ಗೆ, ಆತನು ನೋಡಿದ ಪರ್ವತಗಳೆಲ್ಲ ಮೇರುಪರ್ವತದಂತೆ ಸುವರ್ಣಮಯವಾಗಿ ಶೋಭಿಸಿದವು. ತರುಲತೆಗಳು ಕಲ್ಪವೃಕ್ಷದೋಪಾದಿಯಲ್ಲಿ ಕಂಗೊಳಿಸಿದವು. ಆತನು ಮುಟ್ಟಿದ ನೀರು ಅಮೃತವಾಯಿತು. ಜನರು ಆತನ ಬರುವಿಕೆಯನ್ನು ಹಾರೈಸುತ್ತ ಆತನಿಂದ ಆಶೀರ್ವದಿಸಲ್ಪಟ್ಟವರಾಗಿ ಮಾರ್ಗದಲ್ಲಿ ಉಘೆ ಉಘೆ ಎಂಬ ಧ್ವನಿಯನ್ನು ಮಾಡುತ್ತಿ

* "ಸ್ತುತ್ಯವಾಗಿಹುದಖಿಳಭಕ್ತರು। ನಿತ್ಯರಾಗಿಹುದಚಲಭಕ್ತರು।
ಸತ್ಯರಾಗಿಹುದಮಲಭಕ್ತರು ಭಕ್ತಿಯಿಂದೆನುತ ॥"
ಆಶೀರ್ವಾದ ಮಾಡುವದಾದರೆ ಹೀಗೆ ಮಾಡುತ್ತಿರಬೇಕು.

ದ್ದರು. ಹೀಗೆ ಸರ್ವರಿಂದ ಸನ್ಮಾನಿತನಾಗಿ, ಪರಮೇಶ್ವರನಿಗೆ ಮುಖ್ಯಸ್ಥಾನವಾದ, ಸರ್ವಪ್ರಕಾರದ ಸಿದ್ಧಿಗಳ ಪ್ರಾಪ್ತಿಗೆ ಮೂಲಸ್ಥಾನವಾದ ಶ್ರೀಗಿರಿ ಪರ್ವತವನ್ನು ಅಲ್ಲಮನು ಸಮೀಪಿಸಿದನು. ಆ ಶ್ರೀಗಿರಿಯ ಶಿಖರದಲ್ಲಿ ನಡೆಯುವಂಥ ಲತೆಗಳೂ, ನಗುತ್ತಿರುವ ಗಿಡಗಳೂ, ಮಾತಾಡುವ ಶಿಲೆಗಳೂ, ದಿವ್ಯ ರುಚಿಗಳನ್ನು ಕೊಡುವ ಗುಲ್ಮಗಳೂ, ಪಾನಮಾಡಿದರೆ ಅಂತಃಕರಣ ಶುದ್ಧಿಯನ್ನುಂಟುಮಾಡುವ ನೀರಿನ ಮಡುಗಳೂ, ಜಾತಿವೈರತ್ವವನ್ನು ತೊರೆದ ಪಶು-ಪಕ್ಷಿ ಮೃಗಗಳೂ ಶೋಭಿಸಿದ್ದವು. ಈ ಪರ್ವತದ ಮಹತ್ವವನ್ನು ಆದಿಶೇಷನಾದರೂ ವರ್ಣಿಸಲಾರನು. ಸಾರಾಂಶ, ಯಾವನೊಬ್ಬನು ತನ್ನ ಇಷ್ಟಸಿದ್ಧಿಗಾಗಿ ಇಲ್ಲಿ ತಪಸ್ಸನ್ನಾಚರಿಸಿದರೆ, ಅವನ ಮನೋರಥವು ಶೀಘ್ರದಲ್ಲಿ ಪೂರ್ಣವಾಗುವದು. ಇಂತಹ ಶ್ರೀಗಿರಿಯಲ್ಲಿ ತಾನು ಸರ್ವಸಿದ್ಧಿಗಳನ್ನು ಪಡೆದಿರುವೆನೆಂದೂ, ತನ್ನ ಸಮಾನ ಶ್ರೇಷ್ಠಯೋಗಿಗಳು ಯಾರೂ ಇಲ್ಲವೆಂದೂ, ಉಬ್ಬಿಕೊಂಡಿರುವ ಗೋರಕ್ಷನಾಥನೆಂಬ ಹೆಸರಿನವನೊಬ್ಬನಿದ್ದನು. ರೋಗಪೀಡಿತನ ಬಳಿಗೆ ಅಮೃತವೇ ಮೂರ್ತಿಮಂತಾಗಿ ನಡೆತಂದಂತೆ ಮರಣೋನ್ಮುಖನ ಬಳಿಗೆ ಅಮೃತಬಳ್ಳಿ (ಮರುಜವಣಿಗೆ) ಯು ಬರುವಂತೆ ಗೋರಕ್ಷನಾಥನ ಬಳಿಗೆ ಆದಿನಾಥನಾಥನಾದ ಅಲ್ಲಮಪ್ರಭುವು ಬಂದನು ಆತನನ್ನು ಕಂಡಾಕ್ಷಣವೆ ಗೋರಕ್ಷನಾಥನು ಎದ್ದು ಎರಡೂ ಕೈಗಳನ್ನು ಜೋಡಿಸಿ ನಮಸ್ಕರಿಸಿ, ನಮ್ರಭಾವದಿಂದ ಆತನನ್ನು ಯಥಾವತ್ತಾಗಿ ಪೂಜಿಸಿ, ದರ್ಭಾಸನದ ಮೇಲೆ ಮೂರ್ತಗೊಳಿಸಿ,

ಗೋರಕ್ಷನಾಥ—ಎಲೈ ಮಹಾನುಭಾವರೆ, ತಾವು ಯಾರು? ಎಲ್ಲಿಂದ ಬಂದಿರಿ? ನೀವು ಇಲ್ಲಿ ಬರಲು ಕಾರಣವೇನು? ಮುಂದೆ ಎಲ್ಲಿಗೆ ಹೋಗತಕ್ಕವರಿದ್ದೀರಿ? ನನ್ನ ಅತ್ಯಂತ ಸುಕೃತವಿಶೇಷದಿಂದಲೇ ತಾವು ಇಲ್ಲಿಗೆ ಬಂದಿರಿ. ತಾವು ಪರಮ ಕೃಪಾಸಮುದ್ರರು.

ಅಲ್ಲಮಪ್ರಭು—(ಗೋರಕ್ಷನಿಗೆ ಅನುಗ್ರಹ ಮಾಡಬೇಕೆಂಬ ಉದ್ದೇಶದಿಂದ) ಎಲೈ ಗೋರಕ್ಷನಾಥನೆ, ಜನ್ಮ ಮೃತ್ಯುವಿನಿಂದ ಪೀಡಿತರಾಗಿ ಸಂಸಾರಯಾತನೆಯಿಂದ ಬಿಡುಗಡೆಯನ್ನು ಹೊಂದಬೇಕೆಂದು ಇಚ್ಛಿಸುವ ಮುಮುಕ್ಷುಗಳಿಗೆ ವೇದಾಗಮಗಳಲ್ಲುಕ್ತವಾದ ಲಿಂಗೈಕ್ಯೋಪದೇಶವನ್ನು ಮಾಡುವದಕ್ಕಾಗಿ ನಾನು ಭೂಮಿಯ ಮೇಲೆ ಸಂಚರಿಸುತ್ತೇನೆ.

ಗೋರಕ್ಷನಾಥ—ಎಲೈ ಮಹಾಪುರುಷನೆ, ನಿನ್ನ ವೇಷವು ಮಾತಿನ ಪ್ರೌಢಿಮೆಯು ಇವೆಲ್ಲವುಗಳಿಂದ ನೀನು ಅಲೌಕಿಕ ಗುಣಯುಕ್ತನೆಂದು ನಾನು ತಿಳಿಯುತ್ತೇನೆ. ಈ ನಿನ್ನ ರೀತಿಯು ಹೊಸದಾಗಿರುವದರಿಂದ ನಿನ್ನ ಅಂತರಂಗವು ಮಂದಮತಿಯಾದ ನನಗೆ ಗೋಚರಿಸದು,

ಅಲ್ಲಮಪ್ರಭು - ಗೋರಕ್ಷನಾಥನೆ, ಯಾವನು ಅಂತರ್ಗತವಾದ ಅಜ್ಞಾನವೆಂಬ ಕತ್ತಲೆಯ ದೆಸೆಯಿಂದ ತನ್ನನ್ನು ತಾನೆ ತಿಳಿಯಲು ಸಮರ್ಥನಾಗುವದಿಲ್ಲವೋ, ಅಂಥವನು ಅನ್ಯರ ಮನೋಗತವನ್ನು ಹೇಗೆ ಅರಿತುಕೊಳ್ಳುವನು? ಸ್ವತಃ ಹಸಿದುದರಿಂದ ಅದರ ಉಪಶಮನಾರ್ಥ ಮನೆಮನೆಗೆ ಬಿಕ್ಷಾರ್ಥಿಯಾಗಿ ತಿರುಗುವವನು, ಉಪವಾಸದಿಂದ ಸಾಯುವ ಇತರರನ್ನು ಅನ್ನದಾನವೆಂಬ ಔಷಧದಿಂದ ಉಳಿಸಲು ಶಕ್ತನಲ್ಲ. ಕುರುಡನಿಗೆ ಇತರ ಜನರಂತೆ ಕಣ್ಣಿನ ಆಕೃತಿಗಳು ಮಾತ್ರ ಅವೆ, ಆದರೆ ಅವುಗಳಿಂದ ಏನೂ ಕಾಣಿಸುವದಿಲ್ಲ. ಇಂಥವನ ಕಯ್ಯಲ್ಲಿ ಒಂದು ಸ್ವಚ್ಛವಾದ ಕನ್ನಡಿಯನ್ನು ಕೊಟ್ಟರೆ ಅದರಿಂದಾಗುವ ಪ್ರಯೋಜನವೇನು? ಯಾವನಿಗೆ ಕೇವಲ ಚರ್ಮಚಕ್ಷುಗಳಿದ್ದು, ಜ್ಞಾನಚಕ್ಷುಗಳಿಲ್ಲವೋ ಅವನಿಗೆ ಆತ್ಮಜ್ಞಾನವು ಹೇಗಾದೀತು? ಅವರು ಸಾಮಾನ್ಯವಾಗಿ ಪಶುಪ್ರಾಯರಾಗಿರುವರು. ಧೂರ್ತರೂ ಕಪಟವೇಷಧಾರಿಗಳೂ ಅದ ಯೋಗಿಗಳು ತಮ್ಮ ಚತುರವಾದ ಮತ್ತು ಪ್ರೌಢ ವಿಚಾರದಂತೆ ಭಾಸವಾಗುವ ಸಂಭಾಷಣಗಳಿಂದ ಮಂದಮತಿಗಳನ್ನೂ ಮಾಯಾಪಾಶಕ್ಕೊಳಗಾದವರನ್ನೂ ಮರುಳುಗೊಳಿಸುವದರಲ್ಲಿ ಅತಿಶಯ ಕುಶಲರಿರುತ್ತಾರೆ. ಇಂತಹ ಡಾಂಭಿಕರಿಗೆ ಜ್ಞಾನಪ್ರಾಪ್ತಿಯಾಗುವದಿಲ್ಲ. ಮತ್ತು ಶರೀರವು ಬಹು ದಿವಸ ಬಾಳುವದಾದರೆ ಅದೇ ಮೋಕ್ಷವೆಂದೂ ತೀವ್ರನಾಶವಾದಲ್ಲಿ ಮೋಕ್ಷದ ದ್ವಾರವು ಕುಂಠಿತವಾಯಿತೆಂದೂ, ಅದರಿಂದ ಶರೀರವನ್ನು ಬಲವುಳ್ಳದ್ದಾಗಿ ಮಾಡವದು — ಅಂದರೆ ಕಾಯಸಿದ್ಧಿಯನ್ನು ಸಂಪಾದಿಸುವದು ಸಂಸಾರದಲ್ಲಿ ಮುಖ್ಯ ಹೇತುವೆಂದೂ ಭಾವಿಸುವವರು ಕೆಲವರಿದ್ದಾರೆ. ಈ ಮತದ ಜನರಿಗೆ ಕಾಪಾಲಿಕ ಮತದವರೆನ್ನುವರು. ಚರ್ಮ, ಮಾಂಸ, ಮಜ್ಜೆ, ರಕ್ತ. ಅಸ್ಥಿ, ಕೂದಲು, ಮಿದುಳು ಮುಂತಾದ ದುರ್ಗಂಧ ವಸ್ತುಗಳ ಸಮುದಾಯವುಳ್ಳ ಮತ್ತು ಮಲಮೂತ್ರಗಳಿಂದ ತುಂಬಿರುವ ಈ ಶರೀರವು ನನ್ನದೆಂದು ದುರಭಿಮಾನವುಳ್ಳ ಕಾಪಾಲಿಕ ಮತದವರಿಗೆ ಶಿವಭಕ್ತಿರಸವು ಎಂದೂ ಸವಿದೋರುವದಿಲ್ಲ.

ಗೋರಕ್ಷನಾಥ—ಎಲೈ ಗುರುಶ್ರೇಷ್ಠನೆ, ನಾನು ಸ್ಥಾಪಿಸುವ ಸಿದ್ಧಾಂತವನ್ನು ಚಿತ್ತವಿಟ್ಟು ಕೇಳಬೇಕು. ಅದೇನಂದರೆ— ಯೋಗಾಭ್ಯಾಸದಿಂದ ಶರೀರವು ದೃಢವಾಗುತ್ತದೆ. ದೇಹ ಸಾಮರ್ಥ್ಯವುಳ್ಳವನನ್ನು ಅಜ್ಞಾನವು ಮುಟ್ಟಲರಿಯದು. ಮತ್ತು ಮೃತ್ಯುವು ಅತನೆದುರಿಗೆ ನಿಲ್ಲಲು ಭೀತಿಯುಳ್ಳದ್ದಾಗುತ್ತದೆ ಇದರಿಂದ ನಮ್ಮ ಶರೀರವು ಅವಿನಾಶತ್ವವನ್ನು ಹೊಂದುವದೆಂದು ನಮ್ಮ ಸಿದ್ಧಾಂತವು. ನನ್ನ ಕಾಯಸಿದ್ಧಿಯನ್ನು ತೋರಿಸಬೇಕೆಂದು ಹೇಳಿದರೆ ನಾನು ಅದನ್ನು ಈಗಲೆ ತೋರಿಸುವೆನು. ಉಳಿದ ನಿಸ್ಸಾರಮಾತಿನಿಂದೇನು ಪ್ರಯೋಜನ?

ಅಲ್ಲಮ—ಗೋರಕ್ಷನಾಥನೆ, ನೀನಾಡಿದ ಮಾತು ಸರ್ವಾಬದ್ಧವು. ಶರೀರವು ಬಹಳ ದಿವಸ ಬಾಳಿದರೇನು! ಗಟ್ಟಿಯಾಗಿದ್ದರೇನು! ಅದಕ್ಕೆ ವಿನಾಶತ್ವವೂ ಮರಣದ ಬಾಧೆಯೂ ಇದ್ದೇ ಇರುವದು. ಕಾಯಸಿದ್ಧಿಯಿಂದ ಮಾಯೆಯು ಜಯಿಸಲ್ಪಡುವದಿಲ್ಲಾದ್ದರಿಂದ ಮೋಕ್ಷವು ಲಭಿಸುವದಿಲ್ಲ. ಯಾಕಂದರೆ—ಶರೀರವು ಪಂಚಮಹಾಭೂತಗಳ ಕಾರ್ಯವಾದ್ದರಿಂದ ನಶ್ವರವಾಗಿದೆ. ಆದರೆ ಈ ನಶ್ವರವಾದ ದೇಹದಲ್ಲಿ ಅಡಗಿರುವ ಸರ್ವಸಾಕ್ಷಿ ಭೂತನಾದ ಪರಮಾತ್ಮನು ಮಾತ್ರ ನಾಶರಹಿತನೂ ಅಕ್ಷರನೂ ಆಗಿದ್ದಾನೆ. ನಶ್ವರವಾದ ಸರ್ವವಸ್ತುಗಳಿಗೆ ಪರಮೇಶ್ವರನೇ ಒಡೆಯನಾಗಿದ್ದಾನೆ. ಅಂತಹ ಪರಮಾತ್ಮನಲ್ಲಿ ಭಕ್ತಿಯನ್ನಿಟ್ಟವರಿಗೆ ಮಾತ್ರ ಮೋಕ್ಷಪದವು ಲಭ್ಯವಾಗುವದು. ಗೋರಕ್ಷನಾಥಾ, ನಿನ್ನ ಶರೀರವು ಶಾಶ್ವತವೆಂದು ನಂಬಿ ಅದರಲ್ಲಿ ಗುರಭಿಮಾನವುಳ್ಳವನಾಗಿ ಕೆಡಬೇಡ. ಅದು ನಿಜವಾಗಿ ನಶ್ವರವಾದದ್ದು. +

ಗೋರಕ್ಷನಾಥ - ಪ್ರಭುವೆ, ಬಹಳ ಮಾತುಗಳಿಂದ ಪ್ರಯೋಜನವಿಲ್ಲ. ಏಳು, ನಿನ್ನ ಕೈಯ್ಯಲ್ಲಿ ಖಡ್ಗವನ್ನು ಹಿಡಿದುಕೊ. ನಿನ್ನಲ್ಲಿರುವ ಸರ್ವ ಶಕ್ತಿಯನ್ನು ಪಯೋಗಿಸಿ ಅದರಿಂದ ನನ್ನನ್ನು ಹೊಡಿ. ಹೀಗೆ ಹೊಡಿಯೋಣದರಿಂದ ನನ್ನ ಶರೀರದ ಮೇಲಿರುವ ಒಂದು ಕೂದಲು ಸಹ ಅಲುಕಿದರೆ ನಾನು ಕಾಯಸಿದ್ಧಿಯನ್ನು ಪಡೆದಾತನಲ್ಲವೆಂದು ತಿಳಿ. ಇದೊಂದೇ ದೃಷ್ಟಾಂತವಿರಲು ವಾದಮಾಡುವದೇತಕ್ಕೆ?

ಅಲ್ಲಮಪ್ರಭು - ಎಲೈ ಗೋರಕ್ಷನಾಥನೆ, ಹೊಡೆಯುವದೂ ಇರಿಯುವದೂ ಮುರಿಯುವದೂ ಕೊಂದು ಪರೀಕ್ಷಿಸುವದೂ ಇವೆಲ್ಲ ರಾಕ್ಷಸೀ ಕೃತ್ಯಗಳು; ಇವು ಲಿಂಗವಂತರಿಂದ ಮಾಡಲ್ಪತಕ್ಕವುಗಳಲ್ಲ. ಈ ಪ್ರಹಾರದಿಂದ ಅಕಸ್ಮಾತ್ತಾಗಿ ನೀನು ಮರಣಪಟ್ಟರೆ ಮುಂದೆ ಸಿದ್ಧಿಯನ್ನು ಯಾರು ಪಡೆದುಕೊಳ್ಳುವರು? ಮಂದಮತಿಗಳಾದ ನಿಮ್ಮಂಥವರನ್ನು ಕಂಡು ನನಗೆ ನಗೆ ಬರುತ್ತದೆ. ಅಥವಾ ನೀನು ಹೇಳುವಂತೆ ಈ ಖಡ್ಗಪ್ರಹಾರದಿಂದ ನಿನಗೆ ಮರಣವು ಸಂಭವಿಸದಿದ್ದರೂ ಈ ಕೃತಿಯಿಂದ ಧರ್ಮದ ಅಭಿವೃದ್ಧಿಯು ಸ್ವಲ್ಪಾದರೂ ಆಗುವದಿಲ್ಲ.

---

\+ ಎಲೆಮರುಳೆ ಮೃದುವಾದ ಮಾಯೆಯು। ಬಲೆಯ ಬಲ್ಲಿತವಮಾಡಿಸಾವನು।
ಗೆಲಿದೆನೆಂದೆ ನಿರರ್ಥದಲಿ ಹಾರೈಸುದಿ:ು ಬಂದೆ॥
ತಿಳಿವದೀತನು ತಾನೆ ಕಾಲನ। ನಿಳಯು ನೀನಿದ ನಂಬಿನುಡಿದರೆ।
ಪ್ರಳಯು ನಿನ್ನನು ಬಿಡುವುದೇ ಗೋರಕ್ಷ ಕೇಳೆಂದ॥

ಗೋರಕ್ಷನಾಥ— ಪ್ರಭುವರ್ಯನೆ, ನಿನ್ನ ಹೊಡತದಿಂದ ನಾನು ಮೃತನಾದರೆ ನಾನು ಏನೂ ಸಿದ್ಧಿಸಲಿಲ್ಲವೆಂದು ಸ್ಪಷ್ಟವಾಗುವದು. ಅದರಿಂದ ನಿನ್ನ ಮನಸ್ಸಿನ ವಿಕಲ್ಪಗಳನ್ನು ದೂರಮಾಡಿ ಆದಷ್ಟು ನಿರ್ದಯತನದಿಂದ ನನ್ನನ್ನು ಹೊಡಿ—ಎಂದು ಅನೇಕ ಪರಿಯಿಂದ ಅಲ್ಲಮನಿಗೆ ಪ್ರಾರ್ಥಿಸಿಕೊಳ್ಳಲಾಗಿ, ಅಲ್ಲಮನು ಆತನನ್ನು ಅನುಗ್ರಹಿಸಬೇಕೆಂದು ಚಿಂತಿಸಿ ತನ್ನಲ್ಲಿ ಸತ್ತ್ವವನನ್ನು ಹುಟ್ಟಿಸುವ ಸಾಮರ್ಥ್ಯವಿದ್ದುದರಿಂದ ಆತನ ಅರಿಕೆಯನ್ನು ಮನ್ನಿಸಬೇಕೆಂದು ಯೋಚಿಸಿ, ತನ್ನ ಕಯ್ಯಲ್ಲಿ ಖಡ್ಗವನ್ನು ಹಿಡಿದು ಜಳಪಿಸುತ್ತ ಆತನ ಶರೀರದ ಮೇಲೆ ಹೊಡಿಯಲು ಅದರ ಶಬ್ದದಿಂದ ಭೂಮಿಯು ನಡುಗಹತ್ತಿತು. ಪರ್ವತಗಳು ಅಲ್ಲಾಡಿದವು. ಆದರೂ ಗೋರಕ್ಷನಾಥನ ಮೈಮೇಲೆ ಸ್ವಲ್ಪಾದರೂ ಘಾಯವಾಗದೆ, ಪರ್ವತದ ಮೇಲೆ ವಜ್ರಪ್ರಹಾರ ಮಾಡಿದರೆ ಹೇಗೆ ಕಣಕಣ ಶಬ್ದವು ಹೊರಡಬೇಕೋ, ಅದರಂತೆ ಅಲ್ಲಮನ ಖಡ್ಗ ಪ್ರಹಾರದಿಂದ ಕಣಕಣ ಶಬ್ದವು ಕೇಳಿಸಿತು. ಇದನ್ನು ಕೇಳಿ,

ಅಲ್ಲಮಪ್ರಭು— ಎಲೈ ಗೋರಕ್ಷನಾಥನೆ, ಇದು ಸಿದ್ಧಿಯಲ್ಲ. ಮಾಯೆಯ ಚಿನ್ಹವು. ಇಂತಹ ಕಾಯಸಿದ್ಧಿಯಿಂದ ಜನನ ಮರಣಾತ್ಮಕವಾದ ಸಂಸಾರ ಚಕ್ರದಲ್ಲಿ ತಿರುಗಾಡುವದು ತಪ್ಪುವದಿಲ್ಲ. ಇದೆಲ್ಲ ವ್ಯರ್ಥಶ್ರಮ. ಎಲ್ಲಿ ಶಬ್ದವು ಕೇಳಬರುತ್ತದೋ ಅದೆಲ್ಲ ನಶ್ವರವೆಂದು ತಿಳಿ, ( ಎಂದು ತನ್ನ ಕಯ್ಯೊಳಗಿನ ಖಡ್ಗವನ್ನು ಭೂಮಿಯ ಮೇಲೆ ಚಲ್ಲಿಕೊಟ್ಟನು. ಅನಂತರ ಅವನ ಮೇಲೆ ಕೃಪೆ ಹುಟ್ಟಿ )—ಎಲೈ ಗೋರಾಕ್ಷಕಾ, ನೀನು ಸಂಪಾದಿಸಿದ ಸಿದ್ಧಿಗೆ ಕಾಲಮರ್ಯಾದೆಯುಂಟು. ಸಮಯವು ಪ್ರಾಪ್ತವಾದ ಕೂಡಲೇ ಅದು ನಾಶವಾಗುವದು. ಆದ್ದರಿಂದ ಕಾಯಸಿದ್ಧಿಯನ್ನು ಕುರಿತು ಉಪನಿಷತ್ತಿನ ರಹಸ್ಯವನ್ನು ಹೇಳುತ್ತೇನೆ ಕೇಳು. " ಗಾಳಿ-ಬಿಸಿಲು-ಬೆಂಕಿ-ಗುಡುಗು-ಮಳೆ-ಚಳಿ ಮುಂತಾದವುಗಳಿಂದ ಯಾವನ ದೇಹಕ್ಕೆ ಬಾಧೆಯುಂಟಾಗುವದಿಲ್ಲ. ಯಾವನಿಗೆ ರೋಗ ಮುಪ್ಪು ಮರಣಗಳಿಲ್ಲ, ಯಾವನ ಶರೀರವು ಯಾವಾಗಲು ತೇಜಃಪುಂಜವಾಗಿ ಪ್ರಕಾಶಿಸುತ್ತದೆ. ಮತ್ತು ಯಾವನು ನಿಷ್ಕಾಮಬುದ್ಧಿಯಿಂದ ಆತ್ಮಸ್ವರೂಪ ಸಮಾಧಿಯಲ್ಲಿ ಮಗ್ನನಾಗಿರುತ್ತೇನೆ ಅವನೇ ನಿಜವಾದ ಯೋಗಿಯು ಅವನು ಪಂಚಭೂತಗಳನ್ನೂ ಅವುಗಳ ಸಂಬಂಧವಾದ ಗುಣಗಳನ್ನೂ ಗೆದ್ದು ಬಾಹ್ಯಸ್ಪರ್ಶಕ್ಕೆ ಆಸಕ್ತನಾಗದೆ, ಬಂಗಾರವನ್ನೂ ಮಂಣಿನ ಹೆಂಟೆಯನ್ನೂ ಸಮನಾಗಿ ಕಂಡು, ದೇಹಧಾರಿಯಾದರೂ ಶರೀರದ ಗುಣಗಳಲ್ಲಿ ಸಂಬಂಧವನ್ನು ಹೊಂದದೆ ಚರಿಸುವನು. ಅವನೇ ನಿಜವಾಗಿ ಕಾಯಸಿದ್ಧಿಯನ್ನು ಪಡೆದವನೆಂದೂ ಪರಿಪೂರ್ಣನಾದ ಯೋಗಿಯೆಂದೂ ಭಾವಿಸಬೇಕು. "

ಹೀಗೆ ಉಪದೇಶ ಮಾಡುತ್ತಿರುವ ಅಲ್ಲಮನ ವಚನಗಳು ಸತ್ಯವಾದವುಗಳೋ ಮಿಥ್ಯವಾದವುಗಳೋ ಅದನ್ನು ಪರೀಕ್ಷಿಸಬೇಕೆಂದು ಯೋಚಿಸಿ ಗೋರಕ್ಷನಾಥನು ಭೂಮಿಯ ಮೇಲೆ ಚಲ್ಲಿದ ಖಡ್ಗವನ್ನು ಕಯ್ಯಲ್ಲಿ ತಕ್ಕೊಂಡು ತನ್ನಲ್ಲಿರುವ ಸರ್ವ ಶಕ್ತಿಯನ್ನೂ ಕುಶಲತೆಯನ್ನೂ ಉಪಯೋಗಿಸಿ ಅಲ್ಲಮನ ಶರೀರದ ಸರ್ವಭಾಗದ ಮೇಲೆ ಹೊಡಿಯಲಾಗಿ ಆ ಖಡ್ಗಕ್ಕೆ ಅಲ್ಲಮನ ಅಂಗಸ್ಪರ್ಶವು ಸ್ವಲ್ಪಾದರೂ ಆಗಲಿಲ್ಲ; ಅದು ಆಕಾಶದಂತೆ ನಿರಾಕಾರವಾಗಿ ತೋರಿತು. ಅದರ ಮೇಲೆ ಹೊಡಿದರೂ ಶಬ್ದವು ಕೇಳಬರಲಿಲ್ಲ. ಇದನ್ನು ಕಂಡು ಗೋರಕ್ಷನಾಥನು ತನ್ನ ಮನದಲ್ಲಿ ವಿಚಾರಮಾಡಿ ಆತನ ಅಲೌಕಿಕ ಸಾಮರ್ಥ್ಯವನ್ನೂ ನಿಜವಾದ ಕಾಯಸಿದ್ಧಿಯನ್ನೂ ನೋಡಿ ಬೆರಗಾದನು. ಕೂಡಲೇ ಖಡ್ಗವನ್ನು ಕೆಳಗೆ ಚಲ್ಲಿ, ಅದರ ಪೂರ್ವಕ ಸಾಷ್ಟಾಂಗ ನಮಸ್ಕಾರ ಮಾಡಿ,

ಗೋರಕ್ಷನಾಥ—ಎಲೈ ಗುರುಶ್ರೇಷ್ಠನೆ, ನಿನ್ನಂತೆ ಅವರ್ಣನೀಯ ಶರೀರಸಿದ್ಧಿಯನ್ನು ಪಡೆದವರನ್ನು ಜಗತ್ತಿನಲ್ಲಿ ನಾನು ಎಲ್ಲಿಯೂ ನೋಡಲಿಲ್ಲ. ನಿನ್ನ ಮಹತ್ವವು ಜಗತ್ತನ್ನು ವಿಸ್ಮಯಗೊಳಿಸುವಂಥಾದ್ದಾಗಿದೆ. ವೇದಾಂತ ಶಾಸ್ತ್ರದಲ್ಲಿ ಹೇಳಿದ ಅದ್ವೈತರಹಸ್ಯವು ನಿನ್ನ ಶರೀರದಲ್ಲಿ ಪರಿಪೂರ್ಣವಾಗಿ ತುಂಬಿದೆ. ಖಡ್ಗದಿಂದ ನೀನು ನನ್ನನ್ನು ಹೊಡೆದಾಗ್ಗೆ ಅದರಿಂದ ಶಬ್ದವುಂಟಾಯಿತು, ಆದರೆ ನಾನು ನಿನ್ನನ್ನು ಖಡ್ಗದಿಂದ ಹೊಡೆದರೂ ಯಾವ ಶಬ್ದವು ಕೇಳಿಸದೆ ನಿನ್ನ ಶರೀರವು ಆಕಾಶದಂತೆ ನಿರಾಕಾರವಾಗಿ ತೋರಿತು. ಇದರ ರಹಸ್ಯವನ್ನು ನನಗೆ ದಯವಿಟ್ಟು ಹೇಳಬೇಕು.

ಅಲ್ಲಮಪ್ರಭು— ಎಲೈ ಗೋರಕ್ಷಕಾ, ಚಿತ್ತವಿಟ್ಟು ಕೇಳು. ಶರೀರವು ಗಟ್ಟಿಯಾದೊಡನೆಯೇ ಮಾಯೆಯು ಗಟ್ಟಿಯಾಗುವದು, ಅಂದರೆ—ಕಾಯಪುಷ್ಟಿಯಿಂದ ಅದರ ಮೇಲೆ ಒಂದು ಪ್ರಕಾರದ ಮೋಹವುಂಟಾಗುವದು. ಇವೆರಡೂ ಹೆಚ್ಚಾದ ಬಳಿಕ ಪ್ರಪಂಚದ ಆಶೆಯು ಅಭಿವೃದ್ಧಿಯನ್ನು ಹೊಂದುವದು. ಇದು ಕಾಯಸಿದ್ಧಿಯ ಲಕ್ಷಣವಲ್ಲ. ಆದರೆ ಶರೀರ, ಅಭಿಮಾನ, ಆಶೆ ಮುಂತಾದ ರಜೋಗುಣಗಳೆಲ್ಲ ನಷ್ಟವಾಗಿದ್ದಾತನೇ ಸಿದ್ಧರಲ್ಲಿ ಶ್ರೇಷ್ಠನೆನಿಸುವನು. ಅವನೇ ಕಾಯಸಿದ್ಧಿಯನ್ನು ಪಡೆದಾತನು. + ಎಂದು ಹೇಳಲು

+ ಕಾಯಬಲಿದರೆ ಮಾಯೆ ಬಲಿವುದು। ಮಾಯಬಲಿದಡೆ ಛಾಯಬಲಿವುದು।
ಕಾಯಮಾಯಾ ಛಾಯಬಲಿದರೆ ಸಿದ್ಧತನವೆಲ್ಲಿ॥
ಕಾಯಮಾಯಾ ಛಾಯದಾಗಿನ। ಛಾಯವನು ಕಳೆದುಳಿದನಾದಡೆ।
ರಾಯನಾತನು ಸಿದ್ಧರಲಿ ಗೋರಕ್ಷಕೇಳೆಂದ॥

ಅದನ್ನು ಕೇಳಿ ಗೋರಕ್ಷನಾಥನು ತನ್ನ ಕಲ್ಯಾಣಕ್ಕಾಗಿಯೇ ಅಲ್ಲಮನು ದಯೆಮಾಡಿಸಿರುವನೆಂದು ಭಾವಿಸಿ, ಅಜ್ಞನಾದ ತನ್ನ ಅಪರಾಧಗಳನ್ನು ಕ್ಷಮಿಸಿ ತನ್ನನ್ನುದ್ಧರಿಸಬೇಕೆಂದು ಬಹು ನಮ್ರತೆಯಿಂದ ಆತನ ಪಾದಗಳ ಮೇಲೆ ಬಿದ್ದು ಬೇಡಿಕೊಳ್ಳಲು, ಅಲ್ಲಮನು ಅವನನ್ನು ತನ್ನ ಕಯ್ಯಿಂದ ಹಿಡಿದೆಬ್ಬಿಸಿದನು ಅಲ್ಲಮನ ಹಸ್ತಸ್ಪರ್ಶದಿಂದ ಗೋರಕ್ಷನಾಥನಲ್ಲಿ ಶಿವಜ್ಞಾನಾನುಭವವು ಕೂಡಲೆ ಅಂಕುರಿಸಿತು. ಬಂಗಾರ ಮಾಡುವ ಕೃತಿಯಿಂದ ವನಸ್ಪತಿಗಳ ರಸವನ್ನು ಹಚ್ಚಿ ಕಬ್ಬಿಣವನ್ನು ಕಾಸಲು ಅದು ಬಂಗಾರವಾಗುವಂತೆ, ಅಲ್ಲಮಪ್ರಭುವಿನ ಹಸ್ತಸ್ಪರ್ಶದಿಂದ ಗೋರಕ್ಷನಾಥನ ದೇಹದ ಮೇಲಿದ್ದ ಸರ್ವ ಅಭಿಮಾನವು ನಷ್ಟವಾಯಿತು. ಅವನ ಕೃಪಾದೃಷ್ಟಿಯಿಂದ ಅವನಲ್ಲಿದ್ದ ಮದಮತ್ಸರಗಳು ಓಡಿಹೋದವು ಆತನು ಅಂತಃಕರಣ ಪೂರ್ವಕವಾಗಿ ಮಾತಾಡಿದ್ದರಿಂದ ಅವರ ಮನಸ್ಸಿನಲ್ಲಿಯ ಅಜ್ಞಾನ ತಿಮಿರವು ಕಾಣದಂತಾಯಿತು. ಆತನ ಮಸ್ತಕದ ಮೇಲೆ ಹಸ್ತವನ್ನಿಡಲು ಆತನಲ್ಲಿದ್ದ ಮಾಯೆಯು ತೊಲಗಿತು. ಅದ್ದರಿಂದ ಗೋರಕ್ಷನಾಥನು ಹರ್ಷಿತನಾಗಿ ತನ್ನ ಕಲ್ಯಾಣಕ್ಕಾಗಿ ಬಂದ ಅಲ್ಲಮನನ್ನು ಕುರಿತು—"ಭೊ ಮಹಾತ್ಮನೆ, ತಮಗೆ ಕಾಯಸಿದ್ಧಿಯು ಹ್ಯಾಗೆ ಪ್ರಾಪ್ತವಾಗಿರುವದು? ಅದು ನನಗೆ ದೊರೆಯಬೇಕಾದರೆ ಯಾವ ಉಪಾಯವನ್ನು ಕೈಕೊಳ್ಳಬೇಕು? ಇದೆಲ್ಲವನ್ನು ನನಗೆ ಬೋಧಿಸಿ ನನ್ನನ್ನು ರಕ್ಷಿಸಬೇಕೆಂದು" ಅಲ್ಲಮನಿಗೆ ಅರಿಕೆಮಾಡಿಕೊಳ್ಳಲು,

ಅಲ್ಲಮಪ್ರಭು—ಗೋರಕ್ಷನಾಥನೆ, ಬಹಳಹೇಳಿ ಪ್ರಯೋಜನವೇನು? ಅಜ್ಞಾನಾತ್ಮಕ ಶರೀರ ಸಂಬಂಧವನ್ನು ಬಿಡದಪರ್ಯಂತರ ಯಥಾರ್ಥವಾದ ಆತ್ಮಜ್ಞಾನದ ಬೋಧೆಯಾಗಿ ಶರೀರ ಸಿದ್ಧಿಯು ಪ್ರಾಣಿಗಳಿಗೆ ಘಟಿಸುವದಿಲ್ಲ. ಕಾಯಸಿದ್ಧಿಯನ್ನೂ ಮೋಕ್ಷಲಾಭವನ್ನೂ ಗಳಿಸುವದಕ್ಕಾಗಿ ಮನದಲ್ಲಿ ನೀನು ಅತ್ಯಂತ ಉತ್ಕಂಠಿತನಾಗಿರಬಹುದು. ಅದ್ದರಿಂದ ನೀನು ನಿನ್ನ ಪೂರ್ವಾಚಾರಗಳನ್ನು ಬಿಟ್ಟು ಭಕ್ತಿಪೂರ್ವಕವಾಗಿ ಗುಹೇಶ್ವರನ ಚರಣಕಮಲ ಸೇವೆಯಲ್ಲಿ ತತ್ಪರನಾಗು. ಅಡಿಗೆ ಮಾಡಹತ್ತಿದರೆ ಮಯ್ಯೊಳಗಿನ ಥಂಡಿಯು ಹೋಗಿ ಉಣ್ಣುವದಕ್ಕೆ ಪದಾರ್ಥಗಳು ಸಿದ್ಧವಾಗುವಂತೆ ಶಿವಭಕ್ತಿಯನ್ನಾಚರಿಸಿದರೆ ಕಾಯಸಿದ್ಧಿಯುಂಟಾಗಿ ಮೋಕ್ಷಪ್ರಾಪ್ತಿಯಾಗುವದು. ಆದಕಾರಣ ನೀನು ಮುಖ್ಯವಾಗಿ ಶಿವಭಕ್ತಿಯಲ್ಲಿ ಧುರೀಣನಾಗು. ನನಗೆ ಶಿವನೆಂದೂ ಗುಹೇಶ್ವರನೆಂದೂ ಕರೆಯುವರು. ಜ್ಞಾನಿಗಳ ರಕ್ಷಣಾರ್ಥವಾಗಿ ನಾನು ಈ ಕೃತ್ರಿಮ ವೇಷವನ್ನು ಧರಿಸಿ ಸರ್ವತ್ರ ಸಂಚರಿಸುತ್ತೇನೆ. ನಾನು ಸರ್ವಪ್ರಾಣಿಗಳ ಹೃದಯ ಕಮಲದಲ್ಲಿ ವಾಸಿಸಿರುತ್ತೇನೆ ಯಾರು ನನ್ನನ್ನು ಪ್ರೇಮಭಾವದಿಂದ ಭಜಿಸುವರೋ ಅಂತಹ

ನನ್ನ ಭಕ್ತರಿಗೂ ನನಗೂ ತಿಲಮಾತ್ರ ಭೇದವಿಲ್ಲ. ಗುರೂಕ್ತವಾದ ಆಚರಣೆಯುಳ್ಳ ಪರಿಪೂರ್ಣರಾದ ಶಿವಭಕ್ತರನ್ನು ಶಿವನೆಂದು ಭಾವಿಸಿ ಅವರೊಡನೆ ಸಂಭಾಷಣಾದಿ ಕಾರ್ಯಗಳನ್ನು ನಡಿಸು. ಈ ದೃಷ್ಟಪ್ರಪಂಚವೆಲ್ಲ ಮಾಯೆಯ ಪಸಾರವಾಗಿದೆ, ಅಹಂಕಾರ ಮಮಕಾರ ಇವೆರಡರ ಆಧಾರ ಸ್ತಂಭಗಳ ಮೇಲೆ ಈ ಪ್ರಪಂಚವು ನಿಂತಿರುವದು. ನಿನ್ನ ಯಥಾರ್ಥ ಸ್ವರೂಪವು ಶಿವಸ್ವರೂಪವೆಂದು ಚನ್ನಾಗಿ ಅರಿಶುಕೊಂಡು ಅಹಂಕಾರವನ್ನು ನೀಗಿ ಸರ್ವತ್ರ ಈಶ್ವರಾನುಸಂಧಾನ ಮಾಡು. ಗೋರಕ್ಷಕಾ, ಒಮ್ಮನಸ್ಸಿನಿಂದ ಲಿಂಗರೂಪಿಯಾದ ಗುಹೇಶ್ವರನನ್ನು ನಿಷ್ಠೆಯಿಂದ ಆರಾಧಿಸು ಲಿಂಗನಿಷ್ಠೆಯುಳ್ಳವರಿಗೆ ಶಿವೋಪಾಸಕರೆಂದು ಕರೆಯುವರು. ಇಂತಹ ಶಿವಭಕ್ತಿಸಂಪನ್ನರೂ ಶಿವೋಪಾಸಕರೂ ಮಾತ್ರ ಜೀವನ್ಮುಕ್ತಿ ಸುಖಾನುಭವವನ್ನು ಉಪಭೋಗಿಸುವರು. ಅವರೇ ಮುಕ್ತರೆನಿಸುವರು.

ಗೋರಕ್ಷನಾಥ—ಮಹಾಮಹಿಮನೆ, ನೀನು ಹೇಳುವದೆಲ್ಲ ನಿಜ; ಅಧ್ಯಾತ್ಮಶಾಸ್ತ್ರದಲ್ಲಿ ಹೇಳಿದಂತೆ ವರ್ತಿಸಿದರೆ ಸಾಕು. ಗುರೂತ್ತಮನೆ ನೀನೆ ಸ್ವತಃ ಗುಹೇಶ್ವರನಿದ್ದ ಪಕ್ಷದಲ್ಲಿ ನಿನ್ನ ಅಂಗದಮೇಲೆ ಲಿಂಗವಿರುವ ಕಾರಣವೇನು? ನೀನು ಸ್ವತಃ ಚಿದ್ರೂಪನೂ ನಿರಂಜನನೂ ನಿರ್ಗುಣನೂ ಆಗಿರುವದರಿಂದ, ನಿನ್ನ ಶರೀರದಲ್ಲಿ ಇಷ್ಟಲಿಂಗ ಸಂಬಂಧವಾಗಲಿಕ್ಕೆ ಯಾವಕಾರಣವು ತೋರುವದಿಲ್ಲ. ಈ ಭೇದ ಕಲ್ಪನೆಯು ನಿನಗೆ ಶೋಭಿಸದು.

ಅಲ್ಲಮಪ್ರಭು—ಎಲೈ ಗೋರಕ್ಷನಾಥನೆ, ನಾನು ಅದ್ವಿತೀಯ ನಿದ್ದೇನೆ. ಭಕ್ತಾನುಗ್ರಹಕ್ಕಾಗಿ ಭೂಮಿಯಲ್ಲವತರಿಸಿದರೂ ಚಿತ್ಸ್ವರೂಪ ಪ್ರಾಣಲಿಂಗವನ್ನು ( ಇಷ್ಟಲಿಂಗವನ್ನು ) ಯಾವಾಗಲು ಧರಿಸಿರುವೆನು. ಶ್ರೇಷ್ಠರು ಆಚರಿಸಿದಂತೆ ಇತರರು ಆಚರಿಸುವರು. ಲೋಕೋದ್ಧಾರಾರ್ಥ ನಾನು ಇಷ್ಟಲಿಂಗ ಸಂಬಂಧಿ ಯಾಗಿದ್ದೇನೆ. ಅದು ಕೇವಲ ನನ್ನ ಸ್ವರೂಪವೇ ಇದ್ದಕಾರಣ ನಾನು ಎಂಥ ಜ್ಞಾನಿಯಾದರೂ ಕೂಡ ಅದರಿಂದ ಎಂದೂ ಅಗಲಿರಬಾರದು. ಲಿಂಗಧಾರಣೆಯಿಂದಲೇ ನನಗೆ ಜಂಗಮತ್ವವು ಪ್ರಾಪ್ತವಾಗಿದೆ. ಒಳಗೂ ಹೊರಗೂ ವ್ಯಾಪಿಸಿರುವ ಶಿವಲಿಂಗಕ್ಕೆ ಖಂಡಿತತ್ವವೂ ಭೇಧವೂ ಇಲ್ಲ. ಇಷ್ಟ ಲಿಂಗಾರಾಧನೆಯಿಂದ ಭಕ್ತಿಮುಕ್ತಿಗಳು ಮಾನವರಿಗೆ ಸುಲಭವಾಗಿ ದೊರೆಯುವವು. ಅನನ್ಯವಾದ ಶಿವಭಕ್ತಿಗೆ ಲಿಂಗಪೂಜೆಯೇ ಶ್ರೇಷ್ಠವಾದ ಭೂಷಣವು. ನನಗೂ ಇಷ್ಟಲಿಂಗಕ್ಕೂ ಸ್ವಲ್ಪದರೂ ಭೇಧವಿಲ್ಲ. ಒಳಗೂ ಹೊರಗೂ ಪ್ರಕಾಶವುಳ್ಳ ಪರಂ ಜ್ಯೋತಿ ಲಿಂಗಕ್ಕೂ ನನಗೂ ಏನೂ ಅಂತರವಿಲ್ಲೆಂಬದನ್ನು ನಾನು ನಿನಗೆ ಸ್ಪಷ್ಟ ವಾಗಿ ತೋರಿಸುವೆನು. ಭಕ್ತಿಜ್ಞಾನವೈರಾಗ್ಯಶೀಲರಾದ ಶಿವಶರಣರಿಗೆ ಸಮ್ಮತ

ವಾದ ಮತ್ತು ಸರ್ವ ಸಂಶಯುಗಳನ್ನು ದೂರಮಾಡುವಂಥ ಎಂಬತ್ತುಕೋಟ ವಚನಗಳನ್ನು ಲೋಕೋಪಕಾರಕ್ಕಾಗಿ ನಾನು ರುಚಿಸಿರುವೆನು. ಈ ವಚನಗಳು ವೇದಾಗಮಶಾಸ್ತ್ರ ಪುರಾಣ ಇವುಗಳ ಅರ್ಥಕ್ಕನುಸರಿಸಿ ಅವೆ. ಯಾರು ವಿಚಾರ ಪೂರ್ವಕವಾಗಿ ಅವುಗಳನ್ನು ಕೇಳುವರೋ, ಅವರ ಪಾಪರಾಶಿಗಳು ನಾಶವಾಗಿ ಈ ಜನ್ಮದಲ್ಲಿಯೇ ಅವರಿಗೆ ಜ್ಞಾನೋದಯುವಾಗಿ ಮೋಕ್ಷಪ್ರಾಪ್ತಿಯಾಗುವದು. ವೈರಾಗ್ಯ ಸಂಪನ್ನರಾದ ಶಿವಭಕ್ತರ ಚಿತ್ಸ್ವರೂಪವೆಂಬ ಭೂಮಿಯಲ್ಲಿ ಶಿವಭಕ್ತಿ ಶಿವಜ್ಞಾನಗಳೆಂಬ ಉತ್ತಮೋತ್ತಮ ಬೀಜಗಳನ್ನು ಬಿತ್ತುವದಕ್ಕಾಗಿ ನಾನು ಶಿವ ಯೋಗಿಗಳ ವೇಷವನ್ನು ಧಾರಣಮಾಡಿರುವೆನು. ಅದರಿಂದ ನನ್ನಲ್ಲಿ ಯಾವತರಹ ಭೇಧಕಲ್ಪನೆಯು ಇರುವದಿಲ್ಲ. ನಾನು-ನನ್ನದು, ಅವನು-ಅವನದು ಎಂಬದಾಗಿ ಸ್ವಲ್ಪಾದರೂ ನನ್ನಲ್ಲಿ ಅಭಿಮಾನವಿಲ್ಲದಂತೆ ವರ್ತಿಸುವೆನು. ನೀರಿನಲ್ಲಿರುವ ಕಮಲಪತ್ರವು ನೀರಿನಿಂದ ಭಿನ್ನವಾಗಿರುವಂತೆ, ನಾನು ಸರ್ವದಾ ಅಭಿಮಾನ ರಹಿತನಾಗಿರುವೆನು. ನನ್ನ ಸ್ವರೂಪವನ್ನು ನೀನು ಚನ್ನಾಗಿ ತಿಳಿದುಕೊ. ಲಿಂಗಾಂಗ ಸಂಬಂಧದಿಂದುಂಟಾದ ಶಿವಜ್ಞಾನದಲ್ಲಿ ದೃಢವಾದ ವಿಶ್ವಾಸವುಳ್ಳ ವೀರಶೈವರು ನನ್ನನ್ನು ಆರಾಧಿಸುತ್ತಾರೆ. ಅವರು ಮಾತ್ರ ನನ್ನ ಮಹಿಮೆಯುನ್ನು ತಿಳಿಯಲು ಯೋಗ್ಯರು. ಇದರಲ್ಲಿ ಸಂದೇಹವೇನೂ ಇಲ್ಲ. ನಿನ್ನ ಮನಸ್ಸಿನಲ್ಲಿ ಏನಾದರು ಸಂಶಯುವಿದ್ದರೆ ಇಗೋ ನೋಡು—ಎಂದು ವಿದ್ಯುಲ್ಲತೆಯುಂತೆ ಚಕಚಕಿತ ಪ್ರಕಾಶವುಳ್ಳ ಇಷ್ಟಲಿಂಗದಲ್ಲಿ ಅಲ್ಲಮನು ತನ್ನ ಸಮಾಧಿಯ ಸಾಮರ್ಥ್ಯದಿಂದ ಲೀನನಾದನು.

ಆಸಮಯುದಲ್ಲಿ ಗೋರಕ್ಷನಾಥನು ಅಲ್ಲಮಪ್ರಭುವಿನ ಕಯ್ಯಲ್ಲಿದ್ದ ಇಷ್ಟಲಿಂಗವನ್ನು ಜೋರಿನಿಂದ ತೆಗೆದುಕೊಳ್ಳಬೇಕೆಂದು ಪ್ರಯತ್ನ ಮಾಡಿದರೂ ಅವನಿಂದ ಹಾಗೆ ಮಾಡುವದಾಗಲಿಲ್ಲ. ಆ ಲಿಂಗವು ಅವನ ಕಣ್ಣಿಗೆ ಕಾಣಿಸಿದರೂ ಅದನ್ನು ತೆಗೆದುಕೊಳ್ಳಲಿಕ್ಕಾಗಲಿಲ್ಲ; ಯಾಕಂದರೆ, ಅದು ಆಕಾಶದಂತೆ ನಿರಾಕಾರವಾಯಿತು. ಅದರಿಂದ ಗೋರಕ್ಷನಾಥನ ಮನಸ್ಸಿನಲ್ಲಿ ಅತ್ಯಂತ ಆಶ್ಚರ್ಯವುಂಟಾಗಿ ಭೀತಿಯಿಂದ,

ಗೋರಕ್ಷನಾಥ—"ಪರಮೇಶ್ವರನೇ, ನಿನ್ನ ಮಹಿಮೆಯು ವೇದಾದಿಗಳಿಗೆ ನಿಲುಕದ್ದಿರುವಲ್ಲಿ, ಅಲ್ಪಬುದ್ಧಿಯುಳ್ಳ ನನಗೆ ಹ್ಯಾಗೆ ಗೋಚರವಾದೀತು? ನಿನ್ನ ಮಹಿಮೆಯುನ್ನು ಪರೀಕ್ಷಿಸಬೇಕೆನ್ನುವದು ಜೀವಂತ ಆನೆಯು ಹಲ್ಲುಗಳನ್ನು ಪರೀಕ್ಷಿಸುವ ಕಾರ್ಯಕ್ಕೆ ಸರಿಯಾಗುವದು. ಅದ್ದರಿಂದ ನನಗೆ ಹಿತೋಪದೇಶಮಾಡಿ ನನ್ನನ್ನುದ್ಧರಿಸು. ನನಗೆ ಶಿವದೀಕ್ಷೆ (ಲಿಂಗಧಾರಣ) ಯನ್ನು ಕೊಟ್ಟು ರಕ್ಷಿಸು"—

ಎಂದು ಅಲ್ಲಮಪ್ರಭುವನ್ನು ಅನೇಕತರದಿಂದ ಕೊಂಡಾಡಿದನು. ಪ್ರಭುದೇವರ ಮನಸ್ಸಿನಲ್ಲಿ ಆತನಬಗ್ಗೆ ಕೃಪಾರಸವುಂಟಾಗಿ. ಅವನಿಗೆ ಶಿವದೀಕ್ಷೆಯನ್ನು ಕೊಟ್ಟು ಮೂರು ಗುಣಗಳನ್ನು ನಾಶಗೊಳಿಸುವಂಥ ಮೋಕ್ಷವನ್ನು ದೊರಕಿಸಿ ಕೊಡುವಂಥ ರಹಸ್ಯವನ್ನು ಹೇಳಿದನು. ಅದರಿಂದ ಗೋರಕ್ಷನಾಥನು ಮೊದಲಿಗಿಂತ ಹೆಚ್ಚು ಶೋಭಾಯಮಾನನಾದನು; ಅಮೃತಪಾನಮಾಡಿದಂತೆ ಅತಿಶಯ ತೃಪ್ತಿಯನ್ನು ಪಡೆದನು ಆಗ್ಗೆ ಅವನಿಗೆ ಇತರ ಸಿದ್ಧಿಗಳು ತುಚ್ಛವೆನಿಸಿದವು; ಮಾಯೆಯನ್ನು ಹೊಡೆದು ಹಾಕಿ, ಶರೀರದ ಗುಣದರ್ಮಗಳನ್ನು ಜಯಿಸಿದನು; ಸ್ಥೂಲಸೂಕ್ಷ್ಮ ದೇಹಗಳ ಪರಸ್ಪರ ಸಂಬಂಧವನ್ನು ತಿಳಿದು, ಕಾರಣ ಶರೀರ ಮಧ್ಯದಲ್ಲಿದ್ದು ಕೊಂಡನು; ವಜ್ರದೇಹಿಯಾಗಿದ್ದೇನೆಂಬ ಭ್ರಮೆಯನ್ನು ದೂರಮಾಡಿ, ಚಿದಮಲವಾದ ಆಕಾಶ ಸದೃಶವಾದ ದೀವ್ಯದೇಹಿಯಾದನು. ಕೀಡೆಯು ಭ್ರಮರವನ್ನು ನೆನೆದು ಭ್ರಮರವಾಗುವಂತೆ, ಗೋರಕ್ಷನಾಥನು ಅಲ್ಲಮಪ್ರಭುವಿನ ಕೃಪೆಯಿಂದ ಶಿವಸ್ವರೂಪದಲ್ಲಿ ಬೆರೆದು, ಮುಕ್ತನಾದನು; ಶಿವಾದ್ವೈತ ಜ್ಞಾನೋದಯವು ಅವನಲ್ಲಿ ತೋರಿದ್ದರಿಂದ ಪ್ರಪಂಚವು ಅವನಿಗೆ ಸುಳ್ಳೆಂದು ಕಂಡಿತು. ಅನಂತರ ಅವನು ಸಂಸಾರಿಗಳ ಸಹವಾಸವನ್ನೂ ಅವರು ಮಾಡುವ ಉಪಚಾರವನ್ನೂ ಸಂಪೂರ್ಣವಾಗಿ ತೊರೆದನು. ಸಂಸಾರತಾಪದಿಂದ ಜನರನ್ನು ದೂರಮಾಡುವಂಥ ಶೈವಚಿನ್ಹಗಳಾದ ವಿಭೂತಿ ರುದ್ರಾಕ್ಷಾದಿಗಳನ್ನು ತನ್ನ ಶರೀರದಲ್ಲಿ ಸದಾ ಧರಿಸಿ, ಈಗಲೂ ಆ ಗೋರಕ್ಷನಾಥನು ಪಾತಾಳದಲ್ಲಿ ಶಿವಲಿಂಗಭಕ್ತನಾಗಿ ಚರಿಸುತ್ತಿರುವನು.

---



# ೧೫ನೆಯ ಅಧ್ಯಾಯ.



## ಅಲ್ಲಮಪ್ರಭುವು ಉಳಿದ ಸಾಧಕರಿಗೆ ಪಾರಮಾರ್ಥವನ್ನು ಬೋಧಿಸುವಿಕೆ.



ಹೀಗೆ ಅಲ್ಲಮಪ್ರಭುವು ಗೋರಕ್ಷನಾಥನಿಗೆ ಉತ್ತಮವಾದ ಶೈವೋಪದೇಶವನ್ನು ಕೊಟ್ಟು ಕೃತಾರ್ಥನನ್ನು ಮಾಡಿ ಅವನಿಗೆ ಸಿದ್ಧನಾಥನೆಂದು ಹೆಸರಿಟ್ಟನು. ಗೋರಕ್ಷನಾಥನು ಬಹು ಸತ್ಕಾರಪೂರ್ವಕವಾಗಿ ಅಲ್ಲಮಪ್ರಭುವನ್ನು ಪೂಜಿಸಲು, ಅವನ ಪೂಜಾ ಸತ್ಕಾರಗಳನ್ನು ಕೈಕೊಂಡು ಆತನ ಆಶ್ರಮವನ್ನು ಬಿಟ್ಟು ಅನ್ಯಕಡೆಗೆ ಸಂಚರಿಸಿದನು. ಹೀಗೆ ಬರುವ ಮಾರ್ಗದಲ್ಲಿ ಆತನು ಶ್ರೀಗಿರಿಯ ಹತ್ತರಿದ್ದ ಪಾತಾಳಗಂಗೆಯೆಂಬ ಮಂಗಳಪ್ರದವಾದ ನದಿಯನ್ನು ಕಂಡನು. ಆ ಪವಿತ್ರವಾದ ನದಿಯ ಎರಡೂ ದಂಡೆಗಳ ಮೇಲೆ ಎತ್ತರವಾದ ಗಿಡಗಳಿಂದ ಶೋಭಿಸುವಂಥ ಪಾವನಾತ್ಮಕರಾದ ಸಜ್ಜನರ ಸಹವಾಸದಿಂದ ಹೆಚ್ಚಿನ ಮಹತ್ವವನ್ನು ಪಡೆದಂಥ ಒಂದು ಋಷ್ಯಾಶ್ರಮವು ಅವನ ದೃಷ್ಟಿಗೆ ಬಿತ್ತು. ಅದು ಅನೇಕ ಪ್ರಕಾರದ ಹೂವಿನ ಗಿಡಗಳಿಂದ ಮತ್ತು ಹಣ್ಣುಗಳುಳ್ಳ ಗಿಡಗಳಿಂದ ಹೆಚ್ಚು ಶೋಭಾಯಮಾನವಾಗಿತ್ತು. ಅದರಲ್ಲಿದ್ದ ಪಶುಪಕ್ಷಿ ಮೃಗಾದಿಗಳು ತಮ್ಮ ತಮ್ಮ ಸ್ವಾಭಾವಿಕ ಜಾತಿವೈರತ್ವವನ್ನು ಮರೆತು, ಎಲ್ಲವೂ ಸಖ್ಯತ್ವದಿಂದ ಇದ್ದವು. ಹುಲಿಯು ಜಿಂಕೆಯು ಕೂಡ ಬೆಕ್ಕು ಇಲಿಯು ಕೂಡ ಪ್ರೀತಿ ಪುರಸ್ಸರವಾಗಿ ಆಡುತ್ತಿದ್ದವು. ಆನೆಯು ಸಿಂಹನೊಡನೆ ಸಖ್ಯತ್ವವನ್ನು ಬೆಳಸಿತ್ತು; ಗಿಳಿಯುಮರಿಗಳು ಬೆಕ್ಕಿನ ಕೂಡ ಹಾಸ್ಯವಾಡುತ್ತಿದ್ದವು; ಹೀಗೆ ಸರ್ವಜಾತಿಯ ಪ್ರಾಣಿಗಳು ತಮ್ಮ ನೈಸರ್ಗಿಕ ವೈರಭಾವವನ್ನು ತೊರೆದು ಪರಮ ಪ್ರೀತಿಯಿಂದ ವರ್ತಿಸುತ್ತಿದ್ದವು. ಅಲ್ಲಮನು ತಮ್ಮ ಕಡೆಗೆ ಬರುವದನ್ನು ಅಲ್ಲಿದ್ದ ಋಷಿಗಳು ನೋಡಿ ತಾವು ಧನ್ಯರಾದೆವೆಂದು ಹಿಗ್ಗಿ ಆತನಿಗೆ ಶರಣು ಹೋದರು. ಅವನನ್ನು ಅರ್ಘ್ಯ-ಪಾದ್ಯಾದಿಗಳಿಂದ ಯಥಾವಿಧಿ ಪೂಜಿಸಿ ಉತ್ತಮವಾದ ದರ್ಭಾಸನದ ಮೇಲೆ ಕೂಡ್ರಿಸಿದರು. ಮತ್ತು ಅವನ

ನ್ನು ಬಹಳವಾಗಿ ಕೊಂಡಾಡಿ, ಸಂಸಾರ ತಾಪದಿಂದ ಬೆಂದುಹೋದ ತಮ್ಮನ್ನು ಶಿವತತ್ತ್ವೋಪದೇಶದಿಂದ ರಕ್ಷಿಸಿ ತಮ್ಮ ದುಃಖವನ್ನು ದೂರ ಮಾಡಬೇಕೆಂದು ಬಹು ಭಕ್ತಿಯಿಂದ ಬೇಡಿಕೊಂಡರು. ಅವರ ಭಕ್ತಿಪೂರ್ವಕವಾದ ಪ್ರಾರ್ಥನೆಯಿಂದ ಅಲ್ಲಮನು ಕೃಪಾವಿಷ್ಟನಾಗಿ ಅವರಿಗೆ ಉಪದೇಶ ಮಾಡಲು ಸಿದ್ಧನಾದನು. ಅವರ ಶರೀರವೆಂಬ ಸಮುದ್ರದಿಂದ ಚಿದ್ರೂಪವೆಂಬ ರತ್ನವನ್ನು ಶೋಧಿಸಿ ಕಡೆಗೆ ತೆಗೆದು ಲಿಂಗವೆಂಬ ಒರೆಗಲ್ಲಿನ ಮೇಲೆ ಅದನ್ನು ಚನ್ನಾಗಿ ತಿಕ್ಕಿ ಜ್ಞಾನರೂಪವೆಂಬ ಪ್ರಕಾಶವನ್ನು ಹೊರಗೆಡಹಿದನು. ಉತ್ತಮ ಪ್ರಕಾರದ ಶ್ರದ್ಧೆಯನ್ನು ತೋರಿಸಿ ಅವರನ್ನು ಸನ್ಮಾರ್ಗದಲ್ಲಿ ತೊಡಗಿಸಿದನು. ಬುದ್ಧಿಯ ಚಂಚಲತ್ವವನ್ನೂ ನಾನು-ನೀನೆಂಬ ಭೇದ ಕಲ್ಪನೆಯನ್ನೂ ಕಿತ್ತುಹಾಕಿದನು. ಕಡೆಗೆ ಪ್ರಣವದ ಯಥಾರ್ಥ ಜ್ಞಾನವನ್ನು ಅವರಿಗೆ ನಿರೂಪಿಸಿ ಸಂತೋಷಗೊಳಿಸಿದನು. ಬಳಿಕ ಅವರನ್ನು ಕುರಿತು "ಎಲೈ ಮುನಿಗಳೆ, ಪಾಪ-ಪುಣ್ಯವೆಂಬ ಎರಡು ಪ್ರಕಾರದ ಕರ್ಮಗಳ ಭೇದವನ್ನು ಯಾವಾತನು ತನ್ನ ಹೃದಯದಲ್ಲಿ ತಿಳಿದುಕೊಳ್ಳುವದಿಲ್ಲವೋ, ಅವನಿಗೆ ಶಂಭುವಿನ ಕೃಪೆಯಾಗುವದಿಲ್ಲ; ಮಹೇಶ್ವರನ ಕೃಪೆಯಿಲ್ಲದೆ ಮನವು ಶುದ್ಧವಾಗದು; ಮನವು ಶುದ್ಧವಾಗದೆ ಭ್ರಾಂತಿಯಳಿಯದು; ಭ್ರಾಂತಿಯು ನಾಶವಾಗದೆ ಶಿವಜ್ಞಾನವಾಗದು; ಶಿವಜ್ಞಾನವಿಲ್ಲದಿದ್ದರೆ ಮೋಕ್ಷವಿಲ್ಲ. ಇದು ಶ್ರುತಿ ಯುಕ್ತಿ ಅನುಭವ ಮುಂತಾದವುಗಳಿಂದ ಸ್ಪಷ್ಟವಾಗುತ್ತದೆ." ಎಂದು ಹೇಳಿದನು. ಅಲ್ಲಮನ ಈ ಭಾಷಣವನ್ನು ಕೇಳಿ ನಮಗೆ ಶಿವದೀಕ್ಷೆಯನ್ನಿತ್ತು ಕೃತಾರ್ಥರನ್ನು ಮಾಡಬೇಕೆಂದು ಬೇಡಿಕೊಳ್ಳಲು, ಅಲ್ಲಮನು ಕೃಪಾವಿಷ್ಟ ಮಾನಸನಾಗಿ ಆ ಮುನಿಗಳಿಗೆ ಶಿವದೀಕ್ಷೆಯನ್ನು ಅನುಗ್ರಹಿಸಿ, ಲಿಂಗೈಕ್ಯಪದ ಪ್ರಾಪ್ತಿಗಾಗಿ ಸರ್ವದಾ ಜಾಗ್ರತರಾಗಿರಬೇಕೆಂದು ಹೇಳಿ, ಅವರಿಂದ ಪೂಜೆಗೊಂಡು ಮುಂದಕ್ಕೆ ಸಾಗಿದನು.

ಬರುಬರುತ್ತ ಅಲ್ಲಮನು ಒಂದು ವಿಶಾಲವಾದ ಅರಣ್ಯವನ್ನು ಕಂಡನು. ಅಲ್ಲಿ ಗಿಡಗಳು ಬಹುದಟ್ಟವಾಗಿ ಬೆಳೆದದ್ದರಿಂದ ಸೂರ್ಯನ ಬಿಸಿಲು ಕಾಣಿಸುತ್ತಿರಲಿಲ್ಲ. ಸಿಂಹ, ಆನೆ, ಹುಲಿ, ಚಿರ್ಚ ಮೊದಲಾದ ಅನೇಕ ಕ್ರೂರಮೃಗಗಳು ಅಲ್ಲಿ ವಾಸಮಾಡಿಕೊಂಡಿದ್ದವು. ಅಲ್ಲಮಪ್ರಭುವು ಈ ಭಯಾನಕವಾದ ಅರಣ್ಯದೊಳಗಿಂದ ಹೋಗುವಾಗ ಆ ಕ್ರೂರ ಪ್ರಾಣಿಗಳು ಅವನ ಸೇವೆಯನ್ನು ಮಾಡಿದವು. ಅವುಗಳ ಮಾಡಿದ ಸೇವೆಯನ್ನು ಕೈಕೊಂಡು ಬರುವಷ್ಟರಲ್ಲಿ ಒಬ್ಬ ಕ್ರೂರನಾದ ಬೇಡನನ್ನು ಕಂಡನು. ಅವನು ಕಟ್ಟಿಗೆಯ ಪಂಜರ-ಹುಲಿ ತೊಗಲಿನ ಗಾಡಿ-ಪಕ್ಷಿಗಳನ್ನು ಹಿಡಿಯಲೋಸುಗ ಜಾಳಿಗೆ-ಗಿಡಗ-ಮುಂಗಲಿ-ಶಿಕಾರಿ ನಾಯಿ ಮೊದಲಾದ ಬೇಟೆಗಾಗಿ ಬೇಕಾದ ಉಳಿದ ಯಾವತ್ತು ಸಾಮಗ್ರಿಗಳೊಡನೆ ಬರುತ್ತಿದ್ದನು. ಪ್ರಾಣಿಯು ಓಡುವದರಲ್ಲಿ ಎಷ್ಟು ಚಪಲವಿದ್ದರೂ ಅದನ್ನು

ಆ ಶೂರನಾದ ಬೇಡನು ಒಂದೇ ಬಾಣದಿಂದ ಕೊಲ್ಲುತ್ತಿದ್ದನು. ಸಿಂಹವು ಆನೆಯನ್ನು ಸುಲಭವಾಗಿ ಕೊಲ್ಲುವಂತೆ, ಆತನು ಆನೆಗಳನ್ನು ಅನಾಯಾಸವಾಗಿ ಹೊಡಿಯುತ್ತಿದ್ದನು. ಶರಭವು ಸಿಂಹವನ್ನು ಆಯಾಸವಿಲ್ಲದೆ ಹತಿಸುವಂತೆ, ಅವನು ಸಿಂಹವನ್ನು ವಧಿಸುತ್ತಿದ್ದನು. ಹುಲಿಯು ಸಹಜವಾಗಿ ಚಿಗರಿ ಮುಂತಾದ ಮೃಗಗಳನ್ನು ಹೊಡಿಯುವಂತೆ ಅವನು ಶ್ರಮವಿಲ್ಲದೆ ಹುಲಿ ಮೊದಲಾದ ಪ್ರಾಣಿಗಳನ್ನು ಏಕಕಾಲಕ್ಕೆ ಕೊಲ್ಲುತ್ತಿದ್ದನು. ಆದ್ದರಿಂದ ಅವನು ಪಶುಗಳಿಗೆ ಮೂರ್ತಿಮಂತ ಪ್ರಳಯಕಾಲದ ಯಮನಂತೆ ತೋರುತ್ತಿದ್ದನು. ರಾಕ್ಷಸನಂಥ ಈ ಕ್ರೂರ ಸ್ವಭಾವದ ಬೇಡನನ್ನು ನೋಡಿ ಅಲ್ಲಮನು ಮನಸ್ಸಿನಲ್ಲಿ "ಇವನು ಈವರೆಗೂ ಎಷ್ಟು ಜೀವಿಗಳ ಹಿಂಸೆಯನ್ನು ಮಾಡಿರಬಹುದು! ಈತನು ಈಗಲೆ ಯಮಪುರದ ದಾರಿಕಾರನಾಗಿರುವನು!! ಈತನನ್ನು ನಾನು ಕಂಣಿನಿಂದ ನೋಡಿ ಸುಮ್ಮನೆ ಹೇಗೆ ಹೋಗಲಿ? ಹಾಗೇ ಹೋಗುವದು ನನ್ನ ಮನಸ್ಸಿಗೆ ಬರುವದಿಲ್ಲ." ಎಂದು ಚಿಂತಿಸಿ, ದಯಾದ್ರ್ರ ಹೃದಯನಾಗಿ, ಆತನಿಂದ ಜರಗುವ ಕ್ರೂರ ಹಿಂಸೆಯನ್ನು ತಪ್ಪಿಸಬೇಕೆಂದು ಯೋಚಿಸಿ "ಎಲೈ ಬೇಡನೆ, ನಿನ್ನಲ್ಲಿರುವ ಕ್ರೂರವಾದ ಇಂದ್ರಿಯಗಳ ಬೇಟೆಯಾಡುವದನ್ನು ಬಿಟ್ಟು ಹೊರಗಿರುವ ಅನೇಕ ನಿರುಪದ್ರವ ಪ್ರಾಣಿಗಳ ಬೇಟೆಯನ್ನಾಡಿ, ಜೀವಹಿಂಸಾರೂಪ ಪಾಪವನ್ನು ಯಾಕೆ ನಿನ್ನ ಪದರಿನಲ್ಲಿ ಕಟ್ಟಿಕೊಳ್ಳುವಿ?" ಎಂದು ನುಡಿಯಲು, ಅಲ್ಲಮನ ಮಾತುಗಳನ್ನು ಕೇಳಿದ ಕೂಡಲೆ ಹಾಗೂ ಆ ಮಹಾನುಭಾವನನ್ನು ನೋಡಿದೊಡನೆಯೆ, ಮಹಾತ್ಮರ ಸಂದರ್ಶನ ಸಂಭಾಷಣಗಳು ಕಲ್ಯಾಣಕರವಾಗಿರುವದರಿಂದ ಅವನ ಸರ್ವಪಾಪಗಳು ನಾಶವಾಗಿ ದೇಹವು ಪವಿತ್ರವಾಯಿತು; ಇಂದ್ರಿಯಗಳು ಸ್ವಾಧೀನವಾಗಿ ಬುದ್ಧಿಯು ನಿರ್ಮಲವಾಯಿತು. ಆಕ್ಷಣದಲ್ಲಿಯೇ ಆ ಬೇಡನು ತನ್ನ ಕಯ್ಯಲ್ಲಿಯ ಖಡ್ಗವನ್ನು ನೆಲಕ್ಕೆ ಚಲ್ಲಿ ಅನನ್ಯಭಕ್ತಿಯಿಂದ ಆ ಪ್ರಭುವಿನ ಪಾದಗಳ ಮೇಲೆ ಬಿದ್ದನು. ಅನಂತರ ಕೈಜೋಡಿಸಿ ನಿಂತುಕೊಂಡು,

ಬೇಡ—ಎಲೈ ಕೃಪಾಸಮುದ್ರನಾದ ಗುರುವರ್ಯನೆ, ಅಂತರ ಶತ್ರುಗಳನ್ನು ಬೇಟೆಯಾಡುವ ರೀತಿಯನ್ನು [ ಇಂದ್ರಿಯ ನಿಗ್ರಹದ ಕರ್ಮವನ್ನು ] ನನಗೆ ಹೇಳಿಕೊಟ್ಟು ನನ್ನ ಜನ್ಮವನ್ನು ಸಾರ್ಥಕ ಮಾಡಬೇಕು.

ಅಲ್ಲಮಪ್ರಭು—ಎಲೈ ಬೇಡನೆ, ಈ ಶರೀರವೆಂಬ ಅರಣ್ಯದಲ್ಲಿ ಅಹಂಕಾರವೆಂಬ ಪಶುವಿರುವದು. ಅದರ ವಾಸನೆಗಾಗಿ ಅಂದರೆ ಅದರ ರುಚಿಗಾಗಿ ಇಂದ್ರಿಯಗಳೆಂಬ ನಾಯಿಗಳು ಸಿದ್ಧವಾಗಿರುವವು. ಅಂತಹ ನಾಯಿಗಳನ್ನು ದೃಢಮನವೆಂಬ ಕಬ್ಬಿಣದ ಸರಪಳಿಯಿಂದ ಗಟ್ಟಿಯಾಗಿ ಬಿಗಿದು ಹಿಡಿಯಬೇಕು. ಅನಂತರ ವಾಯುನಿರೋಧವೆಂಬ ಜಾಳಿಗೆಯಲ್ಲಿ ಅಹಂಕಾರವೆಂಬ ಪಶುವನ್ನು ಒಯ್ದು

ನಿಲ್ಲಿಸಿ ಜ್ಞಾನದೃಷ್ಟಿ ವಿವೇಕವುಳ್ಳ ಬೇಡನೆಂಬ ನೀನು ಕಯ್ಯಲ್ಲಿ ಧೈರ್ಯವೆಂಬ ಧನುಸ್ಸನ್ನು ಧರಿಸಿ ಆ ಪಶುವನ್ನು ಕೊಲ್ಲಲುಯತ್ನಿಸು. ನಾನೇ ಈಶ್ವರನೆಂಬ ಬುದ್ಧಿರೂಪ ಬಾಣವನ್ನು ಆ ಧನುಸ್ಸಿನ ದಾರಕ್ಕೆ ಹೂಡಿ ಅಹಂಕಾರವೆಂಬ ಪಶು ವನ್ನು ಹೊಡೆದು ಭೂಮಿಯ ಮೇಲೆ ಕೆಡವಿ ಬಿಡು. ಹೀಗೆ ಮಾಡಿದರೆ ನೀನು ಕೃತಾರ್ಥನಾಗುವಿ—ಎಂದು ಬೇಡನಿಗೆ ಬೋಧಿಸಿ ಆತನನ್ನು ಆನಂದ ಸಮುದ್ರ ದಲ್ಲಿ ಓಲಾಡುವಂತೆ ಮಾಡಿ, ಗುರುವರ್ಯನು ಶ್ರೀಗಿರಿಯಿಂದ ಇಳಿದು ಉತ್ತರ ದಿಕ್ಕಿನ ಮಾರ್ಗವಾಗಿ ನಡೆದನು.

ಅಲ್ಲಮಪ್ರಭುವು ತನ್ನ ಪಾದದರ್ಶನದಿಂದ ಸರ್ವಪ್ರಾಣಿಗಳ ದೋಷಗಳನ್ನು ಪರಿಹರಿಸಿ ಅವರನ್ನು ನಿರ್ಮಲರಾಗಿ ಮಾಡುತ್ತಿದ್ದನು. ಯಾವಾಗಲು ಸ್ತ್ರೀಯರ ಮೊಲೆಗಳನ್ನೇ ನೋಡುತ್ತ ಕಾಮಕಿಂಕರರಾಗಿ ವಿಷಯಸುಖ ಲೋಲುಪರಾದ ವಿಲಾಸಿ ಪುರುಷರು ಕೂಡ ಅಲ್ಲಮಪ್ರಭುವಿನ ದರ್ಶನದಿಂದ ವಿವೇಕಿಗಳಾಗಿ ನಮಗೆ ಮೋಕ್ಷಮಾರ್ಗವನ್ನು ತೋರಿಸಿ, ನಮ್ಮನ್ನುದ್ಧರಿಸಬೇಕೆಂದು ಪ್ರಾರ್ಥಿಸುತ್ತಿ ದ್ದರು. ಅಲ್ಲಮಪ್ರಭುವು ಅವರಿಗೆ ಅಂತರಕುಂಡಲಿನಿಶಕ್ತಿಯ ಜ್ಞಾನವನ್ನುಂಟು ಮಾಡಿ ಅವರ ಮನಸ್ಸಿನಲ್ಲಿ ಸ್ತ್ರೀವಿಷಯವಾಗಿ ವಿರಕ್ತಿಯನ್ನು ಹುಟ್ಟಿಸಿ ಅವ ರನ್ನು ಪರಮಾನಂದ ಗೋಳಿಸುತ್ತಿದ್ದನು. * ಇಂಥ ವಿಷಯಾಂಧರಿಗೆ ವೈರಾಗ್ಯವನ್ನು ಹುಟ್ಟಿಸುವದು ಸಾಧಾರಣ ಕೆಲಸವಲ್ಲ. ಇದರಂತೆ ಅನೇಕ ಸಿದ್ಧರಿಗೆ ಅವರವರ ಇಚ್ಛಾನುಸಾರವಾಗಿ ಸಿದ್ಧಿಗಳ ಮಾರ್ಗ ವನ್ನುಪದೇಶಿಸಿ ಅವರನ್ನುದ್ಧರಿಸುತ್ತ ಮುಂದಕ್ಕೆ ಸಾಗುತ್ತಿದ್ದನು. ಹೀಗೆ ಸಂಚರಿ ಸುತ್ತಿರಲು ಮಾರ್ಗದಲ್ಲಿ ಒಂದು ವನವಿತ್ತು. ಆ ವನದಲ್ಲಿ ಅನೇಕ ಫಲಪುಷ್ಪಗ ಳಿಂದ ಸುಶೋಭಿತವಾದ ಮತ್ತು ಆಶ್ರಯಿಸಿದವರ ಶ್ರಮವನ್ನು ದೂರಮಾಡುವ ಒಂದು ಮುನಿಗಳ ಆಶ್ರಮವನ್ನು ಕಂಡನು. ಆ ಆಶ್ರಮದಲ್ಲಿ ಮಾವು ಚಂದನ ಚಂಪಕ ಮೊದಲಾದ ನಾನಾತರದ ಗಿಡಗಳಿದ್ದವು. ಸತ್ಯಸಂಧರಾದ, ಶಮದ ಮಾದಿ ಸಾಧನಸಂಪನ್ನರಾದ, ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಯಥಾವಿಧಿ ಮಾಡುವ ಅನೇಕ ಮುನೀಶ್ವರರ ಸಣ್ಣಸಣ್ಣ ಗುಡಸಲುಗಳನ್ನು ಕಟ್ಟಿಕೊಂಡಿರುತ್ತಿ ದ್ದರು. ಅಲ್ಲಿ ಮಾವಿನ ವೃಕ್ಷಗಳ ಮೇಲೆ ಕೂಳಿತ ಕೋಕಿಲೆಗಳು ಮಂಜುಳ

---

* ಕಾಮಿನಿಯರಿಗೆ ಸೋತು ಕಾಲಿನ । ಸೀಮೆಯಲಿ ಸಲೆ ಸತ್ತು ಹುಟ್ಟುವ ।
ಕಾಮಿಗಳಿಗಾ ಕುಂಡಲೀ ಶಕ್ತಿಯ ಮಹಾರತಿಯ ॥
ನೇಮಿಸಿಯೆ ನಿರ್ಮಾಯದಲಿ ನಿ । ಸ್ಸೀಮ ನಿತ್ಯಾನಂದ ಸುಖದ ।
ದ್ಧಾಮತೆಯ ನೊಲಿದಿತ್ತನಾ ಪ್ರಭುಲಿಂಗ ಕೆಲಬರಿಗೆ ॥

ಸ್ವರದಿಂದ ಹಾಡುತ್ತಿದ್ದವು. ಸರೋವರಕ್ಕೆ ಕ್ರೀಡಾರ್ಥವಾಗಿ ಬಂದ ರಾಜಹಂಸ ಕಲಹಂಸ ಮೊದಲಾದವುಗಳು ಮಧುರವಾದ ಗಾನವನ್ನು ಮಾಡುತ್ತಿದ್ದವು. ಅಲ್ಲಿದ್ದ ಮುಪ್ಪಿನ ಋಷಿಗಳು ನದಿಗೆ ಹೋಗುವಾಗ ಮಂಗಗಳು ಅವರ ಕಯ್ಯುಹಿಡಿದು ಕರೆದೊಯ್ಯುತ್ತಿದ್ದವು; ತಪಸ್ಸಿನಿಂದ ಕೃಶರಾದ ಮುನೀಶ್ವರರು ತಮ್ಮ ಜಡೆಗಳನ್ನು ಬಿಚ್ಚಿ, ಒಳ್ಳೆಯು ಕಸುವಿನಿಂದ ಜಾಡಿಸುವಾಗ, ಭೂಮಿಯ ಮೇಲಿದ್ದ ಸರ್ಪಗಳಿಗೆ ಅದರ ಹೊಡತ ಕೂತು ಉಬ್ಬಸಗೊಳ್ಳುತ್ತಿರಲು, ಅಲ್ಲಿರುವ ಮದ್ದಾನೆಗಳು ಬೀಸಣಿಕೆಯಂತಿರುವ ತಮ್ಮ ಕಿವಿಗಳನ್ನು ಅಲ್ಲಾಡಿಸಿ ಗಾಳಿಯನ್ನು ಹಾಕಿ ಅವುಗಳಿಗೆ ಸುಖವನ್ನುಂಟು ಮಾಡುತ್ತಿದ್ದವು. ತಿಂಗಳಿಗೊಂದಾವರ್ತಿ ಊಟಮಾಡುವ ಅತಿಕಠಿಣವಾದ ವ್ರತವನ್ನು ಕೈಕೊಂಡ ಮುನೀಶ್ವರರು ನಿಶ್ಚಲ ಮನಸ್ಸಿನಿಂದ ತಪಶ್ಚರ್ಯವನ್ನು ಮಾಡುತ್ತ ಕುಳಿತಿರುವರು; ಆ ವೇಳೆಯಲ್ಲಿ ಅಶಕ್ತತೆಯ ಮೂಲಕ ಅವರ ಆಸನವು ತಪ್ಪುತ್ತಿರಲು ಅದು ತಪ್ಪಬಾರದೆಂದು ಹುಲಿಗಳು ತಮ್ಮ ಬೆನ್ನನ್ನು ಅವರ ಬೆನ್ನಿಗೆ ಹಚ್ಚಿಕೊಂಡು ನಿಲ್ಲುತ್ತಿದ್ದವು. ಅವರ ತಪೋಬಲವು ಇಷ್ಟು ಅಗಾಧವಾಗಿತ್ತು. ಪಂಚಾಗ್ನಿ ಮಧ್ಯದಲ್ಲಿ ತಪಸ್ಸು ಮಾಡುವ ಮುನೀಶ್ವರರ ಶರೀರವು ಜಳದಿಂದ ಸುಟ್ಟು ಹೋಗುವದನ್ನು ಕಂಡು ಆನೆಗಳು ತಮ್ಮ ಸೊಂಡಿಯಲ್ಲಿ ನೀರು ತುಂಬಿಕೊಂಡು ಬಂದು ದಿನಾಲು ನಮ್ರತನದಿಂದ ಅವರ ಸುತ್ತುಮುತ್ತಿನ ಭೂಮಿಯ ಮೇಲೆ ಚಳಿಕೊಡುತ್ತಿದ್ದವು. ಹಂಸಗಳು ಕಮಲದ ದೇಂಟುಗಳನ್ನು ಕಿತ್ತು ತಮ್ಮ ಚಂಚುವಿನಿಂದ ಒಳಗಿನ ಸಣ್ಣ ಸಣ್ಣ ತಂತುಗಳನ್ನು ತೆಗೆದು ಋಷೀಶ್ವರರು ಯಜ್ಞೋಪವೀತಕ್ಕಾಗಿ ಉಪಯೋಗಿಸಲೆಂಬ ಆಶೆಯಿಂದ ಅವುಗಳನ್ನು ಅವರಿಗೆ ಭಕ್ತಿಪೂರ್ವಕವಾಗಿ ತಂದುಕೊಡುತ್ತಿದ್ದವು. ಶಿಷ್ಯಸಮೂಹವು ದಿನಾಲು ಸಮಿತ್ತನ್ನು (ಕಟ್ಟಿಗೆಯನ್ನು) ತಂದು ತಂದು ಕಷ್ಟಪಡುವರು; ಹಾಗಾಗಬಾರದೆಂದು ಅತಿಶಯ ಮುಪ್ಪಿನ ಮಂಗಗಳು ಸಮಿತ್ತನ್ನು ತಂದು ಅಗ್ನಿಯಲ್ಲಿ ಹಾಕುತ್ತಿದ್ದವು; ನವಿಲುಗಳು ತಮ್ಮ ಪುಚ್ಛದಿಂದ ಗಾಳಿಯನ್ನು ಬೀಸಿ ಕುಂಡದೊಳಗಿನ ಅಗ್ನಿಯನ್ನು ಪ್ರಜ್ವಲಗೊಳಿಸುತ್ತಿದ್ದವು. ಅಲ್ಲಿಯ ಯತಿಗಳಿಗೆ ಯಾರಿಂದಲೂ ಬಾಧೆಯಾಗಬಾರದೆಂದು ಅವರ ಪರ್ಣಕುಟಗಳ ಹತ್ತರ ಸಿಂಹಗಳು ಯಾವಾಗಲೂ ಎಚ್ಚರದಿಂದಿರುತ್ತಿರುದ್ದವು. ಅಲ್ಲಿದ್ದ ವಿದ್ವಾಂಸರು ವೇದಪಠಣ ಮಾಡುತ್ತ ತಮ್ಮ ಶಿಷ್ಯರಿಗೆ ಅವುಗಳ ಅರ್ಥವನ್ನು ಹೇಳುತ್ತಿದ್ದರು; ಮತ್ತು ತರ್ಕಾದಿಶಾಸ್ತ್ರಗಳ ವಿವೇಚನೆಯನ್ನು ಸಹ ಮಾಡುತ್ತಿದ್ದರು; ಈ ಶಬ್ದಗಳನ್ನು ಗಿಳಿಗಳು ಕೇಳಿ ಅವರಂತೆ ಶಬ್ದಮಾಡುತ್ತಿದ್ದವು. ಅತಿಶಯ ಬಿಸಿಲಿನಿಂದ ಬಂದ ಅತಿಥಿಗಳಿಗೆ ಯೋಗ್ಯ ಸತ್ಕಾರಮಾಡಿರಿ, ಅವರಿಗೆ ಮಧುರವಾದ ಆಹಾರವನ್ನು ಕೊಟ್ಟು ಉಪಚರಿಸಿರಿ, ಒಬ್ಬ ದೊಡ್ಡ ತಪಸ್ವಿ

ಯನ್ನು ಮರ್ಯಾದೆಯಿಂದ ಆದರಿಸುವಂತೆ ನಿಮ್ಮ ಮನೆಗೆ ಬಂದ ಅತಿಥಿಗೆ ಸಹ ಸತ್ಕಾರಮಾಡಿರಿ, ಹೀಗೆಂದು ಗುರುಗಳು ಶಿಷ್ಯರಿಗೆ ಮಾಡುವ ಉಪದೇಶವು ಅಲ್ಲಿ ಸರ್ವಕಡೆಗೂ ಕೇಳಿಸುತ್ತಿತ್ತು. ಭಸ್ಮೋದ್ಧೂಳಿತ ಕಾಯರಾದ ರುದ್ರಾಕ್ಷಮಾಲಾ ಭೂಷಿತರಾದ ಮುನಿಗಳು ತೇಜಃಪುಂಜರಾಗಿ ಕಂಗೊಳಿಸುತ್ತಿದ್ದರು. ಅವರು ಸಮಾಧಿ ಸುಖದಲ್ಲಿ ತಲ್ಲೀನರಾಗಿರುವಾಗ ಜಿಂಕೆಗಳು ತಮ್ಮ ಕೋಡುಗಳಿಂದ ಅವರ ಅವಯವಗಳನ್ನು ತುರಿಸುತ್ತಿದ್ದವು. ಸಮಾಧಿ ಸುಖದಲ್ಲಿದ್ದಾಗ ಅವರ ಕಣ್ಣುಗಳಿಂದ ಹೊರಟ ಆನಂದಾಶ್ರುಗಳ ಹನಿಗಳನ್ನು ಗಿಳಿಗಳು ಪಾನಮಾಡುತ್ತಿದ್ದವು.

ಹೀಗೆ ಆ ಮುನಿಗಳ ರಮಣೀಯವಾದ ತಪೋವನವನ್ನು ನೋಡಿ ಅವರಲ್ಲಿ ದಯೆಹುಟ್ಟಿ ಅಲ್ಲಮ ಪ್ರಭುವು ತನ್ನೊಳಗೆ "ಅಕಟಾ! ಈ ಜನರು ಎಷ್ಟು ಪ್ರಯಾಸದ ಕಾರ್ಯಗಳನ್ನು ಮಾಡುವರು! ಅವುಗಳ ಮಾನದಿಂದ ಫಲಪ್ರಾಪ್ತಿ ಯಾದರೂ ಎಷ್ಟು ಸ್ವಲ್ಪವದೆ!! ಕಬ್ಬಿಣದಿಂದ ನಾನಾತರದ ಆಭರಣಗಳನ್ನು ಮಾಡುವಂತೆ ಇವರ ವರ್ತನೆಯದೆ. ಇವರು ತಮ್ಮ ಮನೆ ಮಾರು ಹೆಂಡರು ಮಕ್ಕಳನ್ನು ಬಿಟ್ಟುಗೊಟ್ಟು ಈ ಅರಣ್ಯದಲ್ಲಿ ಬಂದಿರುವರು. ಶಿವಭಕ್ತಿ ಶಿವಾರ್ಚನೆ ಶಿವಧ್ಯಾನ ಮುಂತಾದುದನ್ನು ಮಾಡದೆ, ಹಣ್ಣುಹಂಪಲಗಳನ್ನು ಭಕ್ಷಿಸುತ್ತ ಯಜ್ಞಾದಿ ಜಡಕರ್ಮಗಳಲ್ಲಿ ನಿರತರಾಗಿದ್ದಾರೆ. ಅಕಟಕಟಾ!!! ಇವರು ಮಲಗೇವು ಕೂತೇವು ಉಂಡೇವು ಅಂದರೆ ಅದಕ್ಕಾಗಿ ಇವರಿಗೆ ಮನೆಯಿಲ್ಲ. ಹೊತ್ತು ಕೊಳ್ಳಲಿಕ್ಕೆ ಉತ್ತಮವಾದ ವಸ್ತ್ರಗಳೂ ಶಾಲಿಗಳೂ ಇಲ್ಲ, ನಾರು ಬಟ್ಟೆಗಳನ್ನು ಟ್ಟುಕೊಂಡು ಅತಿ ದುಃಖಿಗಳಂತೆ ಕಾಣುವರು. ಇದೆಷ್ಟು ಕಷ್ಟದ ಮಾತು! ಮಯ್ಯಮೇಲೆ ಬಂಗಾರ ಬೆಳ್ಳಿಗಳ ಆಭರಣಗಳಿಲ್ಲ, ಅದರಬದಲು ರುದ್ರಾಕ್ಷ ಮತ್ತು ಕಮಲಬೀಜಗಳ ಮಾಲೆಗಳು ಧರಿಸಲ್ಪಟ್ಟಿರುತ್ತವೆ. ಅಗ್ನಿಹೋತ್ರಕ್ಕಾಗಿ ಶರೀರವು ಭಸ್ಮಧಾರಣ ಮಾಡಿಕೊಳ್ಳುವರು. ಚಂದನ ಕೃಷ್ಣಾಗರು ಕಸ್ತೂರಿ ಮುಂತಾದ ಸುವಾಸಿಕ ಪದಾರ್ಥಗಳ ಹೆಸರು ಸಹ ಇವರಿಗೆ ಗೊತ್ತಿರಲಿಕ್ಕಿಲ್ಲ. ಇವರು ಹಣ್ಣುಹಂಪಲಗಳನ್ನು ಸೇವಿಸಿ ತಮ್ಮ ಹಸಿವೆಯನ್ನು ಕಳೆದುಕೊಳ್ಳುವರು. ಕೆರೆಬಾವಿಗಳಿದ್ದಲ್ಲಿ ನೀರಿನಿಂದ ತಮ್ಮ ನೀರಡಿಕೆಯನ್ನು ಪ್ರಶಮನ ಮಾಡಿಕೊಳ್ಳುವರು. ಆದರೆ ಇಷ್ಟೊಂದು ಕಡುತರವಾದ ತಪಸ್ಸಿನಿಂದ ಇವರಿಗೆ ಲಭಿಸುವದೆಂದರೆ ಸ್ವರ್ಗಸುಖ, ಈ ಸರ್ಗಸುಖ ಪ್ರಾಪ್ತಿಗೆ ಕಾರಣವಾದ ಪುಣ್ಯಕರ್ಮವು ತೀರಿದೊಡನೆಯೇ ಪುನಃ ಭೂಮಿಯು ಮೇಲೆ ಹುಟ್ಟಿ ಸಂಸಾರವೆಂಬ ಮಾಯೆಯ ಮಡುವಿನಲ್ಲಿ ಬೀಳುವರು. ಆದ್ದರಿಂದ ಜನನ ಮರಣದಿಂದ ಬಿಡುಗಡೆಯನ್ನು ಹೊಂದುವದಕ್ಕಾಗಿ ಆತ್ಮತತ್ವವನ್ನು ತಿಳಿಯಲಪೇಕ್ಷಿಸುವವರು ಮೊದಲು ಮಾಯೆ

ಯನ್ನು ಗೆಲ್ಲಬೇಕು. ಅದನ್ನು ಸಾಧಿಸುವ ಉಪಾಯವೆಂದರೆ—ದಿವ್ಯಚೈತನ್ಯದ ಕಲೆಯನ್ನು ಅರಿತುಕೊಳ್ಳುವದು. ಹೀಗೆ ಮಾಡದೆ ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಮಾಯಾಪಾಶವನ್ನು ಬಲಪಡಿಸುವರು. ಇವರ ಮೂರ್ಖತನವೆಷ್ಟೆಂದು ವರ್ಣಿಸಬಹುದು! ತ್ರಿಕಾಲಸ್ನಾನ ಮಾಡುವದರಿಂದಲೇ ಮುಕ್ತಿಯು ಲಭಿಸುವದಾದರೆ ಯಾವಾಗಲೂ ನೀರಿನಲ್ಲಿರುವ ಮೀನ ಮೊದಲಾದ ಪ್ರಾಣಿಗಳಿಗೆ ಮೋಕ್ಷಪ್ರಾಪ್ತಿಯಾಗಬೇಕಾದೀತು!! ತಲೆಕೆಳಗೆ ಮಾಡಿಕೊಂಡು ತಪಶ್ಚರ್ಯ ಮಾಡಲು ಜನನ ಮರಣವು ತಪ್ಪುವದಾದರೆ, ತೊಗಲಬಾವುಲಿಯು ಯಾವಾಗಲೂ ತನ್ನ ತಲೆಕೆಳಗೆ ಮಾಡಿಕೊಂಡು ಕೂಡ್ರೋಣದರಿಂದ ಅದಕ್ಕೂ ಮೋಕ್ಷವಾಗಬೇಕಾದೀತು!!! ಮೌನಧಾರಣ ಮಾತ್ರದಿಂದ ಮಾಯೆಯು ನಾಶವಾಗುತ್ತಿದ್ದರೆ, ಬಕಪಕ್ಷಿಯು ಮೀನಗಳನ್ನು ಹಿಡಿಯುವದಕ್ಕಾಗಿ ಕಣ್ಣು ಮುಚ್ಚಿಕೊಂಡು ಸುಮ್ಮನೆ ಕೂಡ್ರುವದರಿಂದ, ಅದಕ್ಕಾದರೂ ಮೋಕ್ಷವು ಲಭಿಸುತ್ತಿತ್ತು! ಒಳ್ಳೇದು, ಕೇವಲ ಸರ್ವಪ್ರಕಾರದ ಶಾಸ್ತ್ರಗಳನ್ನು ಕಲಿತುಮಾತಡಕ್ಕದ್ದೇನು? ಗಿಳಿಯಾದರೂ ಕಲಿಸಿದಂತೆ ಮಾತಾಡುವದು. ವಾಯು ಭಕ್ಷಣಮಾಡಿ ತಪಸ್ಸನ್ನಾಚರಿಸಲು ಮೋಕ್ಷವಾಗುತ್ತಿದ್ದಲ್ಲಿ, ಸರ್ಪವು ಕೂಡ ವಾಯು ಭಕ್ಷಣಮಾಡುವದರಿಂದ ಅದಕ್ಕೆ ಮೋಕ್ಷವಾಗಬೇಕಾಗಿತ್ತಲ್ಲವೇ? ಸಾರಾಂಶ—ಸ್ವರ್ಗಪ್ರಾಪ್ತಿಗಾಗಿ ಶರೀರಕ್ಕೆ ಬಾಧೆ ಕೊಟ್ಟು ಅನೇಕತರದ ಯಜ್ಞಾದಿಕರ್ಮಗಳನ್ನು ಮಾಡಿದರೆ, ಅದರಿಂದ ಮಾಯೆಯು ಮತ್ತಿಷ್ಟು ಅಭಿವೃದ್ಧಿಯನ್ನು ಹೊಂದುವದು; ಯಾಕಂದರೆ ಯಜ್ಞಾದಿ ಕರ್ಮಗಳು ಹೆಚ್ಚಿದರೆ ಮಾಯೆಯು ಹೆಚ್ಚುವದು. ಈ ಕರ್ಮಗಳನ್ನು ಮಾಡತಕ್ಕವನು ದೇಹಾಭಿಮಾನಿಯಾಗಿ ತಾನು ಇಂಥ ಗೋತ್ರಜನೆಂದೂ ವಿಶಿಷ್ಟ ಫಲಪ್ರಾಪ್ತಿಗೋಸುಗ ಮಾಡುವದರಿಂದ ಅಹಂಕಾರ ಮಮಕಾರವು ಹೆಚ್ಚಿ ಮಾಯೆಯು ಬೆಳೆಯುವದು. ಮೇಲೆ ಹೇಳಿದ ಕರ್ಮಗಳನ್ನು ಮಾತ್ರ ಆಚರಿಸುತ್ತ ಸ್ವರೂಪಜ್ಞಾನ ಮಾಡಿಕೊಳ್ಳದಿದ್ದರೆ ಅವುಗಳಿಂದ ಏನು ಪ್ರಯೋಜನವಾಗದು. ಈ ಮಾಯೆಯು ಸಂಪೂರ್ಣವಾಗಿ ನಾಶವಾಗದ ಹೊರತು ಆತ್ಮಬೋಧೆ ಅಥವಾ ಸ್ವರೂಪ ಜ್ಞಾನವುಂಟಾಗದು. ಸ್ವರೂಪಜ್ಞಾನವಿಲ್ಲದೆ ಸಾವಿರಾರು ತಪಸ್ಸುಗಳನ್ನೂ ವ್ರತೋಪವಾಸ ಯಜ್ಞಮೊದಲಾದವುಗಳನ್ನೂ ಮಾಡಿದಾಗ್ಗೂ ಮೋಕ್ಷವು ಲಭಿಸುವದಿಲ್ಲ. ಯಜ್ಞಾದಿಕರ್ಮಗಳು ಮಾಯೆಯ ವಿಕಾರಗಳೆಂದು ಭ್ರಮಿಷ್ಟರು ತಿಳಿಯಲಾರರು. ಆದ್ದರಿಂದಲೇ ಇವರು ಇಂತಹ ಮೂರ್ಖತನದಿಂದ ಕರ್ಮಾಚರಣೆಯಲ್ಲಿ ಮಗ್ನರಾಗಿದ್ದಾರೆ. ಬಾವಿಯ ಕಟ್ಟೆಯ ಮೇಲೆ ಆಡುತ್ತಿರುವ ಚಿಕ್ಕ ಮಕ್ಕಳನ್ನು ನೋಡಿ ಕೃಪಾವಿಷ್ಟ ಮನಸ್ಕನಾದ ಮನುಷ್ಯನು ಕೂಡಲೆ ಅವರನ್ನು ಅಲ್ಲಿಂದ ಎತ್ತಿಕೊಂಡು ಬರುವಂತೆ, ಮುಮುಕ್ಷುಗಳಾದೀ ಮುನಿಗಳಿಗೆ ಯೋಗ್ಯ

ರೀತಿಯಿಂದ ತತ್ವೋಪದೇಶ ಮಾಡಿ ಅವರನ್ನು ಉದ್ಧರಿಸಬೇಕು." ಹೀಗೆ ಮನಸ್ಸಿನಲ್ಲಿ ಯೋಚಿಸಿ ಆ ಮುನೀಶ್ವರರನ್ನು ಕುರಿತು, ಅಲ್ಲಮನು—"ಎಲೈ ಮುನಿಗಳೆ, ಎಂಥ ವ್ಯರ್ಥವಾದ ಆಡಂಬರಗಳಲ್ಲಿ ಸಿಲುಕಿರುವಿರಿ? ಕರ್ಮಗಳಿಗೆ ಅಂತ್ಯವಿಲ್ಲ. ಅವುಗಳ ಫಲಪ್ರಾಪ್ತಿಗಾಗಿ ಬಹು ಶ್ರಮ ಮಾಡಬೇಕಾಗುವದು. ಆದ್ದರಿಂದ ಮೋಕ್ಷಪ್ರಾಪ್ತಿಯು ನಿಮಗೆ ಸಹಜವಾಗಿ ಆಗುವ ಉಪಾಯವನ್ನು ಹೇಳುವೆನು. ಅದನ್ನು ನೀವು ಶ್ರದ್ಧೆಯಿಂದ ಕೇಳಬೇಕು. "ಶಿವಪೂಜಾ ಶಿವಧ್ಯಾನಗಳನ್ನು ನೀವು ಶಾಸ್ತ್ರೋಕ್ತವಾದ ರೀತಿಯಿಂದ ಮಾಡುತ್ತಿರಬೇಕು. ಅಹಿಂಸೆಯು ಮುಕ್ತಿಗೆ ಮೂಲಕಾರಣವೆಂಬದನ್ನು ನೀವು ಲಕ್ಷದಲ್ಲಿಟ್ಟು, ನೀವು ಮಾಡುತ್ತ ಬಂದಿರುವ ಕರ್ಮಗಳಿಂದ ಹಿಂಸೆಯುಂಟಾಗುವದರಿಂದ ಅವುಗಳನ್ನು ನೀವು ಸಂಪೂರ್ಣವಾಗಿ ತ್ಯಜಿಸಬೇಕು; ಯಾಕಂದರೆ ಶಿವಯೋಗಿಗಳೆನಿಸಿಕೊಳ್ಳುವವರು ಮನೋವಾಕ್ಕಾಯಗಳಿಂದ ಯಾರಿಗೂ ಹಿಂಸೆಯನ್ನು ಮಾಡಬಾರದು. ಯಾರು ಈ ಲೋಕದಲ್ಲಿ ಅನ್ಯರ ಹಿಂಸೆಯನ್ನು ಮಾಡುವರೋ ಅವರಿಗೆ ಮರಣಾನಂತರ ಯಮನು ತಕ್ಕ ಶೀಕ್ಷೆಯನ್ನು ವಿಧಿಸುವನು, ಇದು ಸತ್ಯ. ಆದ್ದರಿಂದ ನಿಮ್ಮಲ್ಲಿರುವ ಕರ್ಮಗಳ ವಿಷಯಕ ಅಜ್ಞಾನವನ್ನು ಕಿತ್ತುಹಾಕಿರಿ, ಅಭ್ಯಂತರ ಯಜ್ಞನದ ಪರಿಯನ್ನು ನಿಮಗೆ ಹೇಳುವೆನು. ಈ ಅಂತರ ಯಜ್ಞದಲ್ಲಿ ಅಹಂಕಾರವೇ ಪಶು, ವಾಯು ನಿರೋಧವೇ ಹಗ್ಗ, ಮನವೇ ವಧಸ್ಥಂಭ, ವಿಜ್ಞಾನವೇ ಅಗ್ನಿ, ಸೋಮರಸವೇ ಚಂದ್ರನಾಡಿಯಿಂದ ಹೊರಡುವ ಅಮೃತ, ಗೃಹಗಳ ಸಮುದಾಯವೇ ಸರ್ವಸುಷುಮ್ನ ಚಕ್ರ, ಆತ್ಮವೇ ಯಜಮಾನ, ಇಚ್ಛಿತ ಫಲವೇ ಮೋಕ್ಷಪ್ರಾಪ್ತಿ," ಎಂದು ಬೋಧಿಸಿದನು.

ಹೀಗೆ ಉಪದೇಶ ಮಾಡಲು, ಅವರು ಅದರಂತೆ ಅಂತರ ಯಜ್ಞವನ್ನು ಮಾಡಲಾಗಿ ಶಿವತತ್ವವು ಅವರಿಗೆ ಗೋಚರಿಸಿತು. ಅನಂತರ ಸದ್ಗುರುವಾದ ಅಲ್ಲಮಪ್ರಭುವಿನ ಕೃಪೆಯಿಂದ ಆ ಮುನಿಗಳೆಲ್ಲರು ಶಿವದೀಕ್ಷೆಯನ್ನು ಹೊಂದಿ, ಅದರಿಂದ ಮಾಯಾಪಾಶವನ್ನು ಹರಿದು, ಕರ್ಮಸಂಚಯವನ್ನು ಸಮೂಲ ನಾಶಗೊಳಿಸಿ, ನಿತ್ಯಸ್ವರೂಪಾನಂದ ಸುಖದಲ್ಲಿ ವಿಹರಿಸುತ್ತಿದ್ದರು. ಅಲ್ಲಮನು ಸಾಕ್ಷಾತ್ ಶಿವನೆಂದು ಭಾವಿಸಿ ಅವನನ್ನು ಅನೇಕ ರೀತಿಯಿಂದ ಕೊಂಡಾಡಿದರು. ಅಲ್ಲಮನು ಅವರ ಭಕ್ತಿಗೆ ಮೆಚ್ಚಿ ಪುನಃ ಅವರಿಗೆ ಸನ್ಮಾರ್ಗವನ್ನು ಬೋಧಿಸಿ ಅಲ್ಲಿಯೇ ಗುಪ್ತನಾದನು. ಭಕ್ತರ ರಕ್ಷಣೆಗಾಗಿ ಸ್ವತಃ ದೇಹಧಾರಣ ಮಾಡಿದ ಸಜ್ಜನರ ಮನಸ್ಸಿನಲ್ಲಿ ಸದಾವಾಸ ಮಾಡಿರುವ ಅಲ್ಲಮನು ಸರ್ವರಿಗೂ ಗುರುಲಿಂಗ ಜಂಗಮ ಪೂಜೆಯನ್ನು ಮಾಡಬೇಕೆಂದು ಹೇಳುತ್ತ ಬೇರೆ ಕಡೆಗೆ ಸಂಚಾರ ಮಾಡತೊಡಗಿದನು. ಶಿವದೀಕ್ಷೆಯನ್ನು ಹೊಂದಿ ಇತರ ಕರ್ಮಗಳನ್ನು ತ್ಯಜಿಸಿ ಸನ್ಮಾರ್ಗದಿಂದ

ನಡೆದು ಜನರಿಗೆ ಕಲ್ಯಾಣವನ್ನು ಮಾಡುವಂಥವರು ಗೃಹಸ್ಥಾಶ್ರಮಿಗಳಾಗಿರಬಹುದು; ಅಂತ್ಯದ ವೈರಾಗ್ಯಸಂಪನ್ನರು ನಿರಾಭಾರ ದೀಕ್ಷೆಯನ್ನು ಹೊಂದಿ ಮುನಿಗಳಂತೆ ಆಚರಿಸಬೇಕು. ಎಂದು ಕಟ್ಟು ಮಾಡಿ, ಗುರು ಲಿಂಗ ಜಂಗಮ ಪೂಜೆಯು ಅಬಾಧಿತವಾಗಿ ನಡೆಯಬೇಕೆಂದು ಸರ್ವಸನ್ನಾಹಗಳನ್ನೂ ಉಪಾಯಗಳನ್ನೂ ಅನುಕೂಲಿಸಿ ಪ್ರಭುದೇವರು ವೀರಶೈವ ಮತವನ್ನು ಅಭಿವೃದ್ಧಿಗೊಳಿಸಿದರು.

---

## ೧೬ ನೆಯ ಅಧ್ಯಾಯ.

### ಬಸವೇಶ್ವರನು ಶೂನ್ಯ ಸಿಂಹಾಸನವನ್ನು ರಚಿಸಿ ಅಲ್ಲಮ ಪ್ರಭುವಿನ ಬರುವಿಕೆಯನ್ನು ನಿರೀಕ್ಷಿಸುವಿಕೆ.





ಹಿಂದೆ ಹೇಳಿದಂತೆ ಅಲ್ಲಮಪ್ರಭುವಿನ ಸದುಪದೇಶದಿಂದ ಬಸವೇಶ್ವರನು ನಿವೃತ್ತಿಮಾರ್ಗದಲ್ಲಿ ಹೆಚ್ಚು ಆಸಕ್ತನಾದನು. ಆದ್ದರಿಂದ ಕಾಮಕ್ರೋಧಾದಿ ಷಡ್ರಿಪುಗಳೂ ಸಾತ್ವಿಕಾದಿ ಗುಣತ್ರಯಗಳೂ ಜ್ಞಾನೇಂದ್ರಿಯಗಳ ಬಲವಾದ ವಿಕಾರವೂ ಎಂಟು ಪ್ರಕಾರದ ಮದಗಳೂ ಷಡೂರ್ಮಿಗಳೂ ಕರ್ಮೇಂದ್ರಿಯಗಳ ಚಟುವಟಿಕೆಯೂ ಸಂಪೂರ್ಣವಾಗಿ ನಾಶಹೊಂದಲು ಅವನು ಸ್ತುತಿನಿಂದೆಗಳನ್ನು ಸಮನಾಗಿ ಕಾಣುತ್ತಿದ್ದನು. ಸದಾ ಶಿವಧ್ಯಾನಪರನಾದ್ದರಿಂದ ಆತನಿಗೆ ಆತ್ಮಸ್ವರೂಪ ಜ್ಞಾನವುಂಟಾಗಿ ಶಿವಾನಂದ ಸುಖದಲ್ಲಿ ವಿಹರಿಸುತ್ತಿದ್ದನು. ಮತ್ತು "ನಿರ್ಗುಣಯೋಗ ಸಾಧನೆಯನ್ನು ಹ್ಯಾಗೆ ಮಾಡಬೇಕು? ಗುರುವರ್ಯನು

ಯಾವಾಗ್ಗೆ ಬಂದು ನನಗೆ ಅದನ್ನು ಹೇಳಿಕೊಡುವನು." ಎಂದು ಮನಸ್ಸಿನಲ್ಲಿ ಸದಾ ಚಿಂತಿಸುತ್ತಿದ್ದನು. "ನಿರತಿಶಯ ಮಹಿಮಾ ಶಾಲಿಯಾದ ಅಲ್ಲಮಪ್ರಭುವು ನನ್ನ ಮನೆಗೆ ಬಂದು ನನ್ನ ಮನಸ್ಸಿನ ಸರ್ವ ಸಂದೇಹಗಳನ್ನು ಯಾವಾಗ್ಗೆ ಪರಿಹರಿಸುವನು; ಮಹಾನಟೇಶ್ವರನಾದ ಚಿದಂಬರೇಶ್ವರನಾದ ನನ್ನ ಗುರುವು ಯಾವ ವೇಷದಿಂದ ಬರುವನು? ಯಾವಭಾಷೆಯಲ್ಲಿ ಮಾತಾಡುವನು? ಇವೆಲ್ಲ ತಿಳಿದುಕೊಳ್ಳಲು ಏನಾದರೊಂದು ಉಪಾಯವನ್ನು ಮಾಡಬೇಕು" ಎಂದು ಯೋಚಿಸಿ ಬಸವೇಶ್ವರನು ತನ್ನ ಮನಸ್ಸಿನಲ್ಲಿ ಒಂದು ಪ್ರಕಾರದ ಶಾಂಭವೀ ಪ್ರಪಂಚವನ್ನು ನೆನೆದು, ಸುಶೋಭಿತವಾದ ರತ್ನ ಸಿಂಹಾಸನವನ್ನು ಕಲ್ಪಿಸಿ ಅದರ ಮೇಲೆ ಗುರುಶ್ರೇಷ್ಠನಾದ ಅಲ್ಲಮಪ್ರಭುವರನನ್ನು ಕೂಡ್ರಿಸಿ ಯಥಾವಿಧಿ ಗುರುಪೂಜೆಯನ್ನು ತನ್ನ ಮನಸ್ಸಿನಲ್ಲಿ ಮಾಡಿದನು. ಈ ಮಾನಸ ಪೂಜಾಕಾಲದಲ್ಲಿ ಅಲ್ಲಮಪ್ರಭುವಿಗೆ ಯಾವ ಪ್ರಕಾರದ ಸಿಂಹಾಸನವನ್ನು ಕಲ್ಪಿಸಿದ್ದನೋ, ಅದರಂತೆಯೇ ಬಾಹ್ಯ ಪೂಜಾಕಾಲದಲ್ಲಾದರೂ ಗುರುವಿಗೆ ಕೂಡ್ರಲಿಕ್ಕೆ ಒಂದು ಸಿಂಹಾಸನವನ್ನು ರಚಿಸಬೇಕೆಂಬ ಹೇತುವಿನಿಂದ, ಒಂದು ಸರ್ವೋತ್ಕೃಷ್ಟವಾದ ಶೂನ್ಯವೆಂಬ ಹೆಸರಿನ ರತ್ನಖಚಿತ ಸಿಂಹಾಸನವನ್ನು ಸಿದ್ಧಪಡಿಸುವ ಕಾರ್ಯಕ್ಕೆ ಬಸವೇಶ್ವರನು ಆರಂಭಿಸಿದನು. ಇದಕ್ಕೋಸುಗ ಅತ್ಯಂತ ಪ್ರಕಾಶ-ಮಾನವಾದ ಬಂಗಾರದ ರಾಶಿಯನ್ನೂ ಬಹಳ ಬೆಲೆಯುಳ್ಳ ರತ್ನದ ನಗಗಳನ್ನೂ ತರಿಸಿದನು; ಅತಿ ಕುಶಲರಾದ ಶಿಲ್ಪಿಗಳನ್ನು ಕರಿಸಿದನು. ಅನಂತರ ಆ ಶಿಲ್ಪಿಗಳು ಬಸವೇಶ್ವರನ ಅಜ್ಞೆಯಂತೆ ಸಿಂಹಾಸನದ ಮುಂದೆ ಮೊದಲು ಚಂದ್ರಕಾಂತ ಮಣಿಯ ಸುಂದರವಾದ ನೆಲಗಟ್ಟನ್ನು ಮಾಡಿದರು. ಇದರ ಮೇಲೆ ನಡೆದು ಸಿಂಹಾಸನವನ್ನು ಏರುವದಕ್ಕಾಗಿ ವಜ್ರ ವೈಡೂರ್ಯ ಗೊಮೇಧ ಮುಂತಾದ ನಾನಾಪ್ರಕಾರದ ರತ್ನಗಳಿಂದ ಕೆಚ್ಚಿದ ಪಾವಟಗೆಗಳನ್ನು ಮಾಡಿದರು. ತದನಂತರ ಬೇರೆ ಬೇರೆ ಬಂಗಾರ ಮತ್ತು ರತ್ನಗಳಿಂದ ಹೊಳೆಯುತ್ತಿರುವ ಸಮನಾದ ಏಳು ದೊಡ್ಡ ಪ್ರಾಕಾರದ ಗೋಡೆಗಳನ್ನು ಕಟ್ಟಿದರು. ಆ ಗೋಡೆಗಳ ಮಧ್ಯದಲ್ಲಿ ಥಳಥಳಿಸುವ ರತ್ನಗಳ ಒಂಭತ್ತು ಸಾಲುಗಳಿಂದ ಶೋಭಿಸುವಂಥ ಒಂದು ಪಟ್ಟಣವನ್ನು ಅಲ್ಲಿ ರಚಿಸಿದರು. ಆ ನಗರದಲ್ಲಿ ನಾಲ್ಕು ದ್ವಾರಗಳಿಂದ ಒಪ್ಪುತ್ತಿರುವ ಒಂದು ಮನೆಯನ್ನು ಕಟ್ಟಿಸಿ, ಅದರ ಸುತ್ತಲು ನಾಲ್ಕು ಬಾಗಿಲುಗಳಿಂದ ಯುಕ್ತವಾದ ಮೇಲಂತಸ್ತುವುಳ್ಳ ನಾಲ್ಕು ಕಟ್ಟಡಗಳು ಮಾಡಲ್ಪಟ್ಟದ್ದರಿಂದ, ಅದಕ್ಕೆ ಒಂದು ವಿಶಿಷ್ಟ ಪ್ರಕಾರದ ಶೋಭೆಯುಂಟಾಗಿತ್ತು. ಆ ಸಿಂಹಾಸನದಲ್ಲಿ ಪೃಥಿವ್ಯಾದಿ ಪಂಚಮಹಾಭೂತಗಳನ್ನು ಸ್ಪಷ್ಟವಾಗಿ ತೋರಿಸಿ, ಕೆಳಗೆ ಜೀವಾತ್ಮನನ್ನೂ ಮೇಲ್ಭಾಗದಲ್ಲಿ ಪರಮಾತ್ಮನನ್ನೂ ಸ್ಫುಟವಾಗಿ ತೋರಿಸಿದ್ದರು. ಮತ್ತು ಭಕ್ತ್ಯಾದಿ ಐಕ್ಯಾಂತವಾದ ಆರು ಸ್ಥಳಗಳು

ಅಲ್ಲಿ ವಿರಾಜಿಸುತ್ತಿದ್ದವು. ಭೂಮಿಯ ಕಾಠಿಣ್ಯವನ್ನೂ ನೀರಿನ ದ್ರವತ್ವವನ್ನೂ ಅಗ್ನಿಯ ಉಷ್ಣತೆಯನ್ನೂ ವಾಯುವಿನ ಚಂಚಲತ್ವವನ್ನೂ ಆಕಾಶದ ವಿಸ್ತೀರ್ಣತೆಯನ್ನೂ ಆತ್ಮನಲ್ಲಿರುವ ಶೂನ್ಯತೆಯನ್ನೂ ಶಿಲ್ಪಿಗಳು ಬಸವೇಶ್ವರನಾಜ್ಞೆಯ ಮೇರೆಗೆ ಅತಿ ವ್ಯಕ್ತವಾಗಿ ಕಾಣುವಂತೆ ಮಾಡಿದ್ದರು. ಆ ಸಿಂಹಾಸನದ ಉತ್ತರ ಕಡೆಗೆ ಈಡಾ ದಕ್ಷಿಣ ಕಡೆಗೆ ಪಿಂಗಳಾ ಮಧ್ಯದಲ್ಲಿ ಸುಷುಮ್ನಾ ಎಂಬ ಮೂರು ನಾಡಿಗಳಷ್ಟು ದೃಷ್ಟಿಗೆ ಕಾಣುವಂತೆ ಮಾಡಿದುದಲ್ಲದೆ ಚಂದ್ರ ಸೂರ್ಯರು ತಮ್ಮ ಷ್ಟಕ್ಕೆ ತಾವೇ ತಿರುಗುವಂತೆ ಮಾಡಿದ್ದರು. ಆ ಶೂನ್ಯ ಸಿಂಹಾಸನದ ಮಧ್ಯಭಾಗದಲ್ಲಿ ಸದಾಶಿವನೆಂಬ ಹೆಸರಿನ ಒಂದು ಅವರ್ಣನೀಯ ವೃಕ್ಷವನ್ನು ಮಾಡಿ ಪ್ರಣವಾಕ್ಷರವು ಅದರ ಮೂಲವಾಗಿಯೂ, ದೈದೀಪ್ಯಮಾನ ಚೈತನ್ಯ ಕಲೆಯಾದ ಪಂಚಾಕ್ಷರವು ಅದರ ಬಳ್ಳಿಯಾಗಿಯೂ ಮಾಡಲ್ಪಟ್ಟಿತ್ತು. ಹೀಗೆ ರತ್ನಗಳಿಂದ ನಿರ್ಮಿಸಲ್ಪಟ್ಟ ಆ ವೃಕ್ಷವು ಶೂನ್ಯ ಸಿಂಹಾಸನದ ಮೇಲೆ ಹೊಳೆಯುತ್ತಿತ್ತು. ಏನಾಶ್ಚರ್ಯವಿದು! ಬಸವೇಶ್ವರನಿಗೆ ಮೋಕ್ಷ ಪ್ರಾಪ್ತಿಯ ಸರ್ವಸಾಧನಗಳು ಕೈವಶವಾಗಿದ್ದವು. ಹೀಗೆ ಸರ್ವ ತತ್ವಗಳನ್ನು ಆ ಸಿಂಹಾಸನದಲ್ಲಿ ತೋರ್ಪಡಿಸಿದ ನಂತರ ಎಲ್ಲರೂ ಪ್ರಶಂಸೆ ಮಾಡುವಂಥ ಒಂದು ಶೂನ್ಯ ಪೀಠವನ್ನು ಅದರ ಮೇಲೆ ಸ್ಥಾಪಿಸಿದನು. ಅದರ ಮುಂದೆ ಅವರವರ ಯೋಗ್ಯತೆಗಳಿಗನುಸಾರವಾಗಿ ಸರ್ವ ದೇವತೆಗಳನ್ನು ಬಸವೇಶ್ವರನು ಸಾಲುಗೊಳಿಸಿದ್ದನು. ಅದರಲ್ಲಿ ಸರ್ವ ನಾಡಿಗಳನ್ನೂ ಅವುಗಳಲ್ಲಿರುವ ವಾಯುರೂಪ ಕುಂಡಲಿನಿಗಳನ್ನೂ ಶಕ್ತಿಸಹಿತವಾಗಿ ಕೂಡ್ರಿಸಿದ್ದನು. ಬಸವೇಶ್ವರನು ಸರ್ವ ವಸ್ತುಗಳ ಮರ್ಮವನ್ನು ಬಲ್ಲವನಾದ್ದರಿಂದ, ಭಕ್ತಿ ಜ್ಞಾನ ವೈರಾಗ್ಯಗಳನ್ನು ಅದರಲ್ಲಿ ಪ್ರಕಟಗೊಳಿಸಿದ್ದನು. ಸಬೀಜಯೋಗಸಮಾಧಿ–ನಿರ್ಬೀಜಯೋಗ ಸಮಾಧಿಗಳ ರಹಸ್ಯಕ್ಕೆ ಯೋಗ್ಯವಾದ ಏಕಾಂತಸ್ಥಾನಗಳನ್ನು ತಾನು ಸ್ವತಃ ನೋಡಿದಂತೆ ರಚಿಸಿದ್ದನು. ಬಸವೇಶ್ವರನು ಅತಿಶಯ ಸಾಮರ್ಥ್ಯವಂತನೂ ಸ್ವಧರ್ಮ ಸಂಪನ್ನನೂ ಆದ್ದರಿಂದ ಅವನಿಗೆ ಅಸಾಧ್ಯವಾದದ್ದು ಯಾವದೂ ಇದ್ದಿಲ್ಲ. ಆ ಸಿಂಹಾಸನವನ್ನು ನೋಡಿ ಪಿಂಡಾಂಡ ಬ್ರಹ್ಮಾಂಡಗಳೆರಡೂ ಬೇರೆಯುಲ್ಲವೆಂದು ಜ್ಞಾನಿಗಳಿಗೆ ಸಹಜವಾಗಿ ತಿಳಿಯಲೆಂಬ ಕಾರಣದಿಂದಲೋ ಏನೋ ಎಂಬಂತೆ ಬಸವೇಶ್ವರನು ತನ್ನ ಅಂತರಂಗವನ್ನು ಹೊರಗೆ ಸ್ಪಷ್ಟವಾಗಿ ತೋರಿಸಿರಬಹುದೆಂದು ಜನರು ಆತನನ್ನು ಕೊಂಡಾಡ ಹತ್ತಿದರು. ಗುಹೇಶ್ವರನ (ಅಲ್ಲಮಪ್ರಭುವಿನ) ಪೂಜೆಗಾಗಿ ಅದು ಉಪಯೋಗವಾಗಬೇಕೆಂದು ಬಸವೇಶ್ವರನು ಈ ಚಿದಭ್ರ ನಾಮಕ ಸಿಂಹಾಸನವನ್ನು ಮಾಡಿಸಿದ್ದನು. ಅದು ತನ್ನ ಮನಸ್ಸಿಗೆ ತಕ್ಕಂತೆ ಆದದ್ದನ್ನು ನೋಡಿ ಆತನಿಗೆ ಪರಮಾನಂದವಾಯಿತು. ಅದನ್ನು ಯ

ಥಾರ್ಥವಾಗಿ ಅರಿತುಕೊಂಡು ಹತ್ತಲು ಅಲ್ಲಮನೊಬ್ಬನೆ ಸಮರ್ಥನಲ್ಲದೆ ಉಳಿದ ವರಿಂಗಾಗದೆಂದು ಅವನು ಖಂಡಿತವಾಗಿ ತಿಳಿದಿದ್ದನು. ಸಿಂಹಾಸನದ ಮಹತ್ವವನ್ನು ಮನದಲ್ಲಿ ತಂದು ನಿರ್ಭಯದಿಂದ ಅದನ್ನೇರಿ ಶಿವಯೋಗ ಸಮಾಧಿಯಲ್ಲಿ ನಿಲ್ಲುವವನೇ ನನ್ನ ಗುರುವು. ಆದಕಾರಣ ಪ್ರಭುದೇವರ ಸ್ವರೂಪವನ್ನು ನಿರ್ಣಯಿಸಲಿಕ್ಕೆ ಇದೇ ತಕ್ಕ ಉಪಾಯವೆಂದು ಬಸವಣ್ಣನು ನಿಶ್ಚಯಿಸಿ ವಿದ್ವಾಂಸರ ಗುಂಪಿನಲ್ಲಿ ಕೂಡಿ ಶಿವತತ್ವ ವಿಚಾರದಲ್ಲಿ ಕಾಲಕಳೆಯ ಹತ್ತಿದನು. ಯಾರಾದರು ಪರಸ್ಥಳದಿಂದ ವಿದ್ವಾಂಸರು ಸಿಂಹಾಸನ ನೋಡಲಿಕ್ಕೆ ಬಂದರೆ ಅವರಿಗೆ ತಾನೇ ಅದನ್ನು ತೋರಿಸುತ್ತಿದ್ದನು. "ಮಾನಸಸರೋವರವನ್ನು ಕುರಿತುಹೋಗಲು ಹಂಸಪಕ್ಷಿಯಂತಲೂ ಮಧುರ ಧ್ವನಿಮಾಡಲು ಕೋಗಿಲೆಯಂತಲೂ ತಿಳಿಯುವಂತೆ ಸಿಂಹಾಸನವನ್ನೇರಿ ಸಮಾಧಿಯಲ್ಲಿ ನಿಂತರೆ ಅವನೇ ಅಲ್ಲಮಪ್ರಭುವೆಂದು ತಿಳಿಯಬೇಕು." ಹೀಗೆ ದಂಡನಾಯಕನಾದ ಬಸವೇಶ್ವರನು ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಗುರುವಾದ ಅಲ್ಲಮ ಪ್ರಭುವಿನ ದರ್ಶನವು ತನಗೆ ಯಾವಾಗ್ಗೆ ಉಂಟಾದೀತೆಂದು ಚಿಂತಿಸುತ್ತ, ಗುರುಲಿಂಗ ಜಂಗಮಪೂಜೆಯಲ್ಲಿ ನಿರತನಾಗಿದ್ದನು. ಆಸಮಯದಲ್ಲಿ ಬಸವೇಶ್ವರನ ಮನೆಗೆ ಭೋಜನಕ್ಕೆಂದು ಅನೇಕ ಜನರು ಬರುತ್ತಿದ್ದರು. ಅವರಲ್ಲಿ ಯಾರಿಗೂ ಸಿಂಹಾಸನವನ್ನು ಕಣ್ಣೆತ್ತಿನೋಡುವ ಸಾಮರ್ಥ್ಯವಿದ್ದಿಲ್ಲ. ಯಾರಾದರು ಅವರನ್ನು ಕೇಳಿದರೆ "ಸಿಂಹಾಸನದ ಒಗ್ಗೆ ಬಸವಣ್ಣನೊಬ್ಬನಿಗೆ ಮಾತ್ರ ಗೊತ್ತುಂಟು ಉಳಿದವರಿಗೆ ತಿಳಿಯದೆಂದು" ಹೇಳುತ್ತಿದ್ದರು. ಮತ್ತೂ ಕೆಲವರು "ಅನುಭವ ಜ್ಞಾನವಿಲ್ಲದೆ ಯಾವ ಕಾರ್ಯವು ಘಟಿಸದು. ಈ ಚಿದ್ಗಗನಾಸನ (ಶೂನ್ಯಸಿಂಹಾಸನ)ವು ಉತ್ತಮೋತ್ತಮವಿದ್ದು ಬ್ರಹ್ಮಾದಿದೇವತೆಗಳಿಗೂ ಸಹ ತಿಳಿಯಲಸಾಧ್ಯವಾಗಿದೆ. ಸರ್ಪದ ಗತಿಯನ್ನು ಸರ್ಪವು ತಿಳಿಯುವಂತೆ ಬಸವೇಶ್ವರ—ಅಲ್ಲಮಪ್ರಭು ಇವರ ಹೊರತು ಇದರ ರಹಸ್ಯವು ಯಾರಿಗೂ ಗೊತ್ತಾಗಲರಿಯದು." ಎಂದು ತಂತಮ್ಮೊಳಗೆ ಮಾತಾಡುತ್ತಿದ್ದರು. ಮಂತ್ರ, ಯೋಗ, ಯಂತ್ರ, ತಂತ್ರ, ವೇದಾಂತ ಶಾಸ್ತ್ರ, ಷಡ್ದರ್ಶನ ಮೊದಲಾದ ಅನೇಕ ವಿದ್ಯೆಗಳಲ್ಲಿಯೂ ಕಲೆಗಳಲ್ಲಿಯೂ ಪಾರಂಗತರಾದವರು ಶೂನ್ಯ ಸಿಂಹಾಸನವನ್ನು ನೋಡಿ ದೂರಿಂದಲೇ ನಮಸ್ಕರಿಸುತ್ತಿದ್ದರು. ಬಸವೇಶ್ವರನ ಮಹಿಮೆಯು ಅಗಾಧವಾದದ್ದು, ತಮ್ಮಂಥ ಪಾಮರರಿಗೆ ತಿಳಿಯತಕ್ಕದ್ದಲ್ಲೆಂದು ಆತನನ್ನು ಕೊಂಡಾಡಿ, ಆತನ ಚಾತುರ್ಯಕ್ಕೆ ಮೆಚ್ಚಿ ತಲೆದೂಗುತ್ತಿದ್ದರು. "ಅಲ್ಲಮಪ್ರಭುವು ನನ್ನ ಮನೆಗೆ ಯಾವಾಗ್ಗೆ ಬಂದಾನು! ನಾವು ಸಿದ್ಧಗೊಳಿಸಿದ ಈ ಶೂನ್ಯಸಿಂಹಾಸನವನ್ನು ಯಾವಾಗ್ಗೆ ಅಲಂಕರಿಸುವನು? ಆತನ ದಿವ್ಯ ಶರೀರ ದರ್ಶನವು ನನಗೆ ಯಾವಾಗ್ಗೆ ಆದೀತು!" ಎಂದು ಯೋಚಿಸುತ್ತ ಬಸವೇಶ್ವರನು ಅಲ್ಲಮಪ್ರಭುವಿನ ವಿಷಯವಾಗಿ ಉತ್ಕಂಠಿತ ಹೃದಯವುಳ್ಳವನಾಗಿದ್ದನು.

## ೧೭ನೆಯ ಅಧ್ಯಾಯ.






ಮಕ್ಕಳನ್ನಪೇಕ್ಷಿಸುವ ಋತುಮತಿಯಾದ ಪತಿವ್ರತಾ ಸ್ತ್ರೀಯು ತನ್ನ ಪ್ರಾಣವಲ್ಲಭನು ಪರದೇಶಕ್ಕೆ ಹೋಗಿರಲು ವಿರಹ ವ್ಯಥೆಯನ್ನು ತಾಳಲಾರದೆ ಪರವೂರಿಂದ ತನ್ನ ಪತಿಯು ಯಾವಾಗ್ಗೆ ತಿರುಗಿಬರುವನೆಂದು ಚಿಂತಿಸುವಂತೆ ಆತ್ಮಸ್ವರೂಪಾನುಭವದಿಚ್ಛೆಗಾಗಿ ಬಸವೇಶ್ವರನು ಗುರುಭಕ್ತಿಯುದ್ರೇಕದಿಂದ ಅಲ್ಲಮಪ್ರಭುವು ಎಂದು ಬರುವನೆಂದು ಸದಾ ಚಿಂತಾಕ್ರಾಂತನಾಗಿದ್ದನು. "ಅಹಹ!! ಗುರುವರ್ಯನು ಅಲಂಕರಿಸಲಿಕ್ಕೆ ಯೋಗ್ಯವಾದ ಶೂನ್ಯಸಿಂಹಾಸನವನ್ನು ನಾನು ನಿರ್ಮಾಣಮಾಡಿ ಸುಮಾರು ಹನ್ನೆರಡು ವರ್ಷಗಳಾದವು. ಆದರೂ ಮಹಾಸಮರ್ಥನಾದ ಅಲ್ಲಮಪ್ರಭುವು ಬರಲಿಲ್ಲವಲ್ಲ! ಆತನು ನನ್ನ ಪ್ರಾಣೇಶ್ವರನು. ಆತನ ಮೇಲೆ ನನ್ನ ವಿಶ್ವಾಸವು ಅತಿಶಯವದೆ. ಅವನು ಬಂದು ನನ್ನ ಮನಸ್ಸಿನ ಸರ್ವವಿಕಲ್ಪಗಳನ್ನು ದೂರು ಮಾಡಿ ನನಗೆ ಯಾವಾಗ್ಗೆ ದಯೆಯನ್ನು ತೋರಿಸುವನು? ನಾನು ನನ್ನ ಬುದ್ಧಿ ಸಾಮರ್ಥ್ಯದಿಂದ ಈ ಶೂನ್ಯಸಿಂಹಾಸನವನ್ನು ನಿರ್ಮಿಸಿರುವೆನು. ಆಳುಮಾಡಿದ ಕಾರ್ಯವನ್ನು ಅರಸನು ಸ್ವೀಕರಿಸುವಂತೆ, ಅಲ್ಲಮಪ್ರಭುವು ಈ ಸಿಂಹಾಸನವನ್ನು ಯಾವಾಗ್ಗೆ ಸ್ವೀಕರಿಸುವನು?" ಎಂದು ಬಸವೇಶ್ವರನು ಗುರುದರ್ಶನಕ್ಕಾಗಿ ಆತುರಪಡುತ್ತಿದ್ದನು. ಮತ್ತು ಸರ್ವ ಜನರೊಂದಿಗೆ ಸೇರಿಕೊಂಡಿರುವದು ಯೋಗ್ಯವಲ್ಲೆಂದು ಒಂದು ಏಕಾಂತಸ್ಥಾನಕ್ಕೆ ಹೋಗಿ, ಪ್ರಭುವರ್ಯನು ಹೇಳಿದಂತೆ ಪ್ರಾಣ ನಿರೋಧಮಾಡಿ ನಿಶ್ಚಲಸಮಾಧಿಯನ್ನು ಬೆಳಿಸಬೇಕೆಂದು ತಕ್ಕ ಆಸನವನ್ನು ಹಾಕಿಕೊಂಡು ಕೂತನು ಬಸವಣ್ಣನು ವಿಷಯಸುಖಗಳಿಂದ ತನ್ನ ದಶೇಂದ್ರಿಯಗಳನ್ನು ತಿರುಗಿಸಿ, ಸ್ಥೂಲದೇಹದಿಂದ ಸೂಕ್ಷ್ಮದೇಹಕ್ಕೆ ಸೂಕ್ಷ್ಮದಿಂದ ಲಿಂಗೈಕ್ಯಸ್ಥಾನಕ್ಕೆ ತನ್ನ ಮನಸ್ಸನ್ನು ಯೋಗಬಲದಿಂದ ಒಲಿಸಿದನು. ಅಲ್ಲಮ

ಪ್ರಭುವಿನ ಕೃಪಾಬಲದಿಂದ ಬಸವೇಶ್ವರನು ಸಬೀಜ ಭೂಮಿಯನ್ನು ಗೆದ್ದು ಧೈರ್ಯಯುತನಾಗಿ ನಿರ್ಬೀಜಸಮಾಧಿಯ ಭೂಮೆಯನ್ನು ಮುಟ್ಟಿ, ಚಿರಕಾಲ ಆತ್ಮಾನಂದ ಸುಖದಲ್ಲಿ ಮುಳಗಿದನು. ಇದರ ದೆಸೆಯಿಂದ ಆತನು ಸಮಾಧಿಯನ್ನು ಬಿಟ್ಟು ಬಂದಾಗ್ಗೂ ಜಗತ್ತು ಲಿಂಗಸ್ವರೂಪವಾದದ್ದೆಂಬುದನ್ನು ಯಾವಾಗಲೂ ಭಾವಿಸುತ್ತಿದ್ದನು. ಸ್ಥಿರಮನಸ್ಕನಾದ್ದರಿಂದ ಸಮಾಧಿಯನ್ನು ಮೇಲಿಂದ ಮೇಲೆ ಬೆಳಿಸುತ್ತಿದ್ದನು. ಒಂದಾನೊಂದು ದಿನ ಹೀಗೆ ಶಿವಯೋಗ ಸುಖದಲ್ಲಿದ್ದಾಗ, ಬಸವಣ್ಣನ ಅಂತರ್ಮುಖವೆಂಬ ಕನ್ನಡಿಯಲ್ಲಿ ಅಲ್ಲಮಪ್ರಭುವು ಸ್ಪಷ್ಟವಾಗಿ ಕಾಣಿಸಿಕೊಂಡು ನಿರ್ಮಲವಾದ ತತ್ವರೂಪವೆಂಬ ವಿಭೂತಿಯನ್ನು ಬಸವಣ್ಣನಿಗೆ ಕೊಟ್ಟು ಮಾಯವಾದನು. ಇದರಿಂದ ಬಸವಣ್ಣನಿಗೆ ಪರಮಾನಂದವಾಯಿತು. ಕಣ್ಣುಗಳಿಂದ ಆನಂದಾಶ್ರುಗಳು ಸುರಿಯಹತ್ತಿದವು. ಇದನ್ನು ಆತನು ಶಿವಭಕ್ತಿಗೆ ತಿಲಕಪ್ರಾಯನಾದ ಸದ್ಗುಣಸಂಪನ್ನನಾದ ಷಟ್‌ಸ್ಥಲ ಮೂರ್ತಿಯಾದ ಚೆನ್ನಬಸವೇಶ್ವರನಿಗೆ ಹೇಳಿ—"ಅಲ್ಲಮಪ್ರಭುವಿನ ಯಥಾರ್ಥಜ್ಞಾನವು ವೇದಾಗಮಗಳಿಗೂ ಗೋಚರವಾಗದು. ಅವನು ಕೇವಲ ಪರಬ್ರಹ್ಮಸ್ವರೂಪನೂ ಜನ್ಮರಹಿತನೂ ಅನಾದಿಯೂ ಇದ್ದು ದೇವಶ್ರೇಷ್ಠನಾದ ಶಿವನೂ ನನ್ನ ಗುರುವೂ ಆಗಿದ್ದಾನೆ. ನಮ್ಮ ಸುಖವೀಯಲಿಕ್ಕೆ ಶೀಘ್ರದಲ್ಲಿ ಆತನು ಇಲ್ಲಿಗೆ ಬರುವನು." ಎಂದು ಅನ್ನಲು ಆತನಾದರೂ ಆನಂದಪರವಶನಾಗಿ ಅಲ್ಲಮಪ್ರಭುವನ್ನು ಇದಿರ್ಗೊಂಡು ಕರತರಬೇಕೆಂದು ಕೂಡಲೆ ಕೈಕೆಳಗಿನ ಅಧಿಕಾರಸ್ಥರನ್ನು ಕರಿಸಿ ಕಲ್ಯಾಣ ಪಟ್ಟಣವನ್ನು ಶೃಂಗರಿಸಲಿಕ್ಕೆ ಅಪ್ಪಣೆಮಾಡಿದನು. ಆತನ ಅಪ್ಪಣೆಯ ಮೇರೆಗೆ ಕಲ್ಯಾಣ ಪಟ್ಟಣವೆಲ್ಲ ಸ್ವಚ್ಛವಾಗಿ ಉಡುಗಲ್ಪಟ್ಟು ಬೀದಿಗಳೆಲ್ಲ ಸುಗಂಧದ ನೀರಿನಿಂದ ಚಳಿಹೊಡಿಸಲ್ಪಟ್ಟವು. ರತ್ನಗಳನ್ನು ಪುಡಿಮಾಡಿ ಪುರನಿವಾಸಿಗಳು ರಂಗೋಲಿಯನಿಕ್ಕಿ ತಮ್ಮ ತಮ್ಮ ಮನೆಗೆ ಉತ್ತಮ ಪ್ರಕಾರದ ತೋರಣಗಳನ್ನು ಕಟ್ಟಿ ಪತಾಕೆಗಳನ್ನು ನಿಲ್ಲಿಸಿದರು. ಬೀದಿ ಬೀದಿಗಳಲ್ಲಿ ಕಮಾನುಗಳೂ ಕನ್ನಡಿಯ ತೋರಣಗಳೂ ಬಾಳೆಕಂಭಗಳೂ ಕಟ್ಟಲ್ಪಟ್ಟವು. ಸರ್ವಕಲ್ಯಾಣಗಳಿಗೆ ಆವಾಸಸ್ಥಾನವಾದ ಕಲ್ಯಾಣಪಟ್ಟಣವು ವೈಭವದಲ್ಲಿ ಇಂದ್ರನ ಅಮರಾವತಿಯನ್ನು ಧಿಕ್ಕರಿಸಿತು. ಬಸವೇಶ್ವರನು—ಮಡಿವಾಳ—ಮಾಚಿದೇವ—ಕಿನ್ನರಯ್ಯ—ಹಡಪದ ಅಪ್ಪಣ್ಣ ಮೊದಲಾದ ಸದ್ಭಕ್ತರೊಂದಿಗೆ ಚತುರಂಗಬಲಸಮೇತನಾಗಿ ಚೆನ್ನಬಸವೇಶ್ವರನು ಅಲ್ಲಮಪ್ರಭುವನ್ನು ಆದರದಿಂದ ಕರತರಬೇಕೆಂದು ಹೊರಟನು.

ಈ ಸಮಯದಲ್ಲಿ ವೀರಶೈವೇತರ ಧರ್ಮದವರು ಬಸವೇಶ್ವರನ ಐಶ್ವರ್ಯಾತಿಶಯವನ್ನು ಕಂಡು ಸಹಿಸಲಾರದೆ ರಾಜನಾದ ಬಿಜ್ಜಳನ ಬಳಿಗೆ ಬಂದು ಆತನನ್ನು ಕುರಿತು—ಮಹಾರಾಜ, ಒಬ್ಬ ಮೂರ್ಖನು ಸ್ವಪ್ನದಲ್ಲಿ ಕಂಡ ಪಕ್ವವಾದ ಮತು

ಮಧುರವಾದ ಮಾವಿನ ಹಂಣುಗಳನ್ನು ಎಚ್ಚರಾದ ಬಳಿಕ ತಿನ್ನಲಿಚ್ಛಿಸುವಂತೆ, ಬಸವಂಣನು ಯೋಗದಲ್ಲಿದ್ದಾಗ ಆತನಿಗೆ ಅಲ್ಲಮಪ್ರಭುವು ಕಂಡನಂತೆ! ಅದು ನಿಜವೆಂದು ನಂಬಿ ಮೂಢರಂತೆ ಅತ್ಯಂತಾಡಂಬರದಿಂದ ಆತನನ್ನು ಇದಿರ್ಗೊಂಡು ಬರಲಿಕ್ಕೆ ಬಸವೇಶ್ವರನು ಹೊರಟಿರುವನು. ರಾಜನೆ, ಈ ಲೋಕವಿರುದ್ಧ ವರ್ತನೆಯುನ್ನು ಆತನ ಯಾರ ಅಪ್ಪಣೆಯುನ್ನು ಪಡೆದು ಮಾಡುತ್ತಾನೆ? ಎಂದು ಆತನನ್ನು ನಿಂದಿಸಿ ನುಡಿಯಲು, ಅರಸನಾದರೂ ಬೌದ್ಧಮತಾಭಿಮಾನಿಯಾದ್ದರಿಂದ ಬಸವೇಶ್ವರನ ವಿಷಯುವಾಗಿ ಅವನ ಮನಸ್ಸಿನಲ್ಲಿ ಸ್ವಲ್ಪ ಕೋಪವು ಹುಟ್ಟಿ—" ಏನಾಶ್ಚರ್ಯ! ಈ ಪಟ್ಟಣಕ್ಕೆ ನಾನು ರಾಜನಾಗಿದ್ದರೂ ನನ್ನ ಅಪ್ಪಣೆಯಿಲ್ಲದೆ ಬಸವಂಣನು ಈ ಕಾರ್ಯವನ್ನು ಮಾಡಲು ಹೇಗೆ ಉದ್ಯುಕ್ತನಾಗಿದ್ದಾನೆ? ಸ್ವಪ್ನದಲ್ಲಿ ಅಲ್ಲಮಪ್ರಭುವು ಆತನಿಗೆ ಭಸ್ಮವನ್ನು ಕೊಟ್ಟನಂದರೇನು? ಆತನು ಪರ್ವತದಷ್ಟು ಮೂರ್ಖತನದ ಕಾರ್ಯವನ್ನು ಮಾಡುತ್ತಾನಂದರೇನು? ಬಸವೇಶ್ವರನು ಭಕ್ತನಿದ್ದರೆ, ಅಲ್ಲಮನ ಭಕ್ತಿಯನ್ನು ನಿರಾಂತಕವಾಗಿ ನಡಿಸಲಿ. (ಮತ್ತೆ ದೂರುಹೇಳಲಿಕ್ಕೆ ಬಂದ ಜನರ ಕಡಿಗೆ ನೋಡಿ) ಒಳ್ಳೇದು ಬಸವೇಶ್ವರನು ಇದಿರ್ಗೊಳ್ಳುವ ಕಾರ್ಯವನ್ನು ಮಾಡಹತ್ತಿದ್ದಾನೆಂದು ಹೇಳಿದಿರಿ. ಇದು ಲೋಕವಿರುದ್ಧ ವಿರುವದು ನಿಜ. ಆದರೆ ಇದರಿಂದ ನಿಮಗೇನು ಹಾನಿಯಾಗುವದದೆ? ಬಸವೇಶ್ವರನು ತಾನು ಮಹಿಮಾ ಪುರುಷನೆಂದು ತಿಳಕೊಂಡಿದ್ದಾನೆ. ಇದರ ಬಗ್ಗೆ ಕಿಂಚಿತ್ತಾದರೂ ನಮಗೆ ತಿಳಿಯಲೊಲ್ಲದು. ಈಗ ಇದಿರ್ಗೊಳ್ಳಲಿಕ್ಕೆ ಹೋಗಿದ್ದಾನೆ. ಅದರ ಪರಿಣಾಮವೇನಾಗುತ್ತದೋ ನೋಡೋಣ. ಅಲ್ಲಮಪ್ರಭುವು ಬಾರದಿದ್ದರೆ ಬಸವೇಶ್ವರನ ದುರ್ದಶೆಯು ಸಹಜವಾಗಿ ಆಗುವದು: " ಹೀಗೆ ರಾಜನು ಅವರಿಗೆ ಹೇಳಿ ಅವರನ್ನು ಉತ್ತರಕೊಡದಂತೆ ಮಾಡಿ ಕಳಿಸಿ, ಬಸವೇಶ್ವರನು ಮಾಡುವ ಕಾರ್ಯದ ದೆಸೆಯಿಂದ ಅವನನ್ನು ನಿಂದಿಸಹತ್ತಿದನು. ರಾಜನ ಮಾನಸಿಕ ಸ್ಥಿತಿಯು ಬಸವೇಶ್ವರನಿಗೆ ತಿಳಿದು, ಅಲ್ಲಮಪ್ರಭುವಿನ ಆಗಮನದ ಬಗ್ಗೆ ಬಹಳ ಚಿಂತೆಯುಂಟಾಗಿ ಪುನಃ ಧೈರ್ಯತಾಳಿ, ಸರ್ವಾಂತರ್ಯಾಮಿಯಾದ ಪರವಾದಿಗಳನ್ನು ಜಯಿಸಲು ಸಮರ್ಥನಾದ ಅಲ್ಲಮನು ತನ್ನ ಭಕ್ತರನ್ನು ಸಂಕಟದಲ್ಲಿ ಹಾಕುವನೆ? ಎನ್ನೋಣ, ಭಕ್ತವತ್ಸಲನಾದ ಭಕ್ತೋದ್ಧಾರಕನಾದ ಪ್ರಭುದೇವನು ಬಸವೇಶ್ವರನ ಮನದಿಂಗಿತವನ್ನು ತಿಳಿದವನಾಗಿ " ನಾನು ಕೂಡಲೆ ಕಲ್ಯಾಣಪಟ್ಟಣವನ್ನು ಸೇರದಿದ್ದರೆ ನನ್ನ ಭಕ್ತರ ಸ್ಥಿತಿಯು ನೆಟ್ಟಗಾಗದು. ಅವರನ್ನು ನೋಡಿ ಉಳಿದವರು ಹಾಸ್ಯಮಾಡಹತ್ತುವರು. ಇದು ಯೋಗ್ಯವಲ. " ಎಂದು ಒಬ್ಬ ಹುಚ್ಚನ ವೇಷದಿಂದ ಅಲ್ಲಮಪ್ರಭುವು ಕಲ್ಯಾಣ ಪಟ್ಟಣವನ್ನು ಪ್ರವೇಶ ಮಾಡಿದನು. ಬಸವಾದಿ ಪ್ರಮಥಗಣಂಗೆ ಮಾತ್ರ ಅಲ್ಲಮನ ಕೃತ್ರಿಮ ವೇಷವು ಗೋ

ಚರವಾಯಿತು. ವಿಷಯ ಸುಖದಲ್ಲಿ ನಿಮಗ್ನರಾದ ಇತರ ಅಜ್ಞಾನಿಗಳಿಗೆ ಆತನ ಗುರ್ತು ಸಿಗಲಿಲ್ಲ. ಅವನ ನಿಲುವಿಕೆಯು ಗಿಡ್ಡ, ನಡಿಯುವಾಗ ಸೊಟ್ಟಗಾಲ ಹಾಕುತ್ತಿದ್ದನು. ಮುಖದ ಮೇಲೆ ಮೀಶಿಗಳು ತುಸುಬರಹತ್ತಿದ್ದವು. ಮೈಮೇಲೆ ಬಿರುಸಾದ ಕೂದಲುಗಳಿದ್ದವು. ನಡವು ದೊಡ್ಡದಿದ್ದು ಕಂಣುಗಳು ಕ್ರೂರವಾಗಿದ್ದವು. ಮಾತಿನ ಧ್ವನಿಯು ಕರ್ಕಶವಿದ್ದು ನಗುವಾಗ ಮೋರೆಯನ್ನು ಸೊಟ್ಟಮಾಡುತ್ತಿದ್ದನು. ದೇಹದಲ್ಲಿ ಎಲ್ಲ ಕಡೆಯಲ್ಲಿ ಹುಂಣುಗಳಿದ್ದು ಅವುಗಳಿಂದ ದುರ್ಗಂಧವಾದ ಕೀವು ನೆತ್ತರ ಹರಿಯುತ್ತಿತ್ತು. ಒಂದು ಕ್ಷಣನಗುತ್ತಿದ್ದನು; ಮತ್ತೊಂದು ಕ್ಷಣಅಳುತ್ತಿದ್ದನು. ಕಟವಾಯಿಯಿಂದ ಯಾವಾಗಲು ಜೊಲ್ಲು ಸುರಿಯುತ್ತಿತ್ತು. ಇಂತಹ ಕುತ್ಸಿತಾಕಾರವನ್ನು ಧರಿಸಿ ಭಕ್ತರನ್ನುದ್ಧಂಸಲಿಕ್ಕೆ ಭೃಂಗೀಶ್ವರನಂತೆ ಕಲ್ಯಾಣ ನಗರವನ್ನು ಹೊಕ್ಕನು. ಆತನ ಕುರೂಪವನ್ನು ನೋಡಿ ಅನೇಕರು ಅವನಿಗೆ ನಿಂದೆಯ ನುಡಿಗಳನ್ನಾಡಿದಾಗ್ಯೂ ಅವರಿಗೆ ಏನೂ ಅನ್ನದೆ ಪ್ರತಿಯಾಗಿ ಅವರಿಗೆ ಆಶೀರ್ವದಿಸುತ್ತಿದ್ದನು. ಹುಚ್ಚನೆಂದು ತಿಳಿದು ಕೆಲವರು ಅವನಿಗೆ ಹೊಡೆದರೂ ಅವರನ್ನು ಕೊಂಡಾಡುತ್ತಿದ್ದನು. ಹಾಡುವ ಮತ್ತು ನರ್ತನ ಮಾಡುವ ಜನರೊಂದಿಗೆ ಆತನು ಹಾಡುವದನ್ನೂ ನರ್ತನವನ್ನೂ ಮಾಡುತ್ತಿದ್ದನು. ಕೆಲವರು ಅವನಿಗೆ ವಸ್ತ್ರಾಲಂಕಾರಗಳಿಂದ ಆದರ ಮಾಡಿದರೆ ತಾನೂ ಅವರಿಗೆ ಆದರಂತೆ ಸತ್ಕರಿಸುತ್ತಿದ್ದನು, ಮಲ್ಲರೊಡನೆ ಸೇರಿ ಅವರಂತೆ ಕುಸ್ತಿ ಆಡುತ್ತಿದ್ದನು. ನಮಸ್ಕಾರ ಮಾಡಿದವಂಗೆ ತಾನೂ ಪುನಃ ನಮಸ್ಕಾರ ಮಾಡುತ್ತಿದ್ದನು. ಮಾರ್ಗದಲ್ಲಿ ಚಿಕ್ಕ ಮಕ್ಕಳನ್ನು ನೋಡಿ ಅವರೊಡನೆ ತಾನೂ ಚಿಕ್ಕವನಾಗಿ ಆಡುತ್ತಿದ್ದನು. ಆತನು ಕೆಲವರಿಗೆ ಹುಡುಗನಂತೆ ಕೆಲವಂಗೆ ಮುದುಕನಂತೆ ತೋರಿದನು. ಒಬ್ಬನಿಗೆ ರಸಿಕನಾಗಿ ಇನ್ನೊಬ್ಬನಿಗೆ ಮೂರ್ಖನಾಗಿ ಕೆಲವಂಗೆ ಪ್ರಕಾಶದಂತೆ ನಿರಾಕಾರನಾಗಿ ಹಲವರಿಗೆ ಸಾಕಾರನಾಗಿ ತೋರಿದನು. ಹೀಗೆ ಸರ್ವತ್ರಗತಿಯುಳ್ಳ ಪ್ರಭುದೇವನು ತನ್ನ ಅದ್ಭುತ ಶಕ್ತಿಯನ್ನು ಪ್ರಕಟಗೊಳಿಸಿದನು. ಸ್ವಚ್ಛಂದವಾಗಿ ಸಂಚರಿಸುವ ಅಲ್ಲಮನ ಯಥಾರ್ಥ ಜ್ಞಾನವು ಉಳಿದವಂಗೆ ಯಾಂಗೂ ಆಗಲಿಲ್ಲ ಮಾಂತ್ರಿಕನು ದಿವ್ಯಾಂಜನವನ್ನು ಹಚ್ಚಿಕೊಳ್ಳಲು ಭೂಮಿಯಲ್ಲಿದ್ದ ದ್ರವ್ಯವು ಕಾಣುವಂತೆ, ಬಸವೇಶ್ವರನ ನಿರ್ಮಲ ಜ್ಞಾನದ ದೆಶೆಯಿಂದ ಅವನಿಗೆ ಅಲ್ಲಮನ ಯಥಾರ್ಥ ಜ್ಞಾನವುಂಟಾಯಿತು. ಆತನನ್ನು ನೋಡಿದ ಮಾತ್ರದಲ್ಲಿಯೇ ಬಸವೇಶ್ವರನಿಗೆ ಪರಮಾನಂದವಾಯಿತು. ಆತನ ಚರಣಕಮಲಗಳನ್ನು ಪೂಜಿಸಿ ಅವನಿಗೆಸಾಷ್ಟಾಂಗ ನಮಸ್ಕಾರ ಮಾಡಿದನು. ಭಕ್ತರ ಸ್ತ್ರೀಯರು ಹಾಡುತ್ತ ಅವನಿಗೆ ಮಂಗಳಾರತಿಯನ್ನು ಎತ್ತಿದರು. ಸ್ತುತಿಪಾಠಕರು ಅನೇಕ ಪ್ರಬಂಧಗಳನ್ನು ಆನಂದದಿಂದ ಹಾಡಿದರು. ಮಂಗಳವಾದ್ಯಗಳು ಸರ್ವತ್ರ ಭೋರ್ಗರೆದವು. ನಗರವಾಸಿಗಳು ಮುಂದೆ ಬಂದು ನಮಸ್ಕರಿಸುತ್ತಿದ್ದರು. ಈತನ ಆಗಮನದಿಂದ ವೀರಶೈವೇತರರು ಮುಖಭಂಗಿತ

ರಾದ್ದರಿಂದ ಮುಂದೆ ಬರುವದಕ್ಕೆ ನಾಚಿಕೆಪಟ್ಟರು. ಕಲ್ಯಾಣ ಪಟ್ಟಣವು ಸಂಣ ದಿದ್ದಿಲ್ಲ. ಅದು ಪೃಥ್ವಿಯಲ್ಲಿ ಅತಿ ಪ್ರಸಿದ್ಧವಾದ ಪಟ್ಟಣವಿದ್ದು ಅದರ ಉದ್ದಗಲವು ನಾಲ್ವತ್ತೆಂಟು ಹರದಾರಿ ಇತ್ತು. ಅಲ್ಲಮನ ಆಗಮನದಿಂದ ಪಟ್ಟಣವೆಲ್ಲ ತಲೆಬಾಗಿ ನಮಸ್ಕರಿಸಿತು. ನೆರೆದ ಜನರ ಜಯಘೋಷದೊಡನೆ ಅಲ್ಲಮನು ಬಸವೇಶ್ವರನ ಅರಮನೆಗೆ ಬಂದನು. ಅಲ್ಲಿ ಗಂಗಾಂಬಿಕೆ ಮೊದಲಾದ ಸ್ತ್ರೀಯರು ಭಕ್ತಿಪೂರ್ವಕವಾಗಿ ನಮಸ್ಕರಿಸಿ ಜಯಜಯಕಾರದಿಂದ ಅಲ್ಲಮನಿಗೆ ಆರುತಿಯನ್ನು ಮಾಡಿದರು. ಈಪ್ರಕಾರ ಉಪಚರಿಸಲ್ಪಟ್ಟವನಾಗಿ ಅಲ್ಲಮಪ್ರಭುವು ಬಸವೇಶ್ವರನ ಮಂದಿರದಲ್ಲಿರುವ ಚಿತ್ಸ್ವರೂಪ ಸಿಂಹಾಸನದ ಬಳಿಗೆ ಬಂದನು. ಅದನ್ನು ಕಂಡು ಗುರುವರ್ಯನಿಗೆ ಪರಮಾನಂದವಾಯಿತು. ನೋಡಲಿಕ್ಕೆ ಬಂದ ಜನರು ತಮ್ಮ ತಮ್ಮ ಮನೆಗೆ ಹೋದನಂತರ ಶಿಷ್ಯನಾದ ಬಸವೇಶ್ವರನ ಸಾಮರ್ಥ್ಯವನ್ನರಿತು ಪ್ರಮಥರು ನೋಡುವಂತೆ ಅಲ್ಲಮನು ಆಸಿಂಹಾಸನವನ್ನು ಹತ್ತಲುಪಕ್ರಮಿಸಿದನು. ಸರ್ವಾಂತರ್ಯಾಮಿಯೂ ದೇಹಧಾರಿಯಾದರೂ ನಿರಾಕಾರನಾದ ಮೂಜಗದೊಡೆಯನಾದ ಅಲ್ಲಮಪ್ರಭುವಿಗೆ ಈ ಶೂನ್ಯಸಿಂಹಾಸನವನ್ನು ಹತ್ತುವದು ಅಶಕ್ಯವಲ್ಲೆಂದು ಭಕ್ತರು ಸ್ತುತಿಸುತ್ತಿರುವಾಗ ಗುರುರಾಯನು ಅದನ್ನು ಅಲಂಕರಿಸಿದನು. ಇಪ್ಪತ್ತೆರಡುಸಾವಿರ ನಾಡಿಸಮುದಾಯವುಳ್ಳ ಈ ಶರೀರವನ್ನು ರಚಿಸಿದವನು ಈ ಶೂನ್ಯಸಿಂಹಾಸನವನ್ನು ಏರುವದು ಯಾವ ದೊಡ್ಡ ಕಾರ್ಯ! ಆದರೂ ಬಸವೇಶ್ವರನ ಕೀರ್ತಿಯನ್ನು ಲೋಕದಲ್ಲಿ ಹಬ್ಬಿಸಬೇಕೆಂದು ಅಲ್ಲಮನು ಷಟ್‌ಸ್ಥಳಕ್ಕೆ ಶೂನ್ಯಸಿಂಹಾಸನವು ಆಧಾರ ಭೂತವಿರುವದಾಗಿ ತಿಳಿಸಿ, ಅದರ ರಹಸ್ಯವನ್ನು ಸರ್ವ ಪ್ರಮಥರಿಗೆ ಹೇಳಿ ಮೇಲೆ ಹತ್ತಿದನು. ಅದರ ರಹಸ್ಯವನ್ನು ಚನ್ನಾಗಿ ತಿಳಿಸಿಕೊಟ್ಟು, ಒಂದೊಂದು ಭೂಮಿಯನ್ನು ದಾಟ ಅಲ್ಲಲ್ಲಿಯ ಸಕೀಲುಗಳನ್ನು ಚನ್ನಾಗಿ ಅರುಹಿ, ಶೋಭಾಯಮಾನವಾದ ಆ ಸಿಂಹಾಸನದ ಅಗ್ರಭಾಗವನ್ನು ಏರಿದನು. ಆರು ಭೂತಗಳನ್ನೂ ಆರು ಕಮಲಗಳನ್ನೂ ಆರು ಸ್ಥಲಗಳನ್ನೂ ಆರು ಲಿಂಗಗಳನ್ನೂ ಆರು ಭಕ್ತಿಗಳನ್ನೂ ಆರು ಶಕ್ತಿಗಳನ್ನೂ ಆರು ಕಲೆಗಳನ್ನೂ ಆರು ಆಕಾರಗಳನ್ನೂ ಆರು ಪ್ರಯೋಗಗಳನ್ನೂ ಆರು ಪ್ರಕಾರದ ಅಕ್ಷರ ಪಂಕ್ತಿಗಳನ್ನೂ ಅಲ್ಲಮನು ಚನ್ನಾಗಿ ತಿಳಿಸಿಕೊಟ್ಟನು. ಗುರುವರ್ಯನು ಸಿಂಹಾಸನವನ್ನು ಏರುವಾಗ ಅದರಲ್ಲಿದ್ದ ಶಕ್ತಿಗಳು ಅವನ ರೂಪದಲ್ಲಿ ಅಡಗಿಕೊಂಡವು. ಈ ಅದ್ಭುತವನ್ನು ಕಂಡು ಕೆಲವು ಅಜ್ಞಾನಿಗಳು ಹೆದರಿ ಓಡಿ ಹೋದರು. ಆದರೆ ತಿಳಿದವರು ಅಲ್ಲಮನು ಸಾಕ್ಷಾತ್ ಶಂಕರನೆಂದು ಭಾವಿಸಿ ಅವನಿಗೆ ನಮಸ್ಕರಿಸಿದರು. ಶೂನ್ಯಸಿಂಹಾಸನವನ್ನು ಅಲ್ಲಮನು ಏರಿದ್ದನ್ನು ಬಸವೇಶ್ವರನು ನೋಡಿ ಪರಮಾನಂದಭರಿತನಾಗಿ ವೇದವಾಕ್ಯಗಳಿಂದ ಆತನನ್ನು ಕೊಂಡಾಡ ಹತ್ತಿದನು. ಚನ್ನಬಸವೇಶ್ವರ, ಮಡಿವಾಳಮಾಚಿದೇವ, ಕಿನ್ನರಯ್ಯ, ಹಡಪದ ಅಪ್ಪಣ ಮೊದ

ಲಾದ ಭಕ್ತಶ್ರೇಷ್ಠರು ಗುರುವಿನ ಮಹಿಮೆಗೆ ಬೆರಗಾಗಿ ಸಾಷ್ಟಾಂಗ ನಮಸ್ಕಾರ ಮಾಡಿದರು. ಸರ್ವ ಭಕ್ತರು ಸಂತುಷ್ಟರಾದದ್ದನ್ನು ನೋಡಿ ಬಸವೇಶ್ವರನ ಕಡೆಗೆ ಶಾಂತದೃಷ್ಟಿಯಿಂದ—“ಲಿಂಗಾರ್ಚನದ ಸಾಮರ್ಥ್ಯದಿಂದ ನಿರ್ದೋಷವಾದ ಅಂತ ರಂಗ ಧ್ಯಾನದಿಂದ ನಿಸ್ಸೀಮವಾದ ನಿರುಪಮ ಭಕ್ತಿ ವಿಶ್ವಾಸದಿಂದ ಮತ್ತು ಉತ್ತ ಮೋತ್ತಮರಾದ ಜಂಗಮ ಪೂಜೆಯಿಂದ ಈ ಬಸವೇಶ್ವರನೊಬ್ಬನೆ ಜಗತ್ತಿನಲ್ಲಿ ಧನ್ಯನು. ಇವನನ್ನು ಯಾರೂ ಸರಿಗಟ್ಟರು. “ಬಸವೇಶ್ವರನೆ, ನಿನಗೆ ಹೆಚ್ಚು ಏನು ಹೇಳತಕ್ಕದ್ದದೆ. ನೀನು ಭಕ್ತಿರಸದ ಮೂರ್ತಿಯಾಗಿರುವಿ. ನಿನ್ನ ಮಹಿ ಮೆಯು ದೊಡ್ಡದಿದ್ದು ನೀನು ಸದ್ಗುಣಗಳ ನಿಧಿಯಾಗಿರುವಿ.” ಹೀಗೆ ಗುರುವ ರ್ಯನು ಬಸವೇಶ್ವರವನ್ನು ಕೊಂಡಾಡುತ್ತಿರಲು, ಬಸವೇಶ್ವರನು ನಮ್ರಭಾವದಿಂದ ಅಲ್ಲಮನಿಗೆ ನಮಸ್ಕಾರ ಮಾಡಿದನು.

---



## ೧೮ನೆಯ ಅಧ್ಯಾಯ.

**ಅಲ್ಲಮಪ್ರಭುವು ಆರೋಗಿಸಿ ಸಮಸ್ತ ಜೀವಿಗಳನ್ನು ತೃಪ್ತಿಬಡಿಸಿ ತನ್ನ ಸರ್ವಾಂತರ್ಯಾಮಿತ್ವವನ್ನು ಪ್ರಕಟಗೊಳಿಸಿದನು.**



ಶೂನ್ಯಸಿಂಹಾಸನದ ತುದಿಯಲ್ಲಿಡಲ್ಪಟ್ಟ ಚಿತ್ಸ್ವರೂಪ ಯಂತ್ರದ ಮಧ್ಯಭಾಗದಲ್ಲಿ ವಿರಾಜಮಾನನಾದ ಅಲ್ಲಮಪ್ರಭುವಿನೆಡೆಗೆ ಬಸವೇಶ್ವರನು ಭಯಭಕ್ತಿಯುಕ್ತನಾಗಿ ಬಂದು, ವಿಧಿವತ್ತಾಗಿ ಅವನ ಪಾದಪೂಜೆಯನ್ನು ಮಾಡತೊಡಗಿದನು. ಬಸವೇಶ್ವರನ ಅಕ್ಕನ ಮಗನಾದ ಚನ್ನಬಸವೇಶ್ವರನು ಪೂಜಾಸಾಮಗ್ರಿಗಳನ್ನು ಸಿದ್ಧಗೊಳಿಸುತ್ತಿದ್ದನು. ಈ ಪೂಜೆಗಾಗಿ ಹಡಪದ ಅಪ್ಪಣ್ಣ, ಕಿನ್ನರಯ್ಯ, ಮಡಿವಾಳ ಮಾಚಿದೇವ, ಮೋಳಿಗೆ ಮಾರಯ್ಯ, ಸೊಡ್ಡಳಬಾಚರಸ ಮುಂತಾದ ಪ್ರಮಥ ಗಣರು ಬಂದಿದ್ದರು. ಮತ್ತು ಈ ಮಹಾಪೂಜೆಯನ್ನು ನೋಡಬೇಕೆಂದು ಬೇರೆ ಬೇರೆ ಸ್ಥಳದಿಂದ ಅನೇಕ ಶಿವಭಕ್ತರು ಬಸವೇಶ್ವರನ ಅರಮನೆಯಲ್ಲಿ ನೆರೆದಿದ್ದರು. ಅಲ್ಲಮಪ್ರಭುವಿನ ಗುಣಾತಿಶಯವನ್ನು ಹೊಗಳುವದರಲ್ಲಿಯೂ ಆತನ ಪಾದಪೂಜೆಯಲ್ಲಿಯೂ ಬಸವೇಶ್ವರನು ತೊಡಗಿದ್ದರಿಂದ, ಇತರ ಜಂಗಮರ ಪೂಜಾದಿ ಸತ್ಕಾರಗಳನ್ನು ಮಾಡಲಿಕ್ಕಾಗಲಿಲ್ಲ, ಆದಕಾರಣ ಬಂದ ಜಂಗಮರು ಹಸಿವೆಯಿಂದ ವ್ಯಾಕುಲಪಟ್ಟು, "ಅಹಹ! ಏನು ಮಾಡತಕ್ಕದ್ದು, ಬಸವೇಶ್ವರನು ಬುದ್ಧಿವಂತನಾದಾಗ್ಯೂ ನಮ್ಮ ವಿಷಯದಲ್ಲಿ ಇಷ್ಟು ಅನಾದರವುಳ್ಳವನಾಗಲು ಕಾರಣವೇನು! ಓಹೊ! ಬಸವೇಶ್ವರನು ಅಲ್ಲಮನೆಂಬವನ ಪೂಜೆಯಲ್ಲಿ ತೊಡಗಿರುವನಂತೆ. ಈತನಿಂದ ಬಸವೇಶ್ವರನಿಗೆ ಏನು ಲಾಭವಾಗುತ್ತದೆಂಬದು ಕೂಡಲೆ ತಿಳಿಯುವದು" ಎಂದು ತಂತಮ್ಮೊಳಗೆ ತಮಗೆ ತೋರಿದಂತೆ ಮಾತಾಡಿ ಅವರು ಬಸವೇಶ್ವರನ ಮಂದಿರವನ್ನು ಬಿಟ್ಟು ತೆರಳಿದರು. ದೂರದೃಷ್ಟಿಯುಳ್ಳ ಬಸವೇಶ್ವರನು ಇದನ್ನರಿತು ತನ್ನ ಮನದಲ್ಲಿ—"ನನ್ನ ತಿಳುವಳಿಕೆಯು ಎತ್ತ ಹೋಯಿತು! ಜಂಗಮರ ಪ್ರಸಾದವು ನನಗೆ ದೊರೆಯಬೇಕೆಂದು ನಾನು ಅವರನ್ನು ಕರತಂದೆನು.

ಈಗ ಅವರು ತಿರುಗಿ ಹೋಗಿರುವರಲ್ಲಾ! ಇಷ್ಟು ದಿನ ಮಾಡಿದ ಜಂಗಮ ಪೂಜೆಯು ನಿರರ್ಥಕ ವಾಯಿತಲ್ಲಾ! ಅನೇಕ ವ್ರತಗಳನ್ನಾಚರಿಸಿ ಸಂಗ್ರಹಿಸಿದ ಪುಣ್ಯವು ಈ ಹೊತ್ತು ನನ್ನ ಉದಾಸೀನತೆಯಿಂದ ವ್ಯರ್ಥವಾಯಿತು !! ಆದ್ದರಿಂದ ನಾನು ಇನ್ನು ಜೀವಿಸಿ ಪ್ರಯೋಜನವಿಲ್ಲ" ವೆಂದು ಬಗೆದು ಗದ್ಗದ ಕಂಠವುಳ್ಳವ ನಾಗಿ ಅಲ್ಲಮಪ್ರಭುವನ್ನು ಕುರಿತು ಬಸವೇಶ್ವರನು—"ಎಲೈ ಪೂಜ್ಯನಾದ ಗುರು ವರ್ಯನೆ, ನಾನು ಒಂದು ಲಕ್ಷ ತೊಂಬತ್ತಾರು ಸಾವಿರ ಗಣಂಗಳ ಲಿಂಗಾರ್ಪಿತ ಕ್ಕಾಗಿ ಭೋಜನ ಪದಾರ್ಥಗಳನ್ನು ಸಂಗ್ರಹಿಸಿದ್ದೇನೆ. ಬಂದ ಜಂಗಮರೆಲ್ಲ ತಿರುಗಿ ಹೋದ್ದರಿಂದ ಪುನಃ ಅವರನ್ನು ಕರತರುವದೆಲ್ಲಿ?" ಎಂದು ಸ್ವಲ್ಪದರ ಲ್ಲಿಯೇ ತನ್ನ ಮನಸ್ಸಿನ ಇಂಗಿತವನ್ನು ತಿಳಿಸಲು ಅಲ್ಲಮನು ಅದನ್ನು ಕೇಳಿ ನಗುತ್ತ—"ನೀನು ಸುಮ್ಮನೆ ಚಿಂತಾಗ್ರಸ್ತನಾಗಬೇಡ. ನಿನ್ನ ಒಂದು ಲಕ್ಷ ತೊಂಬ ತ್ತಾರು ಸಹಸ್ರ ಗಣಂಗಳಿಗೆ ನಾನೊಬ್ಬನೆ ಸರಿಯಾಗಿದ್ದೇನೆ. ನಿನ್ನ ಜಂಗಮರಿಗೆ ಅಥವಾ ಅದಕ್ಕೂ ಹೆಚ್ಚು ಸಂಖ್ಯೆಯುಳ್ಳ ಜಂಗಮರಿಗೆ ಬೇಕಾಗುವ ಪದಾರ್ಥವು ನನಗೊಬ್ಬಗೇ ಬೇಕಾಗುತ್ತದೆ ವ್ಯರ್ಥವಾದ ಮಾತಿನಿಂದ ಕಾಲಕಳೆಯುವದು ಯೋಗ್ಯವಲ್ಲ. ನಾನು ಹಸಿದಿದ್ದೇನೆ. ನನ್ನನ್ನು ತೃಪ್ತಿಬಡಿಸು. ಅಂದರೆ ನಿನಗೆ ಜಯವಾಗುವದು." ಎಂದು ಹೇಳಿ ಬಸವೇಶ್ವರನ ಸಂಶಯವನ್ನು ದೂರಮಾಡಿ ದನು. ಬಲದೇವ ಮಂತ್ರಿಯ ಪುತ್ರಿಯಾದ ತನ್ನ ಸತಿಯನ್ನು ಸಹಾಯಕ್ಕೆ ಕರೆ ದುಕೊಂಡು ಅಲ್ಲಮಪ್ರಭುವಿನ ಪೂಜೆಗನುವಾದನು- ಇಂದ್ರನ ವೈಭವಕ್ಕಿಂತ ಮಿಗಿಲಾದ ವೈಭವವುಳ್ಳ ಬಸವೇಶ್ವರನು ಕೋಮಲವಾದ ತನ್ನ ಸತಿಯ ಕಯ್ಯಿಂದ ಶರಲ್ಪಟ್ಟ ಬಂಗಾರದ ಕೊಡದಲ್ಲಿಯ ತಂಣೀರಿನಿಂದ ಗುರುವರ್ಯನ ಚರಣಕಮ ಲಗಳನ್ನು ಅಭಿಷೇಕಿಸಿದನು. ಗುರುವರ್ಯನ ಎರಡೂ ಕೈಗಳಿಗೆ ಸ್ವಚ್ಛವಾದ ಅರ್ಘ್ಯೋದಕವನ್ನೂ ಮುಖಕ್ಕೆ ಆಚಮನೋದಕವನ್ನೂ ಕೊಟ್ಟನು. ಪತ್ರ-ಪುಷ್ಪ-ಅಕ್ಷತಾದಿಗಳಿಂದ ಮಂತ್ರಪುರಸ್ಸರವಾಗಿ ಆತನ ಪೂಜೆ ಮಾಡಿ ಅನಂತರ ಘಮಘಮಿಸುವ ಧೂಪವನ್ನರ್ಪಿಸಿ, ಕರೆ ಆಕಳ ತುಪ್ಪದಲ್ಲಿ ಎದ್ದಿದ ಬತ್ತಿಗಳನ್ನು ಬಂಗಾರದ ಪಣತಿಯಲ್ಲಿಟ್ಟು ಅವುಗಳಿಂದ ದೀಪವನ್ನು ಮಾಡಿ ಅದನ್ನು ಗುರು ವಿಗೆ ಸಮರ್ಪಿಸಿದನು. ರತ್ನದ ಕಾಲುಗಳುಳ್ಳ ಅಡ್ಡಣಿಗೆಯ ಮೇಲೆ ಬಂಗಾರದ ಗಂಗಾಳವನ್ನಿಟ್ಟು ಆದರೊತ್ತಿನಲ್ಲಿ ರತ್ನದ ಮತ್ತು ಬಂಗಾರದ ಸಣ್ಣ ದೊಡ್ಡ ಪಾನಪಾತ್ರೆಗಳನ್ನಿರಿಸಿ, ಸ್ವಚ್ಛವಾದ ಅಂಬೆಮೋರಿ ಅಕ್ಕಿಯಿಂದ ಮಾಡಿದ ಅನ್ನ ವನ್ನೂ ಇತರ ಪದಾರ್ಥಗಳನ್ನೂ ಗಂಗಾಂಬಿಕೆಯು ತಂದು ಗುರುವಿನ ಗಂಗಾ ಳದಲ್ಲಿ ನೀಡಿದಳು. ನೀಡನೀಡುವಷ್ಟರೊಳಗೆ ನೀಡಿದ ಎಲ್ಲ ಪದಾರ್ಥಗಳನ್ನು ದೊಡ್ಡ ದೊಡ್ಡ ತುತ್ತುಮಾಡಿ ನುಂಗಹತ್ತಿದನು. ಇದನ್ನು ನೋಡಿ ಬಸವೇಶ್ವರನು

ಆನಂದಪಟ್ಟು ಹೆಚ್ಚು ಒತ್ತರದಿಂದ ಕೆಲಸಮಾಡತಕ್ಕಂಥವರನ್ನು ಕರೆದು, ಮನೆಯಲ್ಲಿ ಮಾಡಿದ ಸರ್ವ ಪದಾರ್ಥಗಳನ್ನು ಅನೇಕ ಗಂಗಾಳಗಳಲ್ಲಿಯೂ ಬಾಳೆಯ ಎಲೆಗಳಲ್ಲಿಯೂ ಉತ್ತಮೋತ್ತಮ ಮಡಿವಸ್ತ್ರಗಳಲ್ಲಿಯೂ ನೀಡಿಸಿಟ್ಟದ್ದನು ಅವೆಲ್ಲ ನಿಮಿಷಮಾತ್ರದಲ್ಲಿ ನುಂಗಿ ಅಲ್ಲಮನು ಬಸವೇಶ್ವರನ ಕಡೆಗೆ ನೋಡಹತ್ತಿದನು. ಇದರಿಂದ ಬಸವೇಶ್ವರನು ಆಶ್ಚರ್ಯಚಕಿತನಾಗಿ ಮನದಲ್ಲಿ ಗಾಬರಿಯಾದನು. ಆದರೂ ಭಕ್ತಿಯಲ್ಲಿ ಕಿಂಚಿತ್ತಾದರೂ ಹಿಂಜರಿಯಲಿಲ್ಲ. ಬಸವೇಶ್ವರನು ತನ್ನ ಅಡಿಗೆಯವರೆಲ್ಲರನ್ನು ಕರೆದು ನೀವು ಮಾಡಿದ ಸರ್ವ ಭೋಜನ ಪಧಾರ್ಥಗಳನ್ನು ತಂದು ನೀಡಿರಿ. ಮತ್ತು ಹೊಸದಾಗಿ ಅಡಿಗೆ ಮಾಡಿ ಆವೆಲ್ಲ ವಸ್ತುಗಳನ್ನು ಇಲ್ಲಿ ತಂದಿಡಿರಿ. ಎಂದು ಕಟ್ಟು ಮಾಡಲು ತನ್ನ ಯಜಮಾನನ ಅಪ್ಪಣೆಯ ಮೇರೆಗೆ ಅವರು ಗುಡ್ಡದಷ್ಟು ಅನ್ನದ ರಾಶಿಯನ್ನು ಮಾಡಿ ಗುರುವಿಗೆ ಅರ್ಪಿಸಿದರು. ಅದನ್ನು ನೋಡನೋಡುತ್ತಲೆ ನುಂಗಿಬಿಟ್ಟನು. ಬಸವೇಶ್ವರನು ತನ್ನ ಸೇವಕ ಜನರಿಂದ ಪೇಟೆಯಲ್ಲಿದ್ದ ಹಣ್ಣು ಹಂಪಲಗಳನ್ನು ತರಿಸಿಕೊಟ್ಟರೂ ಅವುಗಳಿಂದ ಅವನ ಹಸಿವೆಯು ದೂರವಾಗಲಿಲ್ಲ. ಅಲ್ಲಮಪ್ರಭುವು ಪುನಃ ಹಸಿದವನಂತೆ ಕಯ್ಯಸನ್ನೆ ಮಾಡಲು ಬಸವೇಶ್ವರನು ಅದನ್ನು ನೋಡಿ ಸ್ವಲ್ಪ ಭಯಪಟ್ಟನು. ಇದನ್ನರಿತು ಪ್ರಮಥಗಣರು ತಮ್ಮ ತಮ್ಮ ಮನೆಗೆ ಓಡಿಹೋಗಿ ಮನೆಯಲ್ಲಿ ಮಾಡಿದಸರ್ವ ಪದಾರ್ಥಗಳನ್ನು ತಂದು ಅಲ್ಲಮನ ಮುಂದಿಟ್ಟರು. ಹೀಗೆ ಪರ್ವತಪ್ರಾಯವಾದ ಪದಾರ್ಥಗಳನ್ನು ಕ್ಷಣಮಾತ್ರದಲ್ಲಿಯೇ ತೀರಿಸಿ ಬಿಟ್ಟನು. ಜೇನತುಪ್ಪ-ತುಪ್ಪ-ಮೊಸರು-ಹಾಲು-ಸಾರು ಮೊದಲಾದವುಗಳಿಂದ ತುಂಬಿದ ಕೊಡಗಳನ್ನು ಕೂಡಲೇ ಕುಡಿದು ಅವುಗಳ ಮೇಲೆ ಸವಿಯಾದ ಅನ್ನವನ್ನುಂಡನು. ಉಪ್ಪಿನಕಾಯಿ ಚಟ್ಣಿ ಮುಂತಾದ ನಂಜಿಕೊಳ್ಳುವ ಜೀನಸುಗಳನ್ನು ಒಮ್ಮೆಗಿಲೇ ನುಂಗಿದನು. ಈ ಅದ್ಭುತವನ್ನು ನೋಡಿ ಭಕ್ತರೆಲ್ಲರು—“ಅಲ್ಲಮಪ್ರಭುವು ಆಕಾಶದಷ್ಟು ಉದ್ದವಾದ ನಾಲಿಗೆಯನ್ನು ಪಸರಿಸಿ ಸರ್ವ ಜಗತ್ತನ್ನೆ ನುಂಗುವ ಅಸಾಧಾರಣ ಸಾಮರ್ಥ್ಯವುಳ್ಳವನು. ಇಂಥ ಮಹಾತ್ಮನ ಹೊಟ್ಟೆತುಂಬ ನೀಡಿ ತೃಪ್ತಿಪಡಿಸುವದು ವಿಷ್ಣುಬ್ರಹ್ಮಾದಿಗಳಿಗೂ ಕೂಡ ದುಸ್ಸಾಧ್ಯವಾಗಿದೆ. ಬಸವೇಶ್ವರನು ಇಂತಹ ಅಸಾಧ್ಯ ಕೆಲಸದಲ್ಲಿ ಯಾಕೆ ಕೈಹಾಕಿದನೋ ತಿಳಿಯದು. ಇದರ ಪರಿಣಾಮವೇನಾದೀತೆಂಬದು ಗೊತ್ತಾಗದು. ” ಎಂದು ಚಿಂತಿಸುತ್ತಿದ್ದರು.

ಇಷ್ಟರಿಂದಾದರೂ ಬಸವೇಶ್ವರನು ಎದೆಗುಂದದೆ ಕಲ್ಯಾಣಪಟ್ಟಣದಲ್ಲಿ ಸಂಗ್ರಹಿಸಿಟ್ಟ ಸರ್ವಪ್ರಕಾರದ ಧಾನ್ಯಗಳನ್ನು ಕೊಂಡು ತರಹೇಳಿದನು. ಆ ಪಟ್ಟಣದಲ್ಲಿ ಆತನ ಅಪ್ಪಣೆಯನ್ನುಲ್ಲಂಘಿಸಲಿಕ್ಕೆ ಯಾರಿಗೂ ಧೈರ್ಯವಿರಲಿಲ್ಲ. ಅನೇಕ

ಹುಂಡುಗ ಗೋದಿ ಅಕ್ಕಿ ಬೇಳೆ ಕಡಲಿ ತೊಗರಿ ಮೊದಲಾದಧಾನ್ಯಗಳು ಅರಮನೆಗೆ ಬಂದು ಬಿದ್ದವು. ಬಸವೇಶ್ವರನು ಹತ್ತು ಲಕ್ಷಕ್ಕಿಂತ ಅಧಿಕವಾದ ಜಾಣ ಅಡಿಗೆ ಯುವರನ್ನು ಕರಿಸಿ ಅಡಿಗೆಯನ್ನು ಸಿದ್ಧಗೊಳಿಸಲಿಕ್ಕೆ ಹೇಳಿದನು. ಅಡಿಗೆಯುವರು ಕೂಡಲೆ ಪರ್ವತಪ್ರಾಯವಾದ ಅನ್ನದ ರಾಸಿಯನ್ನು ಅಲ್ಲಮನ ಮುಂದೆ ಒಟ್ಟಿದರು. ಅದನ್ನು ಸಹ ಕ್ಷಣದಲ್ಲಿ ಇಲ್ಲೆನಿಸಿ ಬಿಟ್ಟನು. ಆದರೂ ಬಸವೇಶ್ವರನು ಧೈರ್ಯಶಾಲಿ ಅರಸನ ಕೋಟಾರದಲ್ಲಿರುವ ಎಲ್ಲತರದ ಧಾನ್ಯಗಳನ್ನು ತರಿಸಿ ಅಡಿಗೆ ಮಾಡಿಸಿ ನೀಡಿದನು. ಆದರೂ ಪ್ರಭುವಿನ ಹಸಿವೆಯು ಅಡಗಲಿಲ್ಲ. ಇದನ್ನು ಕಂಡು ಪ್ರಮಥರು "ಅಹಹಾ!!! ಪ್ರಳಯ ಕಾಲದಲ್ಲಿ ನೂರಾರು ಬ್ರಹ್ಮಾಂಡಗಳನ್ನು ನುಂಗಿದರೂ ಅಲ್ಲಮಪ್ರಭುವಿಗೆ ತೃಪ್ತಿಯಾಗಲಿಲ್ಲ. ಈಗ ಈ ಅಲ್ಪ ಅನ್ನದಿಂದ ಆತನು ಹೇಗೆ ತೃಪ್ತನಾದಾನು? ಪರಿಪೂರ್ಣನಾದ ನಿತ್ಯನಿರಂಜನನಾದ ಪ್ರಭುವಿಗೆ ನಮ್ಮಾ ಚಿಕ್ಕಪಟ್ಟಣವು ಹೇಗೆ ತೃಪ್ತಿಗೊಳಿಸೀತು? ಒಡವಾಗ್ನಿಯು ಪ್ರಜ್ವಲಿಸಿ ಸರ್ವ ಜಗತ್ತನ್ನು ಸುಟ್ಟು ಭಸ್ಮ ಮಾಡುವಾಗ ಕೆಲವು ಭಾವಿಗಳ ನೀರಿನಿಂದ ಅದನ್ನು ಆರಿಸುವದು ಹೇಗಾದೀತು? ಅನೇಕ ಶ್ರುತಿಗಳು "ಈ ಪ್ರಭುವು, ಸರ್ವತ್ರ ಮುಖವುಳ್ಳವನೂ ಕಣ್ಣುಳ್ಳವನೂ ಕಿವಿಯುಳ್ಳವನೂ ಕಯ್ಯುಳ್ಳವನೂ ಕಾಲುಳ್ಳವನೂ ಸರ್ವ ವಿಶ್ವವೇ ಅನ್ನವಾಗುಳ್ಳವನೂ ಆಗಿದ್ದಾನೆ" ಎಂದು ಸಾರುತ್ತವೆ. ಇಂಥವನು ಈ ಮಿತ ಪದಾರ್ಥಗಳ ಭಕ್ಷಣೆಯಿಂಧ ಹೇಗೆ ತೃಪ್ತನಾದಾನು!" ಎಂದು ಪರಸ್ಪರವಾಗಿ ಮಾತಾಡಹತ್ತಿದರು. ಬಸವೇಶ್ವರನು ಪ್ರಮಥರಾಡುವ ಈ ನುಡಿಗಳನ್ನು ಕೇಳಿ ಮನಸ್ಸಿಗೆ ಏನೊಂದು ತೋಚದೆ ಚಿಂತೆಯಿಂದ ತಲೆಯನ್ನು ಬಾಗಿಸಿ ಮೌನವ್ರತವನ್ನು ಧಾರಣ ಮಾಡಿದನು. ಇದನ್ನು ಕಂಡು, ಮಡಿವಾಳಮಾಚಿದೇವರು— "ರಣರಂಗದಲ್ಲಿ ನಿಂತ ಶೂರನು ಹಿಂದಿರುಗುವನೇ? ಅದರಂತೆ ನೀನಾದರೂ ನಿನ್ನ ತನು—ಮನೋ—ಧನವನ್ನು ಗುರುವಿಗೆ ಅರ್ಪಿಸಿ ಆತನನ್ನು ತೃಪ್ತಿಪಡಿಸು, ಅಂಜಬೇಡ, ನಿನ್ನ ವಿವೇಕವನ್ನು ಉಪಯೋಗಿಸು" ಎಂದು ಬಸವೇಶ್ವರನಿಗೆ ಎಚ್ಚರ ಕೊಡಲು, ಅವನಿಗೆ ತನ್ನ ಕರ್ತವ್ಯಕರ್ಮದ ಗೊತ್ತಾಗಿ ಮನದಲ್ಲಿ ಸಂತೋಷವನ್ನು ತಾಳಿ ತನ್ನ ಹಿತಚಿಂತಕನಾದ ಮಡಿವಾಳಮಾಚಿದೇವನನ್ನು ಕುರಿತು—"ಅಯ್ಯಾ, ಶ್ರೇಷ್ಠ ಗುರುವಾದ ಮಾಚಿದೇವನೇ, ನೀನು ಕೃಪಾಸಮುದ್ರನಿದ್ದು, ನಿರ್ಮಲ ಭಕ್ತಿಯೆಂಬ ಅಮೃತಕ್ಕೆ ಸಾಗರನಾಗಿರುವಿ. ಪಾಪಿಗಳ ಪಾಪವನ್ನು ಹೋಗಲಾಡಿಸಲು ನೀನೇ ಸಮರ್ಥನು. ನನಗೆ ಹಿತಮಾಡುವದಕ್ಕಾಗಿ ಕೈಲಾಸವನ್ನು ಬಿಟ್ಟು ಈ ಮರ್ತ್ಯಲೋಕಕ್ಕೆ ಬಂದಿರುವಿ. ಸಂಕಟಸಮಯದಲ್ಲಿ ನನಗೆ ಯೋಗ್ಯ ಉಪಾಯವನ್ನು ಸೂಚಿಸಿ ಕೊಟ್ಟದ್ದರಿಂದ ನೀನು ನನಗೆ ಅಕಾರಣ ಮಿತ್ರನಾಗಿರುವಿ. ಪ್ರಮಥಶ್ರೇಷ್ಠನೆ, ತ್ರಿಕಾಲದಲ್ಲಿಯೂ ನಿನ್ನ ಉಪಕಾರವನ್ನು ಸ್ಮರಿಸುವೆನು" ಎಂದು

ಆತನನ್ನು ಕೊಂಡಾಡಿ, ತನ್ನ ದೇಹವನ್ನೇ ಗುರುವಿಗೆ ಭಕ್ಷಣಾರ್ಥವಾಗಿ ಅರ್ಪಿಸುವೆನೆಂದು ದೃಢನಿಶ್ಚಯ ಮಾಡಿಕೊಳ್ಳುತ್ತಲೇಳುವಷ್ಟರಲ್ಲಿ, ಚನ್ನಬಸವೇಶ್ವರನು ಸಹ ಬಸವೇಶ್ವರನಂತೆ ಮಾಡಲು ಸಿದ್ಧನಾದನು. ಬಸವೇಶ್ವರನು ದೇಹಗುಣಗಳನ್ನೆಲ್ಲ ಕಳೆದು, ಮನಸ್ಸನ್ನು ಶುದ್ಧ ಸಚ್ಚಿದಾನಂದಸ್ವರೂಪದ ಕಡಿಗೆ ಒಲಿಸಿ, ತನ್ನ ಎರಡೂ ಕೈಗಳನ್ನು ಜೋಡಿಸಿ—" ಹೇ ಪರಮೇಶ್ವರ, ನಿನ್ನಲ್ಲಿ ಮೂರು ಲೋಕಗಳು ಅಡಗಿವೆ. ನೀನು ಮೂರೂ ಲೋಕಗಳಲ್ಲಿ ಪರಿಪೂರ್ಣವಾಗಿ ತುಂಬಿಕೊಂಡಿರುವಿ. ಆಳವಾದ ತಗ್ಗುಗಳಿಗಿಂತ ಆಳವಾಗಿ ನಿನ್ನ ಪಾದವಿದೆ. ಅತಿಶಯ ಎತ್ತರವಾದ ಪರ್ವತಗಳ ಶಿಖರಗಳಿಗಿಂತ ಎತ್ತರವಾಗಿ ನಿನ್ನ ಮಸ್ತಕವದೆ. ನಿನಗೆ ಜನ್ಮವೂ ತಾರುಣ್ಯಾವಸ್ಥೆಯೂ ಮರಣವೂ ಇಲ್ಲ. ವೇದಾಗಮಗಳು ಸದಾ ನಿನ್ನ ಸ್ಥಾನವನ್ನು ಶೋಧ ಮಾಡುತ್ತಲಿವೆ. ಆದರೂ ಅವುಗಳಿಗೆ ನೀನು ಗೊತ್ತಾಗಿಲ್ಲ. ಮನಸ್ಸಿನಿಂದ ಕೂಡ ಊಹಿಸಲು ಬಾರದಂತಿರುವಿ. ಹತ್ತು ದಿಕ್ಕುಗಳು ನಿನ್ನ ಕೈಗಳು; ಸೂರ್ಯ ಚಂದ್ರಾಗ್ನಿ ಮೂವರು ನಿನ್ನ ಕಣ್ಣುಗಳು; ಆಕಾಶವು ನಿನ್ನ ಉದರವಾಗಿದ್ದು, ಅದರೊಳಗಿನ ವಾಯುವೇ ಶ್ವಾಸೋಚ್ಛ್ವಾಸವಾಗಿ, ಭೂಮಿಯು ನಿನ್ನ ಪಾದವಾಗಿದೆ. ಹೀಗೆ ವೇದಗಳು ನಿನ್ನನ್ನು ಸ್ತುತಿಸುತ್ತವೆ. ನಾನು ಹೊಟ್ಟೆತುಂಬ ಉಣಿಸಬೇಕೆಂದು ಮಾಡಿದ್ದೇನು; ಅದನ್ನು ಸ್ವಲ್ಪಾದರೂ ನಡಿಸಲಿಲ್ಲ. ಆದ್ದರಿಂದ ಹೇಳಲಾರದಷ್ಟು ಅಪರಾಧವು ನನ್ನಿಂದುಂಟಾಯಿತು. ಪರಮೇಶ್ವರ, ನಿನ್ನುದರದಲ್ಲಿ ಅನೇಕ ಬ್ರಹ್ಮಾಂಡಗಳು ಕೇವಲ ಕಮಲತಂತುಗಳೋಪಾದಿಯಲ್ಲಿ ಅವೆ. ಇಂಥ ನಿನಗೆ ನನ್ನಿಂದ ಸಂತೋಷಬಡಿಸುವದು ಹೇಗಾದೀತು? ನಿನ್ನ ಹೊಟ್ಟೆತುಂಬ ಅನ್ನವನ್ನು ನೀಡಿ ನಿನ್ನನ್ನು ತೃಪ್ತಿಪಡಿಸುವೆನೆಂದು ಆಡಿದ ನನ್ನ ಅಪರಾಧವನ್ನು ಕ್ಷಮಿಸಿ ನನ್ನನ್ನು ರಕ್ಷಿಸಬೇಕು. ನಾವಿಬ್ಬರು ಭಿಕ್ಷಾನ್ನರೂಪದಿಂದ ನಮ್ಮಿಶರೀರಗಳನ್ನು ಅರ್ಪಿಸಿರುತ್ತೇವೆ. ದಯವಿಟ್ಟು ಅವುಗಳನ್ನು ಸ್ವೀಕರಿಸಬೇಕು. ನಿನಗೆ ಇವು ಯೋಗ್ಯವಾದರೆ ನಾವು ಕೃತಾರ್ಥರಾಗುವೆವು " ಎಂದು ಪ್ರಭುರಾಯನನ್ನು ಉಪನಿಷದ್ವಾಕ್ಯಗಳಿಂದ ಸ್ತೋತ್ರಮಾಡುತ್ತಿರಲು, ಅದನ್ನು ಕೇಳಿ ಅಲ್ಲಮಪ್ರಭುವು ಸಂತುಷ್ಟನಾಗಿ ನಗುತ್ತ—" ಬಸವೇಶ್ವರನೆ, ನೀನು ಹೀಗೆ ಮಾತಾಡಬಹುದೆ! ನೀನು ತತ್ವವೇತ್ತನಿದ್ದು ನನ್ನಂಥ ನಿರಂಜನ ಜಂಗಮನನ್ನು ಕುರಿತು ಹೀಗೆ ಅನ್ನುವದು ಸರಿಯಲ್ಲ. ನಾನು ಚಿತ್ಸ್ವರೂಪ ಪರಮೇಶ್ವರನಿದ್ದುದರಿಂದ ಹಸಿವು ನೀರಡಿಕೆಗಳೆಂಬ ದೇಹಧರ್ಮಗಳು ನನ್ನಲ್ಲಿಲ್ಲ. ನಿರಿಚ್ಛೆಯುಳ್ಳವನಾದ ನನ್ನನ್ನು ದುರ್ವ್ಯಸನಗಳು ಹೇಗೆ ತಟ್ಟುವವು- ಮನ್ಮಥಧ್ವಂಸಿಯಾದ್ದರಿಂದ ವಿಷಯಸುಖಗಳ ಮಾತು ನನ್ನೆದುರಿಗೆ ಸಾಗದು. ಶಿವಶರಣರಲ್ಲಿಯೂ ಶಿವನಲ್ಲಿಯೂ ನಿನ್ನ ನಿಷ್ಠೆಯೂ ಭಕ್ತಿಯೂ ಅಭಿವೃದ್ಧಿ ಹೊಂದಿದ ಕೀರ್ತಿಯನ್ನು ಕೇಳಿ ನಾವು ನಿನ್ನನ್ನು ನೋಡ

ಬೇಕೆಂದು ಇಲ್ಲಿಗೆ ಬಂದೆನು. ಇದರ ಹೊರತು ಬೇರೆ ಯಾವ ಉದ್ದೇಶವಿಲ್ಲ. ಬಸವೇಶ್ವರ, ನೀನು ದಾನಿಗಳಲ್ಲಿ ಶ್ರೇಷ್ಠನೆಂದು ತಿಳಿದು ನಿನ್ನಿಂದ ಏನಾದರೂ ಪಡಕೊಳ್ಳಲಿಕ್ಕೆ ನಾನು ಇಲ್ಲಿಗೆ ಬರಲಿಲ್ಲ. ನಿನ್ನಂತೆ ಭಕ್ತಿಯನ್ನು ತೋರಿಸತಕ್ಕ ವರು ಮೂರೂ ಲೋಕಗಳಲ್ಲಿ ಯಾರೂ ಇಲ್ಲದ್ದರಿಂದ, ಆ ನಿನ್ನ ಭಕ್ತಿಯನ್ನು ಪರೀ ಕ್ಷಿಸಬೇಕೆಂದು ನಾನು ಇಲ್ಲಿಗೆ ಬಂದೆನು.

ಬಸವೇಶ್ವರ—ಗುರುಶ್ರೇಷ್ಠನೆ, ಮಂದಮತಿಯಾದ ನಾನೆತ್ತ! ವಿಚಾರಸ್ವರೂ ಪನಾದ ನೀನೆತ್ತ! ನೀನು ಸರ್ವ ಪ್ರಾಣಿಗಳ ಪ್ರಾಣಸ್ವರೂಪನಾಗಿರುವಿ. ನಿನ್ನ ಚರಣಕಮಲಗಳ ಸೇವೆಯಲ್ಲಿ ತತ್ಪರರಾದ ಜನರೊಳಗೆ ನಾನೊಬ್ಬನು. ಆದ್ದ ರಿಂದ ನೀನು ಕೊಡುವ ಮಹತ್ವಕ್ಕೆ ನಾನು ಪಾತ್ರನಲ್ಲ. ನಾನು ಸಾಮಾನ್ಯ ಮನುಷ್ಯನಿದ್ದು, ನಿನ್ನ ಚರಣ ಧೂಲಿಯೋಪಾದಿಯಲ್ಲಿರುವದು ನನಗೆ ಯೋಗ್ಯವು. ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರನಾಗಿ ಮಾಡಿ ನನ್ನನ್ನು ರಕ್ಷಿಸು. ಪರಮೇಶ್ವರ, ನಿನ್ನ ಕೃಪೆಯು ನನ್ನ ಮೇಲೆ ನಿಜವಾಗಿದ್ದರೆ, ನನ್ನೀ ಶರೀರವು ಉಳಿದ ಭಕ್ಷಣ ಪದಾರ್ಥಗಳಂತೆ ಯೋಗ್ಯವಾಗಲಿ. ಹೀಗಾಗದಿದ್ದಲ್ಲಿ, ನಾನು ಜೀವಿಸುವದು ವ್ಯರ್ಥವೇ ಸರಿ. ಅಲ್ಲಮಪ್ರಭು—(ನಗುತ್ತ) ಜಾಣನಾದ ಗುರುಪುತ್ರನೆ, ನಿನ್ನಂಥ ಸದ್ಗುಣಿಗಳು ಜಗತ್ತಿನಲ್ಲಿ ಸಿಗುವದು ಅತಿ ದುರ್ಲಭ. ನೀನು ತನು-ಮನೋ-ಧನ ಗಳನ್ನು ನನಗೆ ಅರ್ಪಿಸಿದಿ. ಗುರಸೇವೆಯಲ್ಲಿ ದಕ್ಷನಾಗಿರುವಿ. ನಿನ್ನಲ್ಲಿ ಅಸದೃಶ ವಾದ ಭಕ್ತಿರಸವು ಹರಿದಾಡುತ್ತಿರುವದು. ಎಂಟು ಪ್ರಕಾರದ ಮದಗಳು ನಾಶ ಹೊಂದಿದ್ದರಿಂದ ನಿನ್ನ ಮನಸ್ಸು ಅತಿ ನಿರ್ಮಳವಾಗಿದೆ. ಪೂಜ್ಯವಾದ ಇಷ್ಟಲಿಂ ಗದಲ್ಲಿ ಸದಾ ನಿನ್ನ ದೃಷ್ಟಿಯು ಕೀಲಿಸಲ್ಪಟ್ಟದ್ದರಿಂದ ಶರೀರದ ಮೇಲಿನ ಅಭಿಮಾ ನಾದಿಗಳು ಇಲ್ಲವಾಗಿವೆ. ನೀನು ಜನನ ಮರಣಾದಿಗಳಿಂದ ಮುಕ್ತನಾಗಿರುವಿ. ವಿಷಯೇಂದ್ರಿಯಗಳನ್ನು ನೀನು ಸಂಪೂರ್ಣವಾಗಿ ಜಯಿಸಿದ್ದರಿಂದ, ನನಗೆ ಭೋಜ ನ ಪದಾರ್ಥವಾಗಲಿಕ್ಕೆ ನಿನ್ನ ಶರೀರವು ಯೋಗ್ಯವಾಗಿದೆ. ಶಾಬಾಸ!!! ಬಸವೇಶ್ವ ರನೆ, ನಿನ್ನ ಭಕ್ತಿಯು ಅಗಾಧವಾದದ್ದು. ಕೇವಲ ಭಕ್ತಿಭಾವದಿಂದ ನಿನ್ನ ಶರೀರ ವನ್ನು ಅರ್ಪಿಸಿದೆಯಾದ್ದರಿಂದ ಈಗ ನನ್ನ ಹಸಿವೆಯು ಶಾಂತವಾಯಿತು. ಸದಾ ಚಾರಿಯಾದ ಬಸವೇಶ್ವರನೆ, ಸ್ವಲ್ಪವಾದರೂ ಮನದಲ್ಲಿ ಸಂದೇಹ ತಾಳದೆ ನನಗೆ ಹಸ್ತೋದಕವನ್ನು ಕೊಡು" ಎಂದು ಹೇಳಲು, ಆತನು ಉತ್ತರ ಕೊಡದೆ ತನ್ನ ಸತಿಯಳಿಂದ ನೀರು ತುಂಬಿದ ಬಂಗಾರದ ತಂಬಿಗೆಯನ್ನು ತಂಸಿ ಅಲ್ಲಮನ ಮುಂದಿಟ್ಟನು. ಅನಂತರ ಸುಗಂಧ ಪದಾರ್ಥಗಳಿಂದ ತುಂಬಿದ ತಾಂಬೂಲವನ್ನು ಗುರುವಿಗೆ ಅರ್ಪಿಸಿದನು. ಬಸವೇಶ್ವರನ ಪೂಜೆಯಿಂದ ಅಲ್ಲಮನು ಅತ್ಯಂತ ಹರ್ಷಿತನಾಗಿ ಆತನನ್ನು ಕುರಿತು—"ನಿನ್ನ ಮನೆಯಲ್ಲಿ ದಿನಾಲು ಭೋಜನ

ಮಾಡುವ ಜಂಗಮರು ಬಹಳವಾಗಿ ಹಸಿದಿರಬಹುದು; ಆದ್ದರಿಂದ ಬೇಗನೆ ಅವರನ್ನು ಕರತಂದು ಅವರಿಗೆ ಬೇಕಾದ ಪಕ್ವಾನ್ನಗಳನ್ನು ನೀಡಿ ತಣಿಸು. ಆಮೇಲೆ ನೀನು ಊಟ ಮಾಡು. ನಿನ್ನ ಸೇವಕ ಜನರ ಕಡಿಂದ ಸೇವೆಯನ್ನು ತಕ್ಕೊಂಡು ನೀನು ಅವರೊಡನೆ ಸ್ವಲ್ಪ ವಿಶ್ರಮಿಸು." ಎಂದು ಹೇಳಲು, ಅವರ ಅಪ್ಪಣೆಯ ಪ್ರಕಾರ ಜಂಗಮರ ಬಳಿಗೆ ಹೋಗಿ ಕೈಜೋಡಿಸಿಕೊಂಡು ನಿಂತು "ನಾನು ಮಾಡಿದ ಅಪರಾಧವನ್ನು ಕ್ಷಮಿಸಿ ನನ್ನ ಮನೆಗೆ ಎಂದಿನಂತೆ ಬಂದು ಲಿಂಗಪೂಜೆಯನ್ನು ಮಾಡಿಕೊಂಡು ನನಗೆ ಪ್ರಸಾದವನ್ನು ಕೊಟ್ಟು ಹೋಗಬೇಕೆಂದು ಆ ಜಂಗಮ ಮೂರ್ತಿಗಳನ್ನು ಅತಿ ದೈನ್ಯದಿಂದ ಬೇಡಿಕೊಳ್ಳಲು, ಆ ಮಾತಿಗೆ ಅವರು—"ಬಸವೇಶ್ವರನೆ, ಷಡ್ರಸಾನ್ನದಿಂದ ತೃಪ್ತರಾಗಿದ್ದೇವೆ. ಇದರಂತೆ ನಾವು ಪೂರ್ವದಲ್ಲಿ ಎಂದೂ ಸಂತೋಷವುಳ್ಳವರಾಗಿದ್ದಿಲ್ಲ. ಇದು ನಿನ್ನ ಸಾಮರ್ಥ್ಯವೋ ಅಥವಾ ಅಲ್ಲಮಪ್ರಭುವಿನ ಮಹತ್ವದ ಫಲವೋ ನಾವರಿಯೆವು. ಹೊಟ್ಟೆ ತುಂಬ ಉಂಡವರಿಗೆ ಡೇಗಗಳು ಬರುವಂತೆ ನಮಗೂ ಬಂದು ಸರ್ವತ್ರ ಅದರ ಸುವಾಸನೆಯು ಹರಡಿಕೊಂಡಿದೆ." ಎಂದು ಪ್ರತ್ಯುತ್ತರ ಕೊಟ್ಟರು. ಅಲ್ಲಮಪ್ರಭುವಿನ ಶರೀರದ ಮೇಲೆ ಲೇಪಿಸಿದ ಗಂಧವು ಜಂಗಮರ ಶರೀರದಲ್ಲಿಯೂ ಕಾಣಹತ್ತಿತು. ಇದರಿಂದ ಬಸವೇಶ್ವರನಿಗೆ ಪರಮಾಶ್ಚರ್ಯವುಂಟಾಗಿ, ಅಲ್ಲಮಪ್ರಭುವು ಸರ್ವಾಂತರ್ಯಾಮಿಯಾಗಿದ್ದ ಕಾರಣ ಆತನ ತೃಪ್ತಿಯಿಂದ ಸರ್ವರೂ ಉಂಡಂತೆ ತೃಪ್ತರಾದರೆಂದು ತನ್ನ ಮನದಲ್ಲಿ ನಿರ್ಧರಿಸಿದನು. ಮತ್ತು ನಮ್ರಭಾವದಿಂದ ಸರ್ವ ಜಂಗಮರು ತನ್ನ ಮನೆಗೆ ಬಂದು ಲಿಂಗಾರ್ಚನೆ ಮಾಡಬೇಕೆಂದು ಬೇಡಿಕೊಳ್ಳಲು, ಅವರು ಬಸವೇಶ್ವರನನ್ನು ಕುರಿತು—"ಎಲೈ ಬಸವೇಶ್ವರನೆ, ನಿನ್ನ ಅಲೌಕಿಕ ಸಾಮರ್ಥ್ಯದ ಮೂಲಕ ನಮ್ಮೆಲ್ಲರ ಹಸಿವೆಗಳು ದೂರವಾಗಿ ನಾವು ಅತ್ಯಂತ ತೃಪ್ತರಾಗಿದ್ದೇವೆ. ಅಲ್ಲಮಪ್ರಭುವಿನ ಕೀರ್ತಿಯೂ ಮಹಿಮೆಯೂ ಅಚಿಂತ್ಯವಾದದ್ದು. ಅವನೊಬ್ಬನಿಗೆ ಮಾತ್ರ ಜಗದ್ಗುರುವೆಂಬ ಬಿರುದು ಸಲ್ಲುತ್ತದೆ. ನಿನ್ನಂತೆ ನಾವೂ ಆ ಗುರುವರ್ಯನನ್ನು ಪೂಜಿಸುತ್ತೇವೆ. ಜ್ಞಾನಿಯಾದ ಅಲ್ಲಮಪ್ರಭುವು, ತಾಯಿಯು ತನ್ನ ಹೊಟ್ಟೆಯೊಳಗಿನ ಕೂಸನ್ನು ರಕ್ಷಿಸುವಂತೆ ಈ ಜಗತ್ತನ್ನು ರಕ್ಷಿಸುತ್ತಾನೆ. ಅವನ ತೃಪ್ತಿಯಿಂದ ನಮಗೂ ತೃಪ್ತಿಯುಂಟಾಗಿದೆ. ಇದು ಹುಡುಗಾಟಿಕೆಯು ಮಾತ್ರಲ್ಲ; ಪ್ರತ್ಯಕ್ಷಾನುಭವಕ್ಕೆ ಬಂದ ಸಂಗತಿಯು. ಇಂದ್ರಿಯ ಸಮುದಾಯಕ್ಕೆ 'ಸುಖವಾಗಹತ್ತಿದರೆ ಸುಖವಾಯಿತೆಂಬದಾಗಿ ಶಬ್ದರೂಪದಿಂದ ಹೊರಗೆ ಬರುವಂತೆ, ನಮ್ಮ ಇಂದ್ರಿಯಗಳಿಗೆ ಸುಖವಾದ್ದರಿಂದ ನಾವು ಸುಖವಾಗಿದ್ದೇವೆಂದು ಹೇಳುತ್ತೇವೆ. ಬಸವೇಶ್ವರನೆ, ನೀನು ಜಾಣನಾಗಿದ್ದ ಕಾರಣ ನಿನಗೆ ಸರ್ವವೂ ಗೊತ್ತಾಗಿದೆ" ಎಂದು ತಮಗಾದ ಆನಂದವನ್ನು ಪ್ರಕ

ಟವಾಗಿ ಆಡಿ ತೋರಿಸಿದ್ದರಿಂದ, ಬಸವೇಶ್ವರನು ಪುನಃ ಅಲ್ಲಮಪ್ರಭುವಿನ ಬಳಿಗೆ ಬಂದು ನಡೆದ ವೃತ್ತಾಂತವನ್ನು ಸಮಗ್ರವಾಗಿ ನಿವೇದಿಸಿ ಜಂಗಮರಿಗೂ ಅಲ್ಲಮ ಪ್ರಭುವಿಗೂ ಏನೂ ಭೇದವಿಲ್ಲೆಂದು ಹೇಳಿದನು. ಅದನ್ನು ಕೇಳಿ ಅಲ್ಲಮನು-"ಬಸವೇಶ್ವರನೆ, ನನಗೂ ಜಂಗಮರಿಗೂ ಏನೂ ಭೇದವಿಲ್ಲ ಮಿತ್ರನೆ, ನೀನೂ ಜಂಗಮರೂ ಇಬ್ಬರೂ ನನಗೆ ಸಮಾನರೆ. ಭಕ್ತ-ಮಹೇಶ್ವರರಿಬ್ಬರೂ ನನಗೆ ಒಂದೇ. ಭೇದಬುದ್ಧಿಯುಳ್ಳವರಿಗೆ ಮಾತ್ರ ಭಕ್ತರೂ ಮಹೇಶ್ವರರೂ ಬೇರೆಯಾಗಿ ತೋರುತ್ತಾರೆ. ಆದರೆ ನಿರ್ದುಷ್ಟವಾದ ಮನಸ್ಸುಳ್ಳವರಲ್ಲಿ ಈ ಉಭಯತರಲ್ಲಿಯು ಅಭೇದವು ಗೊತ್ತಾಗುವದು. ಆದ್ದರಿಂದ ನಾನೂ ನೀನೂ ಒಂದೇ ಎಂಬದಾಗಿ ನಿಶ್ಚಯಿಸಿಕೋ. ನಮ್ಮೀರ್ವರಲ್ಲಿ ಭೇದವು ತಿಲಮಾತ್ರವಿಲ್ಲ. ಪರಿಪೂರ್ಣವಾದ ಚಿತ್ಸ್ವರೂಪ ಸುಖದಲ್ಲಿ ಐಕ್ಯತೆಯನ್ನು ಹೊಂದಿ ನಿರಂಜನ ಪದದ ಉಪಭೋಗವನ್ನು ಸ್ವೀಕರಿಸು" ಎಂದು ಅಲ್ಲಮನು ಉಪದೇಶ ಮಾಡಲು ತತ್ಕ್ಷಣದಲ್ಲಿಯೇ ಬಸವೇಶ್ವರನು ಕಣ್ಣು ಮುಚ್ಚಿದವನಾಗಿ ಸರ್ವ ಜಗತ್ತು ಶಿವಮಯವೆಂಬ ತಿಳಿದು ಆದರ ಸುಖಾನುಭವದಲ್ಲಿ ಲೀನನಾದನು. ಆ ಸಮಯದಲ್ಲಿ ಸರ್ವ ಪ್ರಮಥಗಣರು ಅಲ್ಲಮಪ್ರಭುವಿನ ಕಡೆಗೂ ಬಸವೇಶ್ವರನ ಕಡೆಗೂ ನೋಡುತ್ತಿರಲು, ಅವರಲ್ಲಿ ಶಿವಭಕ್ತಿಯು ಅಧಿಕವಾಗಿ ಸ್ಫುರಿಸಿತು. ಎಲ್ಲರೂ "ಶಾಬಾಸ! ಉಘೆ ಉಘೆ" ಎಂದು ಬಸವೇಶ್ವರ ಅಲ್ಲಮಪ್ರಭು ಇವರೀರ್ವರ ಜಯಜಯಕಾರವನ್ನು ಮಾಡಿದರು. ಊರಲ್ಲಿ ಮಂಗಳವಾದ್ಯಗಳು ಧ್ವನಿಗೈದವು. ಅವುಗಳ ಪ್ರತಿಧ್ವನಿಯಿಂದ ಬಸವೇಶ್ವರನ ಸಭಾಮಂದಿರವು ತುಂಬಿಹೋಗಿತ್ತು.



## ೧೯ ನೆಯ ಅಧ್ಯಾಯ.

ಪ್ರಭುದೇವರು ಶ್ರೀಬಸವೇಶ್ವರ ಚನ್ನಬಸವೇಶ್ವರ ಮೊದಲಾದ ಶಿವಶರಣ ಸಮೂಹಕ್ಕೆ ಶಿವರಹಸ್ಯದ ತಾತ್ಪರ್ಯವನ್ನು ಬೋಧಿಸಿದನು.



ಬಳಿಕ ಜಗದ್ಗುರುವಾದ ಅಲ್ಲಮಪ್ರಭುವು ಶಿವಭಕ್ತ ಸಮೂಹವನ್ನು ನೋಡಿ ಅವರಿಗೆ ಶಿವರಹಸ್ಯದ ಜ್ಞಾನವಾಗಬೇಕೆಂದು ಬಯಸಿ— "ಎಲೈ ಶಿವಭಕ್ತರುಗಳಿರಾ, ಸರ್ವಶಾಸ್ತ್ರದ ಮುಖ್ಯ ತಾತ್ಪರ್ಯವನ್ನು ಹೇಳುತ್ತೇನೆ. ಚಿತ್ತವಿಟ್ಟು ಕೇಳಿಂ. ಮನಸ್ಸು ಚಂಚಲತ್ವವನ್ನು ಬಿಟ್ಟು ಸ್ಥಿರವಾದ ಹೊರತು ಮನುಷ್ಯನಿಗೆ ಶಿವೈಕ್ಯ ಪ್ರಾಪ್ತಿಯಾಗದು. ಮನುಷ್ಯನು ಅನೇಕ ಪ್ರಕಾರದ ವ್ಯವಹಾರಗಳನ್ನು ಮಾಡುವನಾದ್ದರಿಂದ, ಕನ್ನಡಿಯಲ್ಲಿ ತೋರುವ ಮುಖದ ಪ್ರತಿಬಿಂಬದಂತೆ ಅಭಿಮಾನವು ದೃಢವಾಗುತ್ತದೆ. ಮನವೇ ಮನುಷ್ಯನ ಬಂಧ-ಮೋಕ್ಷಕ್ಕೆ ಮೂಲ ಕಾರಣವಾದ್ದರಿಂದ, ವಿಷಯಗಳಲ್ಲಿ ಮನಸ್ಸು ನಿರಾಸಕ್ತವಾದರೆ ಮೋಕ್ಷಕ್ಕೆ ಹೇತುಭೂತವಾಗುವದು. ಆದುಕಾರಣ ಸರ್ವ ಪ್ರಯತ್ನದಿಂದ ಮೊದಲು ಮನಸ್ಸನ್ನು ಗೆಲ್ಲಬೇಕು. ಅದು ಜಯಿಸಲ್ಪಡದವಿನಾ ಶಿವತತ್ವ ಬೋಧವೆಂದಿಗೂ ಆಗದು. ಶಿವತತ್ವಾನುಭವದ ಹೊರತು ಮಾಯೆಯು ನಾಶವಾಗದು. ಅಜ್ಞಾನವು ಸಂಪೂರ್ಣವಾಗಿ ಅಡಗದಿದ್ದರೆ, ಶಿವನ ವಿಷಯವಾಗಿ ಅದ್ವಯಾತ್ಮಕ ಸುಖವು ಆಗುವದಿಲ್ಲ. ಮನೋನಾಶಕ್ಕೆ ಇಷ್ಟಲಿಂಗ ಪೂಜಾದಿ ಕ್ರಿಯೆಗಳು ಅವಶ್ಯವಾಗಿ ಬೇಕಾಗುತ್ತವೆ. ಇಷ್ಟಲಿಂಗ ಪೂಜೆಯಿಂದ ಶರೀರವೂ, ಪ್ರಾಣಲಿಂಗಾರಾಧನೆಯಿಂದ ಮನವೂ, ಪವಿತ್ರವಾಗುತ್ತವೆ. ನೀವು ಸುಸ್ವಭಾವದವರೂ ಶೀಲಸಂಪನ್ನರೂ ಇರುವದರಿಂದ ನಿಮಗೆ ಮೋಕ್ಷಪ್ರಾಪ್ತಿಯು ಸುಲಭವಾಗಿಯೇ ಆಗುವದು. ಇದಕ್ಕಿಂತ ನಿಮಗೆ ಹೆಚ್ಚಿಗೆ ಏನು ಹೇಳತಕ್ಕದ್ದಿದೆ. ಶಂಕರನ ಕೃಪೆಯಿಂದ ನಿಮ್ಮ ಎಲ್ಲ ಇಚ್ಛೆಗಳು ಪರಿಪೂರ್ಣವಾಗಲಿ" ಎಂದು ಅಲ್ಲಮನು ಅವರಿಗೆ ಆಶೀರ್ವದಿಸಿ, ನಾನು ನೀವಿದ್ದಲ್ಲಿಗೆ ಪುನಃ ಬರುವೆನೆಂದು ನುಡಿದು, ಹೊರಡಲಿಕ್ಕೆ ಸಿದ್ಧನಾದನು. ಬಸವೇಶ್ವರನು ಅದನ್ನು ಕಂಡು ಆತನ ಸಮೀಪಕ್ಕೆ ಬಂದು,

ಬಸವೇಶ್ವರ—( ಭಯಭಕ್ತಿಯಿಂದ ) ಅಲ್ಲಮಪ್ರಭುವೆ, ನೀನು ಕೃಪಾಸಮು ದ್ರನಿರುವಿ. ನಮ್ಮ ಮನಸ್ಸಿನ ಸಂದೇಹಗಳನ್ನು ದೂರ ಮಾಡಿ ಘೋರವಾದ ಸಂಸಾರಸಮುದ್ರದಿಂದ ನಮ್ಮನ್ನು ಆಚೆಗೆ ದಾಟಸುವದಕ್ಕಾಗಿ ನೀನು ಇಲ್ಲಿಗೆ ಗುರುರೂಪ ಧಾರಣ ಮಾಡಿ ಬಂದಿರುವಿಯಷ್ಟೆ. ನಾವೆಲ್ಲರು ನಿನಗೆ ಶರಣಾಗ ತರಾಗಿದ್ದೇವೆ. ನಮಗೆ ಮೋಕ್ಷಮಾರ್ಗವನ್ನು ತೋರಿಸು. ಇದರ ಹೊರತು ನಾವು ಬೇರೊಂದು ಪದಾರ್ಥವನ್ನು ನಿನ್ನಿಂದ ಬೇಡುವದಿಲ್ಲ. ಮನಷ್ಯನ ಸಂಪತ್ತು ಹೆಚ್ಚಾದ ಹಾಗೆ ಆತನಲ್ಲಿ ಮಾಯೆಯು, ಮಾಯೆಯಿಂದ ಅಜ್ಞಾನವು, ಅಜ್ಞಾ ನದಿಂದ ವಿಷಯಗಳಲ್ಲಿ ಆಶೆಯು ಹೆಚ್ಚಾಗುತ್ತದೆ. ಮನುಷ್ಯನು ತನಗೆ ಇಷ್ಟವಾದ ಕರ್ಮಗಳನ್ನು ಮಾಡಿ ಅವುಗಳಿಂದಾಗುವ ಸುಖದುಃಖಗಳನ್ನು ಭೋಗಿಸುತ್ತಾನೆ. ಕರ್ಮಗಳ ಫಲವು, ಅನುಭೋಗಿಸದ ಹೊರತು ತೀರುವದಿಲ್ಲ. ಆದ್ದರಿಂದ ನನಗೆ ಐಶ್ವರ್ಯ—ರಾಜ್ಯಾಧಿಕಾರ—ಸಂಪತ್ತು ಮೊದಲಾದವುಗಳು ಬೇಡ. ಜನನ ಮರಣ ಸಂಬಂಧವಾದ ದುಃಖವನ್ನು ನೀಗಿ ಚಿತ್ಸ್ವರೂಪವಾದ ಇಷ್ಟಲಿಂಗದ ನಿರ್ಮಲ ಧ್ಯಾನದ ಕಡೆಗೆ ನಮ್ಮನ್ನು ತೊಡಕಿಸಿ ನಮಗೆ ಮೋಕ್ಷಪ್ರಾಪ್ತಿಯ ನ್ನುಂಟು ಮಾಡಿಕೊಡು.

ಅಲ್ಲಮ—( ಕೃಪಾದೃಷ್ಟಿಯಿಂದ ಬಸವೇಶ್ವರ ಮೊದಲಾದವರನ್ನು ನೋಡಿ ) ಎಲೈ ಬಸವೇಶ್ವರನೆ, ಕಣ್ಣಿಗೆ ಕಾಣುವ ಈ ಮಿಥ್ಯಾ ಪ್ರಪಂಚವು ವೇದದಲ್ಲಿ ಹೇಳಿ ದಂತೆ ಮನಸ್ಸಿನ ಅನುಭವದಿಂದ ಸುಳ್ಳೆಂದು ತೋರಿದೊಡನೆಯೇ ಮಾಯೆಯು ನಾಶವಾಗುವದು. ಮಾಯಾ ನಾಶದಿಂದ ಮನಷ್ಯನು ಇಂದ್ರಿಯ ನಿಗ್ರಹಿಯಾ ಗುತ್ತಾನೆ. ಇಂದ್ರಿಯ ನಿಗ್ರಹದಿಂದ ಅವುಗಳ ಬಾಧೆಯು ದೂರವಾಗುವದು. ಇಂದ್ರಿಯಗಳ ಪೀಡೆಯು ನಷ್ಟವಾದ ಬಳಿಕ ವಿಷಯ ಸುಖಗಳ ಕಡೆಗೆ ತಿರುಗಿದ ದುರಾಶೆಯು ಇಲ್ಲದಂತಾಗುವದು. ವಿಷಯ ಸುಖೇಚ್ಛೆಯು ನಷ್ಟವಾದ ಕೂಡಲೆ ಕಾಮ—ಕ್ರೋಧಾದಿ ಷಡ್ರಿಪುಗಳನ್ನು ಜಯಿಸಲು ಜೀವನು ಸಮರ್ಥನಾಗುತ್ತಾನೆ. ಕಸಕಡ್ಡಿಯನ್ನು ತೂರಿ ಕಳೆದ ನಂತರ ಸ್ವಚ್ಛವಾದ ಅಕ್ಕಿಯು ಉಳಿಯುವಂತೆ, ದುಷ್ಟ ವಿಚಾರದಿಂದ ಉತ್ಪನ್ನವಾದ ಅನೇಕ ಕಲ್ಪನಾತರಂಗಗಳು ನಾಶ ಹೊಂದಿದ ಬಳಿಕ ಅತಿಶಯ ನಿರ್ಮಲವಾದ ಜ್ಞಾನವು ಉದಯಿಸುವದು. ಸಂಪೂರ್ಣವಾ ದ ಸ್ವರೂಪ ಜ್ಞಾನವಾಗಲು, ಅವನಲ್ಲಿ ವಿಷಯ ಸುಖದ ಸೋಂಕು ಉಳಿಯುವ ದಿಲ್ಲ. ಅಂಥವನು ಇದನ್ನು ಬಿಡು, ಅದನ್ನು ಮಾಡು ಎಂಬ ಭೇದಬುದ್ಧಿಯನ್ನು ಮಾಡನು. ಮನವು ಅನೇಕ ಪ್ರಕಾರದ ಕಲ್ಪನೆಗಳಿಗೆ ಆಶ್ರಯವಾಗಿವೆ. ಅದ ನ್ನು ಜಯಿಸಿದ ಮಾತ್ರಕ್ಕೆ ಈ ಪ್ರಪಂಚವು ಸುಳ್ಳೆಂದು ಭಾಸವಾಗುವದು. ಹೀಗೆ ಅನುಭವವಾದ ಕೂಡಲೆ ಅವನಿಗೆ ಅಮೃತ ಸಮುದ್ರದಲ್ಲಿ ಈಸಾಡಿದಷ್ಟು ಸುಖ

ವುಂಟಾಗುವದು. ಬಾಲ್ಯ-ತಾರುಣ್ಯ-ವಾರ್ಧಿಕ್ಯಗಳೆಂಬ ಮೂರು ಅವಸ್ಥೆಗಳೂ, ಸ್ಥೂಲ-ಸೂಕ್ಷ್ಮ-ಕಾರಣಗಳೆಂಬ ಮೂರು ಶರೀರಗಳೂ, ಸಾತ್ವಿಕ-ರಾಜಸ-ತಾಮಸಗಳೆಂಬ ಮೂರು ಗುಣಗಳೂ, ಜೀವಾತ್ಮ-ಅಂತರಾತ್ಮ-ಪರಮಾತ್ಮರೆಂಬ ಮೂರು ಆತ್ಮರೂ ಇರುತ್ತಾರೆ. ಆದರೆ ಪ್ರಾಣಿಮಾತ್ರಕ್ಕೆ ಈ ಅವಸ್ಥೆ-ಶರೀರ-ಗುಣ ಇವುಗಳ ಸಮಂಧವನ್ನುಂಟು ಮಾಡಿ, ಸ್ವರ್ಗ-ನರಕದ ಸುಖ-ದುಃಖಮಯವಾದ ಮಹಾ ಸಂಸಾರದಲ್ಲಿ ಜೀವರುಗಳನ್ನು ಹೊರಳಾಡಿಸುವದು ಮನಸ್ಸಲ್ಲದೆ ಮತ್ತೊಂದಿಲ್ಲ. ಮಂಗನಂತಿರುವ ಇಂತಹ ಮನಸ್ಸನ್ನು ಜಯಿಸಿದರೆ ಮೂರು ಲೋಕಗಳನ್ನು ಜಯಿಸಿದಂತಾಗುವದು. ಇಂಥ ವೀರನು ಸಾಕ್ಷಾತ್ಪರಮಾತ್ಮನೆಂದೇ ತಿಳಿಯಬೇಕು. ಮನಸ್ಸು ಬಾಹ್ಯ ಪ್ರಪಂಚ ವ್ಯವಹಾರದಲ್ಲಿ ಲೀನವಾಗಿದ್ದಾಗ ಈ ಸಂಸಾರವು ನಿಜವೆಂದು ತೋರುವದು. ಆಗ್ಗೆ ಮನುಷ್ಯನಿಗೆ ಮೋಕ್ಷದ ಕಲ್ಪನೆಯು ಸಹ ಬರುವದಿಲ್ಲ. ಸರ್ವ ಪ್ರಾಣಿಗಳಿಗೆ ದೇವತ್ವವನ್ನೂ ಮನುಷ್ಯತ್ವವನ್ನೂ ಅಥವಾ ಪಶುತ್ವವನ್ನೂ ಕೊಡತಕ್ಕಂಥಾದ್ದು ಮನಸ್ಸು. ಆದ್ದರಿಂದ ಬಸವೇಶ್ವರನೆ, ಮನಸ್ಸು ಬಾಹ್ಯ ವಿಷಯೋಪಭೋಗವನ್ನು ತ್ಯಾಗ ಮಾಡಿ ಜ್ಞಾನತತ್ವದಲ್ಲಿ ಲೀನವಾಗಿ ಅದರಲ್ಲಿ ಸ್ಥಿರವಾಗಲು, ಈ ದೃಶ್ಯ ಪ್ರಪಂಚವು ಮಿಥ್ಯೆಯೆಂದು ಅನುಭವಕ್ಕೆ ಬರುವದು. ನೋಟವು ಸ್ಥಿರವಾಗಲು ಮನಸ್ಸು ನಿಶ್ಚಲನೆಯನ್ನು ಪಡೆಯುವದು. ದೃಷ್ಟಿಯು ಚಲಿಸದೆ ಇರುವದಕ್ಕೆ ಇಷ್ಟಲಿಂಗಪೂಜೆಯು ಅತ್ಯಂತಾವಶ್ಯಕವಾಗಿದೆ. ಕಣ್ಣುಗಳು ಇಷ್ಟಲಿಂಗ ಭಜನೆಯಲ್ಲಿ ಲೀನವಾದ ಕೂಡಲೆ ಮನಸ್ಸು ಪ್ರಾಣಲಿಂಗಾರಾಧನೆಯಲ್ಲಿ ಎರಕವಾಗುವದು. ಆದ್ದರಿಂದ ಮನೋನಾಶಕ್ಕೆ ಇಷ್ಟಲಿಂಗಪೂಜೆಯು ಹೆಚ್ಚು ಅನುಕೂಲವೆಂದು ತಿಳಿಯಬೇಕು. ಹೀಗೆ ಮನಸ್ಸನ್ನು ಅಂತರ್ಮುಖವಾಗಿ ಮಾಡಿದವನೇ-ಅದನ್ನು ನಾಶಗೊಳಿಸಿದವನೇ-ಮಹಾಜ್ಞಾನಿಯೆನಿಸಿ ನಿಜಾನಂದ ಸುಖದಲ್ಲಿ ವಿಹರಿಸುವನು. ಅವನೇ ಗುರುವಿನ ಗುರುವೆಂದು ತಿಳಿ. ಜ್ಞಾನಿಗಳೆಂದು ಕಪಟವೇಷವನ್ನು ತಾಳಿ ಗುರೂಪದೇಶವನ್ನುಲ್ಲಂಘಿಸಿ, ಜನರಿಗೆ ದುರ್ಬೋಧೆಯನ್ನು ಮಾಡುತ್ತ ನಿಜಾಡಂಬರದಲ್ಲಿ ಸದಾ ವ್ಯವಹರಿಸಿ ತಮ್ಮಂತೆ ಜನರಿಗೆ ಯಥೇಷ್ಟಾಚಾರವನ್ನು ಕಲಿಸಿ, ಅವರನ್ನು ದುರ್ಮಾರ್ಗದಲ್ಲಿ ಕಾಲಿಡುವಂತೆ ಮಾಡುವವರೆಲ್ಲ ಜ್ಞಾನಿಗಳಲ್ಲ. ಅವರು ಆತ್ಮವಂಚಕರೂ ಶಿವದ್ರೋಹಿಗಳೂ ಆಗಿ ಮರಣಾಂತರ ಯಮಪುರನಿವಾಸಿಗಳಾಗುವರು. ಇವರ ವಿಷಯವಾಗಿ ಸರ್ವರು ಸರ್ವರು ಜಾಗ್ರತರಾಗಿರುವದು ಒಳ್ಳೇದು.

ಬಸವೇಶ್ವರನೆ, ಮೇಲೆ ಹೇಳಿದಂತೆ ಈ ದೃಶ್ಯಪ್ರಪಂಚವು ಸುಳ್ಳೆಂದು ಮನದಲ್ಲಿ ತಂದು ಅದರಂತೆ ಅನುಭವದಿಂದ ನಿಶ್ಚಯಿಸಿದಾಗ್ಗೂ ಕೂಡ ಮನಸ್ಸನ್ನು ಗೆದ್ದು ಜ್ಞಾನಮಾರ್ಗದಲ್ಲಿ ಅದನ್ನು ಸಿಲುಕಿಸಲು ಅಸಮರ್ಥನಾಗಿ ತನ್ನ ಮನಸ್ಸಿನ

ತಂತ್ರದಂತೆ ನಡೆದರೆ ಅವನೇ ನರಪಶುವೆಂದು ತಿಳಿ. ಮನುಷ್ಯನು ಮಾಯದ ಬಲಿಯಲ್ಲಿ ಬಿದ್ದರೆ ಅವನಿಗೆ ಆಶೆಯುಂಟಾಗುವದು ಒಂದುಸಾರೆ ಮನಸ್ಸು ಆಶೆಯಲ್ಲಿ ತೊಡಕಿತೆಂದರೆ, ಆ ಮನುಷ್ಯನು ಅನೇಕ ಪ್ರಕಾರದ ದುಃಖಗಳನ್ನು ಭೋಗಿಸಬೇಕಾಗುತ್ತದೆ. ಇದೇ ಸಂಸಾರವೆಂದು ತಿಳಿ. ಇದರಲ್ಲಿ ಬಿದ್ದ ಮನುಷ್ಯನಿಗೆ ಮೇಲಿಂದ ಮೇಲೆ ಸಂಕಟಗಳು ಪ್ರಾಪ್ತವಾಗುವವು. ಆದರೆ ಆಶೆಯನ್ನು ಗೆದ್ದವನು ಸಂಸಾರದ ದೋಷವನ್ನು ದೂರ ಮಾಡಲು ಸಮರ್ಥನಾಗುತ್ತಾನೆ. ಅವನೇ ಜನನ ಮರಣವೆಂಬ ಚಕ್ರದಿಂದ ದೂರಾದನೆಂದು ತಿಳಿ. ಈ ವಸ್ತು ನನ್ನದು ಅದು ನನ್ನದಲ್ಲ, ಇವರು ಮಿತ್ರರು ಅವರು ಶತ್ರುಗಳು, ಇವರು ನನ್ನವರು ಈ ಸ್ಥಾನವು ನನ್ನದು, ಎಂಬದಾಗಿ ಅನೇಕ ಪ್ರಕಾರದ ವಿಕಲ್ಪಗಳಿಗೆ ಅಜ್ಞಾನಮೂಲಕ ಆಶ್ರಯ ಕೊಡುವ ತನಕ ಅವನಲ್ಲಿ ದುಃಖ-ಅಜ್ಞಾನ ಮುಂತಾದ ಮಾನಸಿಕ ಪೀಡೆಗಳು ನಷ್ಟವಾಗುವದಿಲ್ಲ. ಆದರೆ ಇಂತಹ ಸಂಕಲ್ಪಗಳನ್ನು ಅಳಿದ ಮನುಷ್ಯನು ಮಾತ್ರ ಪ್ರತ್ಯಕ್ಷ ಪಶುಪತಿಯೆನಿಸುವನು. ಮನಸ್ಸು ಒಂದು ಕ್ಷಣವಾದರು ಒಂದೇ ಕಡಿಗೆ ನಿಲ್ಲುವದಿಲ್ಲ; ಅದು ಯಾವಾಗಲು ಅನೇಕ ಪ್ರಕಾರದ ವಿಚಾರ ತರಂಗಗಳಲ್ಲಿ ತೊಡಗಿರುತ್ತದೆ; ಆ ವಿಚಾರಗಳನ್ನು ಎಣಿಸಲು ಯಾರಿಂದಲೂ ಆಗದು. ಮನಸ್ಸಿನ ಸ್ವಭಾವವೇ ಈ ತರದ್ದು ಇರೋಣದರಿಂದ, ಸಂಸಾರದಲ್ಲಿ ಜರಗುವ ಸರ್ವ ಕೃತ್ಯಗಳು ಅದರಿಂದುಂಟಾಗಿ ಮನುಷ್ಯನು ಅವುಗಳಿಂದಾಗುವ ಸುಖ-ದುಃಖಗಳನ್ನು ಭೋಗಿಸ ಹತ್ತುವನು. ಆದ್ದರಿಂದ ಬಸವೇಶ್ವರನೆ, ಮನದ ಅನೇಕ ಪ್ರಕಾರದ ವಾಸನೆಗಳ ದೆಸೆಯಿಂದ ಅಂತರದಲ್ಲಿ ಭ್ರಾಂತಿಯು ಹೆಚ್ಚುವದು. ಆದರೆ ಬುದ್ಧಿವಂತನಾದವನು ಈ ಚಂಚಲ ಮನಸ್ಸನ್ನು ಲಿಂಗಪೂಜಾದಿ ಸತ್ಕ್ರಿಯೆಗಳಿಂದ ತನ್ನ ಸ್ವಾಧೀನದಲ್ಲಿಟ್ಟುಕೊಂಡು ನಡೆದರೆ ಅವನು ನಿಜವಾಗಿ ಕೃತಾರ್ಥನಾಗುವನು.

ಬಸವೇಶ್ವರ—ಗುರುವೆ. ಮನಸ್ಸನ್ನು ಗೆಲ್ಲಬೇಕೆಂದು ತಮ್ಮ ಅಪ್ಪಣೆಯಾಯಿತು, ಆದರೆ ಮನಸ್ಸು ಮನಸ್ಸನ್ನೇ ಹೇಗೆ ಗೆಲ್ಲಲು ಸಮರ್ಥವಾಗುವದು? ಅಥವಾ ಅದನ್ನು ಬಿಟ್ಟು ಬೇರೆ ಯಾವದಾದರು ಮನಸ್ಸನ್ನು ಗೆಲ್ಲಲಿಕ್ಕೆ ಸಮರ್ಥವಿದ್ದರೆ, ಆ ಬೇರೆ ವಸ್ತು ಯಾವದು? ಅದು ಜೀವನೋ ಅಂತರಾತ್ಮನೋ ಅಥವಾ ಪರಮಾತ್ಮನೋ ಇದನ್ನು ನನಗೆ ತಿಳಿಸಿ ಹೇಳಬೇಕು.

ಅಲ್ಲಮಪ್ರಭು— ಬಸವೇಶ್ವರನೆ, ಜೀವಾತ್ಮ-ಅಂತರಾತ್ಮ-ಪರಮಾತ್ಮ ಈ ಮೂರೂ ಏಕಸ್ವರೂಪವೇ ಅಂದರೆ ಅವು ಶಂಕರನೇ ಆಗಿರುತ್ತವೆ. ಮನ-ಬುದ್ಧಿ-ಚಿತ್ತ ಈ ಮೂವರ ಅನುಕರಣ ಮಾಡತಕ್ಕಂಥವನು ಆತ್ಮನು. ಆ ಮನ-ಬುದ್ಧಿ-

ಚಿತ್ತ ಇವುಗಳ ಗುಣಧರ್ಮಗಳು ತನ್ನವೆಂದು ತಿಳಿಯುವವನು ಜೀವನು. ನೀಚತ್ವ ದಿಂದ ಅಂತರಾತ್ಮನು ಜೀವತ್ವವನ್ನು ಹೊಂದುವನು. ಅಂತರಾತ್ಮನು ಶುದ್ಧನಾಗಿ ಮನಸ್ಸನ್ನು ನಿಶ್ಚಲವಾಗಿ ಮಾಡಲು ಸಮರ್ಥನಾದರೆ ಮಾತ್ರ ಪರಮಾತ್ಮನಲ್ಲಿ ಐಕ್ಯತೆಯನ್ನು ಹೊಂದಿ ಪರಿಪೂರ್ಣಭಾವವನ್ನು ಪಡೆಯುವನು. ಮತ್ತು ಸ್ವತಃ ಶಿವಾನಂದ ಸ್ವರೂಪನಾಗಿ ಶೋಭಿಸಹತ್ತುವನು. ಮನಸ್ಸು ವಶವಾಗುವ ತನಕ ಅದರ ಯತ್ನವನ್ನು ಬಿಡದೆ ಮಾಡುತ್ತಿರಬೇಕು, ಬಸವೇಶ್ವರನೆ, ಮನಸ್ಸನ್ನು ನಿಶ್ಚ ಲವಾಗಿ ಮಾಡಿ ಬಿಡುವೆನೆಂಬದಾಗಿ ಮನದಲ್ಲಿ ದೃಢನಿಶ್ಚಯ ಮಾಡಿ ಅದರ ಬಗ್ಗೆ ಯತ್ನನಡಿಸಿದರೆ ಅದು ಖಂಡಿತವಾಗಿ ಚಂಚಲತ್ವವನ್ನು ಬಿಡುವದು. ಅಜ್ಞಾನವ ಶದಿಂದ ಅನೇಕ ಸಂಶಯಗಳೂ ಕಲ್ಪನೆಗಳೂ ಸೇರಿ ಸಾಧಕನಿಗೆ ಅತಿ ದುಃಖ ವನ್ನು ಕೊಡುತ್ತವೆ. ಆದ್ದರಿಂದ ಧೈರ್ಯಸ್ಥೈರ್ಯಾದಿ ಗುಣಗಳಿಂದ ಮನಸ್ಸಿನ ಸಂಕಲ್ಪಗಳನ್ನು ನೀಗಿ, ತನ್ನ ಸ್ವರೂಪವಾದ ಇಷ್ಟಲಿಂಗ ಪೂಜೆಯಿಂದ ಅದನ್ನು ನಿಶ್ಚಲಗೊಳಿಸಿ ಸಂತೋಷದಿಂದ ಅಜ್ಞಾನವನ್ನು ಹೋಗಲಾಡಿಸುವದೇ ಮನಸ್ಸನ್ನು ಗೆಲ್ಲುವ ಕ್ರಮವೆಂದು ತಿಳಿಯಬೇಕು. ಅದನ್ನು ಕಟ್ಟ ನಿಶ್ಚಲವಾಗಿ ಮಾಡಿದವನು ನಿಜವಾದ ಶೂರನು. ಅವನ ಸರ್ವ ಪೀಡೆಗಳು ತೊಲಗಿ ಅವನು ಸಾಧುತ್ವ ವನ್ನು ಹೊಂದುವನು. ಅತನನ್ನು ವರ್ಣಿಸಲಾಗುವದಿಲ್ಲ.

ಚನ್ನಬಸವೇಶ್ವರ—ಗುರುವರ್ಯನೆ, ಮನಸ್ಸಿನ ಚಂಚಲತ್ವವನ್ನು ಹೋಗಲಾ ಡಿಸಬೇಕಾದರೆ, ಅದನ್ನು ಬೇರೊಂದು ಲಕ್ಷ್ಯದ (ಧ್ಯೇಯ ವಸ್ತುವಿನ) ಕಡೆಗೆ ಹಚ್ಚಿ ಧ್ಯಾನಮಾಡಬೇಕಾಗುವದಲ್ಲವೆ? ಹೀಗಿದ್ದರೆ ಅದರ ಕ್ರಮವನ್ನು ನಮಗೆ ಹೇಳಿ ನಮ್ಮನ್ನು ಕೃತಾರ್ಥರಾಗಿ ಮಾಡಬೇಕು.

ಅಲ್ಲಮಪ್ರಭುವು—( ಚನ್ನಬಸವೇಶ್ವರನನ್ನು ಕೃಪಾದೃಷ್ಟಿಯಿಂದ ನೋಡಿ ) ಬಾಲಾ ಚನ್ನಬಸವಾ, ಶಿವಸಂಬಂಧ ಯೋಗಶಾಸ್ತ್ರದಲ್ಲಿಯೂ ಆಗಮಗಳಲ್ಲಿಯೂ ಧ್ಯಾನದ ಅನೇಕ ಪ್ರಕಾರಗಳು ಹೇಳಲ್ಪಟ್ಟಿವೆ. ಯಾವದು ಒಳಗೂ ಹೊರಗೂ ಪರಿಪೂರ್ಣವಾಗಿ ತುಂಬಿರುವದೋ ಆ ಕ್ರಿಯೆಗೆ ಮಾತ್ರ ಧ್ಯಾನವೆಂದು ಶಾಸ್ತ್ರ ಗಳು ಹೇಳುತ್ತವೆ. ಬಾಯಿಂದ ತಾನು ಧ್ಯಾನಮಾಡುತ್ತೇನೆಂದಾಕ್ಷಣಕ್ಕೆ ಅದು ಧ್ಯಾನ ವಾಗಲರಿಯದು. ಧ್ಯೇಯ ವಸ್ತುವನ್ನು ಬಿಟ್ಟು ಹಾಗೇ ಧ್ಯಾನ ಮಾಡುವದು ಗೌಣಪಕ್ಷವು. ಅಜ್ಞಾನವನ್ನು ಹೋಗಲಾಡಿಸಿ ಆತ್ಮಸ್ವರೂಪದ ಯಥಾರ್ಥ ಜ್ಞಾನ ದಿಂದುಂಟಾದ ಸಚ್ಚಿದಾನಂದ ಸುಖಾನುಭವವನ್ನು ನಿರಂತರ ಹೊಂದುತ್ತಿರುವ ಸ್ಥಿತಿಗೆ ಮಾತ್ರ ಧ್ಯಾನವೆಂದು ಕರಿಯಬೇಕು. ಇದು ಇಷ್ಟ—ಪ್ರಾಣ—ಭಾವಲಿಂಗಗಳ ಆರಾಧನೆಯಿಂದ ಅತಿ ಸುಗಮವಾಗಿ ಪ್ರಾಪ್ತವಾಗುವದು.

ಮಡಿವಾಳ ಮಾಚಯ್ಯ—ಗುರುವೆ, ಶ್ರುತಿಗೂ ಮತಿಗೂ ಯಾವದು ನಿಲುಕುವದಿಲ್ಲ, ಯಾವದರ ಕಲ್ಪನೆಯನ್ನು ಕೂಡ ಮಾಡಲಿಕ್ಕೆ ಬರುವದಿಲ್ಲ. ಯಾವದಕ್ಕೆ ಶರೀರವಿಲ್ಲ. ಮತ್ತು ಯಾವದು ದೃಷ್ಟಿಪಥಕ್ಕೆ ಗೋಚರವಾಗುವದಿಲ್ಲ. ಅಂತಹ ಶೂನ್ಯತತ್ವವನ್ನು ಭಕ್ತಿಮಾರ್ಗದಿಂದ ಅರಿತುಕೊಂಡು ನಿತ್ಯಪದವಿಯನ್ನು ಪ್ರಾಪ್ತಮಾಡಿಕೊಳ್ಳುವದು ಹೇಗೆ? ಎಂಬದನ್ನು ನಮಗೆ ಚನ್ನಾಗಿ ಭೋಧಿಸಬೇಕು.

ಅಲ್ಲಮಪ್ರಭುವು— ಎಲೈ ಮಾಚಾರ್ಯನೆ, ಈ ಶೂನ್ಯತತ್ವವು ಸತ್ಯ ಸ್ವರೂಪವಾದದ್ದೂ ಜ್ಞಾನಸ್ವರೂಪವಾದದ್ದೂ ಸುಖಸ್ವರೂಪವಾದದ್ದೂ ಮತ್ತು ಬ್ರಹ್ಮಸ್ವರೂಪವಾದದ್ದೂ ಇದ್ದು, ಪರಿಪೂರ್ಣವಾಗಿಯೂ ಶ್ರೇಷ್ಠವಾಗಿಯೂ ಅದೆ. ಆದರೆ ಚರ್ಮಚಕ್ಷುವಿನಿಂದ ನೋಡುವವನಿಗೆ ಅದು ಗೋಚರವಾಗದು. ಜ್ಞಾನದೃಷ್ಟಿಯಿಂದ ಅದನ್ನು ನೋಡಬೇಕು. ಅಜ್ಞಾನ ದೇಹಾಭಿಮಾನ ಮೊದಲಾದವುಗಳು ನಮ್ಮಲ್ಲಿರುವತನಕ ಆ ತತ್ವದ ಹೆಸರು ಸಹ ನಾವು ನೆನೆಯಲಾಗುವದಿಲ್ಲ. ಅದನ್ನು ಯಥಾರ್ಥವಾಗಿ ಒಮ್ಮೆ ತಿಳಿದುಕೊಂಡರೆ ನಮಗೆ ತೋರುವ ಜಗತ್ತ ಕ್ಷಣಭಂಗುರವೆಂಬದಾಗಿ ತೋರುವದು. ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳು ಸ್ಥೂಲ—ಸೂಕ್ಷ್ಮ— ಕಾರಣವೆಂಬ ಮೂರು ಶರೀರಗಳನ್ನು ನಿರಂತರ ತುಂಬಿಕೊಂಡು, ಜೀವವನ್ನು ಮೇಲಿಂದ ಮೇಲೆ ಭ್ರಾಂತಿಯಲ್ಲಿ ಕೆಡವಿ, ಆತ್ಮಜ್ಞಾನವಾಗದಂತೆ ಮಾಡುತ್ತವೆ. ಅನಂತರ ದುಷ್ಟಪ್ರಕಾರದ ಸಂಕಲ್ಪವಿಕಲ್ಪಗಳ ಬಲೆಯಲ್ಲಿ ಸಿಲುಕಿ ಜೀವನು ಸಂಸಾರರೂಪ ನಿದ್ರೆಯನ್ನು ಅನುಭವಿಸುವನು. ಆದ್ದರಿಂದ, ಇಂದ್ರಿಯ ನಿಗ್ರಹಿಯಾದ ಮನುಷ್ಯನು ಮೊದಲು ಈ ಮೂರು ಅವಸ್ಥೆಗಳನ್ನು ಗೆಲಬೇಕು. ತುರ್ಯಾವಸ್ಥೆ ಎಂಬ ನಾಲ್ಕನೆಯ ಅವಸ್ಥೆಯ ಸಹಾಯದಿಂದ ಮನುಷ್ಯನಲ್ಲ ಅಜ್ಞಾನವನ್ನುಂಟು ಮಾಡಲಿಕ್ಕೆ ಹೇತುಭೂತಗಳಾದ ಈ ಮೂರಾವಸ್ಥೆಗಳನ್ನು ನಾಶಗೊಳಸಿ, ನಾನೇ ಶಿವನೆಂಬ ನಿಶ್ಚಯಾತ್ಮಕ ಜ್ಞಾನವಾಗಿ, ಅದರಿಂದ ತಾನು ಪರಿಪೂರ್ಣನೆನಸಿ ಪರಮಾತ್ಮ ಸುಖಾನುಭವದಿಂದ ಶ್ರೇಷ್ಠತತ್ವವನ್ನು ಮುಟ್ಟುವನು. ಎಲೈ ವಿದ್ವಾಂಸನಾದ ಮಡಿವಾಳ ಮಾಚಯ್ಯನೆ, ಶಿವಸುಖವನ್ನಿಚ್ಛಿಸುವ ಮನುಷ್ಯನು ಸ್ಥೂಲ—ಸೂಕ್ಷ್ಮ—ಕಾರಣಗಳೆಂಬ ಮೂರು ದೇಹಗಳು ಶುದ್ಧ ಅಜ್ಞಾನದ ಬೀಡುಗಳೆಂದು ಅವುಗಳನ್ನು ಕಳೆದು ಕೇವಲ ಚಿತ್ಸ್ವರೂಪನಾಗಿ ತಿಳಿಯಲ ಸಾಧ್ಯವಾದ ವೇದಾಂತ ತತ್ವವನ್ನು ಅರಿತುಕೊಂಡು ಮೋಕ್ಷಪದಕ್ಕೆ ಮುಟ್ಟುವನು. ಅವನೇ ನಾನೆಂಬು ತಿಳಿ ಯಾಕಂದರೆ ಅವನು ನನ್ನಂತೆಯೇ ಆಗಿರುವನು.

ಹೀಗೆ ಅಲ್ಲಮಪ್ರಭುವಿನ ಉಪದೇಶವನ್ನು ಕೇಳಿ ಮಡಿವಾಳ ಮಾಚಯ್ಯನವರು ತಮ್ಮ ಸಂಸಾರವಾಸನೆಗಳನ್ನಳಿದು ಶಾಂತಿಯುಳ್ಳವರಾಗಿ ಪರಮಾರ್ಥ ತತ

ದಲ್ಲಿ ಮಗ್ನರಾದರು. ಚಂದ್ರನ ಕಿರಣಗಳಿಂದ ಚಂದ್ರಕಾಂತ ಶಿಲೆಯು ದ್ರವಿಸುವಂತೆ, ಅಲ್ಲಮನ ಉಪದೇಶದಿಂದ ಮಡಿವಾಳ ಮಾಚಿದೇವರ ಮನಸ್ಸು ಆತ್ಮಜ್ಞಾನಾನಂದ ದಲ್ಲಿ ಪರಿಪೂರ್ಣವಾದದ್ದನ್ನು ನೋಡಿ, ಉಳಿದ ಭಕ್ತರು ಕೂಡ ತಮ್ಮ ತಮ್ಮ ಮನಸ್ಸಿನೊಳಗಿನ ಸಂಶಯುಗಳನ್ನು ಕಳೆದುಕೊಳ್ಳಬೇಕೆಂದು ಗುರುರಾಜನಾದ ಅಲ್ಲ ಮಪ್ರಭುವನ್ನು ಕುರಿತು ಬಸವೇಶ್ವರ ಮೊದಲಾದ ಸರ್ವರು—“ಗುರುವರ್ಯನೆ, ಶರೀರ ಮನಸ್ಸು ಇಂದ್ರಿಯ ಮುಂತಾದವುಗಳು ಇಲ್ಲವಾದರೆ ಮತ್ತು ಆತ್ಮನು ಕೊಡದಂತೆ ಕಂಣಿಗೆ ಕಾಣದಿದ್ದರೆ, ಅವುಗಳಿಂದ ಆತ್ಮನನ್ನು ಬೇರೆ ಮಾಡುವ ಪ್ರಯತ್ನವೂ ವಿದೇಹಮುಕ್ತಿ ಮತ್ತು ಜೀವನ್ಮುಕ್ತಿ ಇವುಗಳ ಕಥಾಪ್ರಸಂಗವೂ ವ್ಯರ್ಥವದು. ನಮಗೆ ತೋರುವ ಇಂದ್ರಿಯ ಮುಂತಾದವುಗಳು ಸುಳ್ಳೆಂದರೆ—ಇಲ್ಲ ವೆಂದು ಪ್ರತಿಪಾದಿಸಿದರೆ—ನಿಸ್ಸಂಗನಾದ ಪರಮೇಶ್ವರನು (ಆತ್ಮನು) ಅವುಗಳಿಂದ ಬದ್ಧನಾಗುವದು ಹೇಗೆ? ಬಂಧವೇ ಇಲ್ಲದಾದ ಪಕ್ಷದಲ್ಲಿ ಮುಕ್ತನಾಗಬೇಕೆಂಬ ಇಚ್ಛೆಯಾದರೂ ಹೇಗೆ ಉದ್ಭವಿಸುವದು?”

ಅಲ್ಲಮಪ್ರಭುವು—ಎನಿರೈ ಭಕ್ತರುಗಳಿರಾ, ನಾನು ಹೇಳುವದನ್ನು ಸಾವ ಧಾನ ಮನಸ್ಸಿನಿಂದ ಕೇಳಬೇಕು. ಮಾಯೆಯು ಕೇವಲ ವಿಚಾರ ಮಾತ್ರದಿಂದ ತಿಳಿಯಲ್ಪಡತಕ್ಕದ್ದಲ್ಲ. ಅದು ಸರ್ವ ಪ್ರಾಣಿಗಳಿಗನ್ನು ದುಸ್ಥಿತಿಗೆ ಎಳೆದೊಯ್ಯು ವದು. ಸದಸತ್ತಿಗಿಂತಲೂ ವಿಲಕ್ಷಣವಾಗಿ ಅದು ಸರ್ವದಾ ಕೆಟ್ಟ ಕೆಟ್ಟ ವಿಚಾರ ಗಳನ್ನೂ ಕಲ್ಪನೆಗಳನ್ನೂ ಸೂಚಿಸಿ ಕೊಟ್ಟು, ಆತ್ಮನು ಸ್ವತಃ ನಿಸ್ಸಂಗನಿದ್ದರೂ ಅವನನ್ನು ತನ್ನ ವಶಮಾಡಿಕೊಳ್ಳುವದು. ಸ್ವಪ್ನದಲ್ಲಿ ಕಂಡ ವಸ್ತುಗಳು ವಾಸ್ತವಿ ಕವಾಗಿ ಮಿಥ್ಯೆಯಿರುವಂತೆ, ಮಾಯಾ ಸಂಬಂಧದಿಂದ ತೋರುವ ಜಗತ್ತು ಕಂಣಿಗೆ ಕಂಡರೂ ಅದು ಸತ್ಯವಲ್ಲ. ಕಪ್ಪೆ ಚಿಪ್ಪು ಇರುತ್ತದೆಂದು ಚನ್ನಾಗಿ ತಿಳುವಳಿಕೆಯಾಗುವ ವರೆಗೂ ಬೆಳ್ಳಿ ಎಂದು ಸಂಶಯವುಂಟಾಗುವಂತೆ, ಆತ್ಮಜ್ಞಾ ನವಾಗುವ ಪರ್ಯಂತರ ಮಾಯೆಯ ಪಸಾರವು ಮಿಥ್ಯವಿದ್ದರೂ ನಿಜವೆಂಬದಾಗಿ ಭಾಸವಾಗುವದು. ಆದ್ದರಿಂದ ಭಕ್ತರೆ, ಅನಾದಿಕಾಲದಿಂದ ಬಂದ ಮಾಯೆಯ ಭ್ರಮೆಯನ್ನು ಸಮಗ್ರವಾಗಿ ನಾಶಮಾಡಲಿಕ್ಕೆ ನೀವು ಮನಃಪೂರ್ವಕವಾಗಿ ಶಿವ ಭಕ್ತಿಯನ್ನಾಚರಿಸಬೇಕು. ಏನಾಶ್ಚರ್ಯವಿದು! ಚಂದನವೃಕ್ಷದ ಮೇಲೆ ಬೀಸುವ ಮಂದ ಮತ್ತು ಶೀತಲವಾದ ಗಾಳಿಯು ವಸಂತ ಋತುವನ್ನಾಶ್ರಯಿಸುವಂತೆ, ಈ ಪ್ರಮಥರೆಲ್ಲರು ಮಂತ್ರಿಶ್ರೇಷ್ಠನಾದ ಬಸವೇಶ್ವರನನ್ನಾಶ್ರಯಿಸಿ ಸುಜ್ಞಾನಸಂಪನ್ನ ರಾಗಿ ತಾವು ಸ್ವತಃ ಇಷ್ಟಲಿಂಗದಲ್ಲಿ ಐಕ್ಯತೆಯನ್ನು ಪಡೆಯಬೇಕೆಂದು ಇಚ್ಛಿಸು ವರು. ಬೇರೊಂದು ಪದವಿಯನ್ನು ಇವರು ಅಪೇಕ್ಷಿಸರು. ನಾನು ಬ್ರಹ್ಮನಿ ದ್ದೇನೆ, ನಾನು ಶಿವನಿದ್ದೇನೆ ಎಂಬದಾಗಿ ಬಾಯಿಂದ ಶಬ್ದಗಳನ್ನು ಬಡಬಡಿಸುವ

ಬಾಹುಬ್ರಹ್ಮಿಗಳನ್ನು ಮಾಯೆಯು ಎಂದೂ ಬಿಡುವದಿಲ್ಲ. ಸಾಧಾರಣವಾಗಿ ಉಳಿದ ಸಂಸಾರಿಗಳಿಗಿಂತ ಅವರು ಅತ್ಯಂತ ನೀಚರುತ್ತಾರೆ. ಅವರನ್ನಾಶ್ರಯಿಸಿ ದವರಿಗೆ ದುರ್ಗತಿಯಲ್ಲದೆ ಬೇರೊಂದಿಲ್ಲ ಯಾಕೆಂದರೆ, ಅದ್ವೈತಸಿದ್ಧಿಯು ಶಿವಾ ನುಗ್ರಹವಿಲ್ಲದೆ ಆಗದು. ಶಿವಭಕ್ತಿಯನ್ನಾಚರಿಸದೆ ಶಿವಕೃಪೆಯು ದೊರಕದು. ಮನಸ್ಸು ನಿಶ್ಚಲವಾಗದೆ ಶಿವಕೃಪೆಯುಂಟಾಗದು. ಕಾರಣ ಸರ್ವ ಪ್ರಯತ್ನದಿಂದ ರಾಗ-ದ್ವೇಷಾದಿಗಳನ್ನು ಗೆದ್ದು ಭಕ್ತಿಯನ್ನು ದೃಢೀಕರಿಸಬೇಕು. ಭಕ್ತಿಯ ನಿಶ್ಚ ಲತೆಗಾಗಿ ಮನಸ್ಸಿನ ಸರ್ವಸಂಕಲ್ಪ ವಿಕಲ್ಪಗಳನ್ನು ನೀಗಬೇಕು. ನಾಮ-ರೂಪ-ಕ್ರಿಯಾತ್ಮಕವಾದ ಸಂಸಾರವನ್ನು ಅಳಿಯಬೇಕು. ಕಡೆಗೆ ದುರ್ಗತಿಗೀಡು ಮಾಡುವ ಅಭಿಮಾನವನ್ನು ತ್ಯಜಿಸಬೇಕು. ಇದರಂತೆ ಶರೀರ ಪ್ರಾಣ ಮನ ಇವುಗಳಿಂದಾಗುವ ಅನೇಕ ಪ್ರಕಾರದ ವಿಕಾರಗಳನ್ನು ಬಿಟ್ಟ ಬಳಿಕ, ವಿದ್ವಾಂ ಸನು ಮೋಹರೂಪ ಸಂಸಾರ ಸಾಗರವನ್ನು ದಾಟಲು ಶಕ್ತನಾಗುವನು.

ಒಳ್ಳೇದು, ಈ ಮಾತು ಒತ್ತಟ್ಟಿಗಿರಲಿ. ಬಸವೇಶ್ವರನೆ, ಲೋಕದ ಜನರ ಹಿತಕ್ಕಾಗಿ ನೀನು ಪ್ರಶ್ನರೂಪದಿಂದ ವೇದ ಮತ್ತು ಸಿದ್ಧಾಂತ ಶಾಸ್ತ್ರ ಇವುಗಳ ರಹಸ್ಯವನ್ನು ಪ್ರಕಟಗೊಳಿಸಿದಿ. ನೀನು ಸರ್ವಜ್ಞನೂ ಮೂರೂ ಲೋಕದ ಗುರು ವೂ ಆಗಿರುವಿ. ಲಿಂಗಾಂಗಸಾಮರಸ್ಯ ಜ್ಞಾನದ ದೆಸೆಯಿಂದ ಮತ್ತು ಅದರಲ್ಲಿದ್ದ ನಿನ್ನ ದೃಢತರವಾದ ವಿಶ್ವಾಸದ ದೆಸೆಯಿಂದ ನೀನು ಸರ್ವ ಜಗತ್ತಿಗೆ ಕಲ್ಯಾಣಕಾರ ಕನಾಗಿರುವಿ. ನಿನ್ನನ್ನು ಸರಿಗಟ್ಟುವವರು ಮೂರು ಲೋಕಗಳಲ್ಲಿ ಯಾರೂ ಇಲ್ಲ. ನಿನ್ನ ಶಿವಭಕ್ತಿಯು ಅಸಾಧಾರಣವಾದದ್ದೂ ಅವರ್ಣನೀಯವಾದದ್ದೂ ಅದೆ. ನೀನು ಚಿತ್ಸ್ವರೂಪನಿರುವ ಕಾರಣ ನಿನ್ನಲ್ಲಿ ಸರ್ವವೂ ಅವೆ. ನೀನು ಮಹಾತ್ಮನೂ ಗುಣವಂತನೂ ಆಗಿರುವಿ.

ಹೀಗೆ ಅಲ್ಲಮಪ್ರಭುವು ನುಡಿದದ್ದನ್ನು ಕೇಳಿ ಬಸವೇಶ್ವರನು ಆತನ ಪಾದಕ ಮಲಗಳ ಮೇಲೆ ಬಿದ್ದು ನಮಸ್ಕಾರ ಮಾಡಿ ಭಕ್ತಿಪೂರ್ವಕವಾಗಿ ಕೈಜೋಡಿಸಿ ನಮ್ರಭಾವದಿಂದ—ಗುರುಮಹಾರಾಜನೆ, ನಾನು ನಿಜವಾಗಿ ಅಜ್ಞಾನಿಯಿರುವೆನು. ನನ್ನಲ್ಲಿ ಇಲ್ಲದ ಗುಣಗಳನ್ನು ಕಲ್ಪಿಸಿ ನನ್ನನ್ನು ಮೋಹರೂಪವೆಂಬ ಸಂಸಾರಚ ಕ್ರದಲ್ಲಿ ಒಗಿಯುವದು ನಿನಗೆ ಯೋಗ್ಯವೇ? ನನ್ನ ಮೇಲೆ ಕೃಪಾದೃಷ್ಟಿಯನ್ನು ಬೀರಿ ತತ್ವಜ್ಞಾನೋಪದೇಶದಿಂದ ಲಿಂಗಾಂಗಸಾಮರಸ್ಯ ಸುಖದಲ್ಲಿ ಲೀನವಾಗುವಂತೆ ಮಾಡು. ನಾವೆಲ್ಲರು ಪಶುಗಳಿದ್ದು ನಿನ್ನ ಮಾಯಾಪಾಶದಿಂದ ಬಿಗಿಯಲ್ಪಟ್ಟವ ರಾಗಿದ್ದೇವೆ. ಪಶುಗಳಾದ ನಮಗೆ ನೀನು ಒಡೆಯನಾಗಿರುವಿ. ನೀನು ಪುರಾಣ ಪುರುಷನು. ನಿನ್ನ ಕೃಪೆಯಿಂದ ಮಾತ್ರ, ಜೀವನು ಮಹೇಶ್ವರತ್ವವನ್ನು ಹೊಂದು ವನು. ಸರ್ವಗುರುಗಳಲ್ಲಿ ನೀನು ಶ್ರೇಷ್ಠ ಗುರುವಾಗಿರುವಿ.

ಅಲ್ಲಮಪ್ರಭು—ಬಸವೇಶ್ವರನೆ, ನೀನು ಪ್ರತ್ಯಕ್ಷ ಆಧ್ಯಾತ್ಮತತ್ವದ (ಶಿವತತ್ವದ) ಮೂರ್ತಿಯು. ಜಗತ್ತಿನಲ್ಲಿ ಗುರುಶಿಷ್ಯರ ಸಂಪ್ರದಾಯವನ್ನು ತೋರಿಸುವದಕ್ಕಾಗಿ ಅವತರಿಸಿದ ಅಧಿಕಾರಿಯಂತೆ ವರ್ತಿಸುತ್ತಿರುವಿ. ವೇದಾಂತ ಶಾಸ್ತ್ರದಲ್ಲಿ ಮಾನ್ಯವೆನಿಸಿದ ವಿದ್ಯೆಯನ್ನು ನಾನು ನಿನಗೆ ಯಥಾವಿಧಿ ಕಲಿಸಿದೆನು. ಅದು ನಿನ್ನ ಶಾಂತವಾದ ಮನಸ್ಸಿನಲ್ಲಿಳಿದು ಗಟ್ಟಿಗೊಂಡಿರುವದು. ನಿನ್ನಲ್ಲಿಗೆ ಬಂದುದರಿಂದ ನನ್ನ ಮನಸ್ಸು ಅತ್ಯಂತ ಸಂತೋಷವನ್ನು ಹೊಂದಿದೆ. ನಾನು ನಿನ್ನ ಪ್ರಶಂಸೆ ಮಾಡಿದ್ದು ಯಥಾರ್ಥವೆ ಆಗಿರುವದು. ಯಾಕಂದರೆ ನಿನ್ನ ಮನೋಗತವನ್ನು ನಾನು ತಿಳಿದಿರುವೆನು. ಶಿವಪಂಚಾಕ್ಷರ ಮಂತ್ರವನ್ನು ಸದಾ ಜಪಿಸುವದರಿಂದ ಪಂಚಭೂತಾತ್ಮಕ ಶರೀರವನ್ನೂ ಅದರ ಗುಣ ಧರ್ಮಗಳನ್ನೂ ಪಂಚಕೋಶಗಳನ್ನೂ ಜಯಿಸಿದ ಸ್ವಧರ್ಮಸಂಪನ್ನರಾದ ಈ ಪ್ರಮಥಗಣರು ನಿನ್ನಾಜ್ಞೆಯಂತೆ ನಡೆಯುವರು. ಶರಣಾಗತರಕ್ಷಕನಿದ್ದು, ಶಿವಗಣರಲ್ಲಿ ನೀನು ಶ್ರೇಷ್ಠನು. ಬಸವೇಶ್ವರ ನಿನ್ನ ಧ್ಯಾನವೊಂದರಿಂದಲೇ ಭಕ್ತನು ಗುರುಲಿಂಗಜಂಗಮನಾಗುತ್ತಾನೆ, ಯಾಕಂದರೆ, ನೀನು ಪ್ರತ್ಯಕ್ಷ ಗುರು ಲಿಂಗ ಜಂಗಮನಾಗಿರುವಿ ಇದನ್ನು ನಾನು ಪ್ರತಿಜ್ಞೆ ಮಾಡಿ ಹೇಳುತ್ತೇನೆ. * ನೀನು ಸಾಕ್ಷಾತ್ ಶಿವಸ್ವರೂಪನು. ಈ ಮಹಾದೇವಿ ಅಕ್ಕನು ನಿನ್ನ ಸ್ವಂತ ಮನಸ್ಸಾಗಿರುವಳು. ಈ ಚನ್ನಬಸವೇಶ್ವರನು ನಿನ್ನ ಸ್ಮರಣಶಕ್ತಿಯಾಗಿದ್ದಾನೆ. ಮಡಿವಾಳಮಾಚಯ್ಯನು ನಿನ್ನ ಆತ್ಮಜ್ಞಾನವಾಗಿದ್ದು, ಬಾಚರಸನು ನಿನ್ನ ವಿಚಾರವಾಗಿರುವನು. ಹಡಪದ ಅಪ್ಪಯ್ಯನು ನಿನ್ನ ಸ್ವಭಾವವಾಗಿದ್ದು ಕಿನ್ನರಯ್ಯನು ನಿನ್ನ ಶರೀರವಾಗಿರುವನು. ಮತ್ತು ಸರ್ವ ಶಿವಭಕ್ತ ಸಮುದಾಯದ ನಿಷ್ಠೆಯೇ ಶರೀರವಾಗಿ ಅದರಲ್ಲಿ ನೀನು ಆತ್ಮನಾಗಿರುವಿ.

ಬಸವೇಶ್ವರ—ಪ್ರಭುವೆ, ನಿನ್ನ ಚರಣಕಮಲ ಸೇವೆಯಿಂದ ಮತ್ತು ನಿನ್ನ ಕೃಪೆಯಿಂದ ನಾನು ಕೃತಕೃತ್ಯನಾದೆನು. ನಿನ್ನ ವಚನವು ಹೇಗೆ ಸಟೆಯಾದೀತು? ನಾನು ನಿನಗೆ ಶರಣು ಹೋಗಿದ್ದೇನೆ. ನಾನೊಂದು ವರವನ್ನು ನಿನ್ನಿಂದ ಕೇಳಿಕೊಳ್ಳುತ್ತೇನೆ, ಅದೇನಂದರೆ—ಜಗತ್ತಿನಲ್ಲಿರುವ ಸರ್ವ ಶಿವಭಕ್ತರಿಗೆ ಅನುಗ್ರಹ ಮಾಡಿ ಉತ್ತಮವಾದ ವೀರಶೈವ ದೀಕ್ಷೆಯನ್ನು ಕೊಟ್ಟು ಶಿವಜೀವೈಕ್ಯವನ್ನು ತೋರಿಸಿ ಕೊಟ್ಟು ಅವರನ್ನು ಜನ್ಮಮರಣದ ಬಾಧೆಯಿಂದ ತಪ್ಪಿಸು. ಮತ್ತು ನಮಗೆಲ್ಲರಿಗೂ ಪ್ರಸನ್ನನಾಗು.

---

* ಭಕ್ತನದೊಂದು ವರ್ಗ, ಜಾತಿ; ಮಾಹೇಶ್ವರನದೊಂದು ವರ್ಗ, ಜಾತಿ ಎಂಬದಾಗಿ ಭೇದವನ್ನು ಕಲ್ಪಿಸಿ ನುಡಿಯುವವರು ಈ ವಚನವನ್ನು ಲಕ್ಷ್ಯದಲ್ಲಿಡಬೇಕು.

ಅಲ್ಲಮಪ್ರಭು—ಬಸವೇಶ್ವರನೆ, ನೀನು ಅನ್ನುವದೆಲ್ಲ ನನಗೆ ಮಾನ್ಯವದೆ. ಅತಿ ಭಯಂಕರವಾದ ಸ್ವಪ್ನದಿಂದುಂಟಾದ ದುಃಖದಿಂದ ವ್ಯಾಕುಲನಾದವನಿಗೆ ಕೂಡಲೆ ಎಚ್ಚರಿಕೆಯಾದರೆ ಎಷ್ಟು ಸುಖವಾಗುವದೋ ಅದರಂತೆ ಪ್ರಪಂಚದಲ್ಲಿ ಅನೇಕ ಪ್ರಕಾರದ ಅಜ್ಞಾನದ್ಯೋತಕ ವ್ಯವಹಾರಗಳಲ್ಲಿ ಮಗ್ನನಾದ ಸಂಸಾರಿ ಜೀವನಿಗೆ ಶಿವತತ್ವವು ಸಾಕ್ಷಾತ್ಕಾರವಾದರೆ ಆತನಿಗೆ ಮೋಕ್ಷಮಾರ್ಗವು ಅತ್ಯಂತ ಸುಖಕರವಾಗಿ ತೋರುತ್ತದೆ.

ಈ ಪ್ರಕಾರ ಪ್ರೇಮಪೂರ್ವಕವಾಗಿ ಮಾತಾಡಿ ಬಸವೇಶ್ವರನ ಪ್ರಾರ್ಥನೆಯ ಮೇರೆಗೆ ಅಲ್ಲಮನು ಸರ್ವ ಭಕ್ತರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡು ಅವರವರ ಭಕ್ತಿ ಯೋಗ್ಯತೆ ಮುಂತಾದವುಗಳನ್ನು ಪರೀಕ್ಷಿಸಿ ಅವರಿಗೆ ಉಪದೇಶ ಮಾಡಿ, ಅವರ ಶರೀರ ಮನ ಧನಗಳ ಮೇಲಿದ್ದ ಅಭಿಮಾನವನ್ನು ಕಿತ್ತು ಹಾಕಿ, ನಿರ್ಮಲ ಭಕ್ತಿಯ ಸ್ವರೂಪವನ್ನು ಬೋಧಿಸಿ ಲಿಂಗಾಂಗಸಾಮರಸ್ಯ ಜ್ಞಾನೋಪದೇಶವನ್ನು ಚನ್ನಾಗಿ ಮಾಡಿದನು. ಅವರ ಮನಸ್ಸಿನಿಂದ ಅಹಂಕಾರ ಮಮಕಾರಗಳನ್ನು ಕಳೆದು ನೂರಾರು ಶ್ರುತಿಗಳ ಆಧಾರಗಳಿಂದ ಅದ್ವಯಬ್ರಹ್ಮದ ಅನುಭವವನ್ನು ಪ್ರತ್ಯಕ್ಷವಾಗಿ ತಂದುಕೊಟ್ಟನು. ಜ್ಞಾನ—ಜ್ಞೇಯ—ಜ್ಞಾತೃವೆಂಬ ತ್ರಿಪುಟಿಯ ಆಚೆಗೆ ಇರುವ, ನೋಡಲಿಕ್ಕೂ ಹೇಳಲಿಕ್ಕೂ ಬಾರದಂಥ, ಪರಿಪೂರ್ಣವಾದ ನಿರ್ಮಲವಾದ ನಿತ್ಯವಾದ ಮತ್ತು ಸತ್ಯವಾದ, ಶಿವತತ್ವವನ್ನು ಅವರಿಗೆ ಪ್ರತ್ಯಕ್ಷಮಾಡಿ ಕೊಟ್ಟನು. ಅಹಂಕಾರ ಮಮಕಾರಗಳ ಲೇಶವು ಕೂಡ ಇಲ್ಲದಂಥ ಅತಿಶಯ ಉತ್ತಮವಾದ ಶ್ರೇಷ್ಠ ಚಿದ್ರೂಪಾನಂದ ಪದಕ್ಕೆ ಬಸವೇಶ್ವರನನ್ನು ಮುಟ್ಟಿಸಿದನು. ಆ ಸಮಯದಲ್ಲಿ ಪ್ರಮಥಗಣರು ಅಲ್ಲಮನ ಕೃಪಾದೃಷ್ಟಿಯಿಂದ ಸಹಜ ಪ್ರಾಪ್ತವಾದ ಲಿಂಗೈಕ್ಯ ಸುಖಾನುಭವದಲ್ಲಿದ್ದರು. ವೃಕ್ಷದ ಬೇರಿಗೆ ನೀರೆರೆಯುವದರಿಂದ ಟೊಂಗೆಗಳು ತಮ್ಮಷ್ಟಕ್ಕೆ ತಾವೇ ಚಿಗಿಯುವಂತೆ, ಬಸವೇಶ್ವರನೆಂಬ ಗಿಡದ ಮೂಲಕ್ಕೆ ಅಲ್ಲಮಪ್ರಭುವಿನ ಕೃಪಾರಸವೆಂಬ ನೀರಿನ ಮಳೆಗರೆಯಲು, ಪ್ರಮಥಗಣರು ವೃದ್ಧಿಯನ್ನು ಹೊಂದಿ ಪೂರ್ಣ ಶಿವಯೋಗಸುಖಾನುಭವವನ್ನು ಉಪಭೋಗಿಸಹತ್ತಿದರು. ಗಾಳಿಯು ವೇಗದಿಂದ ಆಕಾಶದಲ್ಲಿ ಕೂಡಿದ ಅನೇಕ ವರ್ಣದ ಮೋಡಗಳು ದಿಕ್ಕುಗೆಟ್ಟು ಓಡುವಂತೆ, ಆ ಪ್ರಭುದೇವರ ಉಪದೇಶಸಾಮರ್ಥ್ಯದಿಂದ ಭಕ್ತರ ಮನದಲ್ಲಿ ಹಬ್ಬಿದ ಅಜ್ಞಾನವು ( ಮಾಯೆಯು ) ಸಂಪೂರ್ಣವಾಗಿ ನಾಶ ಹೊಂದಿತು. ಕೋಶಾಧ್ಯಕ್ಷನಾದ ಬಸವೇಶ್ವರ, ಮಡಿವಾಳಮಾಚಾರ್ಯ, ನಾಗಾಂಬಿಕೆ, ಹಡಪದ ಅಪ್ಪಣ್ಣ, ಕಿನ್ನರಯ್ಯ, ಚನ್ನಬಸವೇಶ್ವರ ಮೊದಲಾದ ಶಿವಗಣರು ಜೀವನ್ಮುಕ್ತಿಯ ಸ್ಥಿತಿಯನ್ನು ಹೊಂದಿ ಪ್ರಭುಕೃಪೆಯಿಂದ ಸುಖವಾಗಿದ್ದರು. ಇಂತು ಅಲ್ಲಮಪ್ರಭುವು ಬಸವೇಶ್ವರ ಮೊದಲಾದವರೊಡ

ನೆ ಅನೇಕ ದಿವಸ ಸಂತೋಷದಲ್ಲಿದ್ದನು. ಅನಂತರ ಭಕ್ತೋದ್ಧಾರಕ್ಕಾಗಿ ಅಲ್ಲಮಪ್ರಭುವು ಕಲ್ಯಾಣನಗರವನ್ನು ಬಿಟ್ಟು ಮುಂದಕ್ಕೆ ನಡೆದನು. ಅವನು ಹೋದತ್ತ ಜನರ ಅಜ್ಞಾನವನ್ನು ದೂರ ಮಾಡಿ ಅವರಿಗೆ ಲಿಂಗೈಕ್ಯ ಜ್ಞಾನೋಪದೇಶವನ್ನು ಮಾಡಿ ಮೋಕ್ಷ ಪದವಿಯನ್ನು ಪ್ರಾಪ್ತ ಮಾಡಿಕೊಟ್ಟನು. ಮಾನಸ ಸರೋವರದಲ್ಲಿರುವ ಕಮಲಗಳ ಮೇಲೆ ಹಂಸಪಕ್ಷಿಗಳು ಕೂಡ್ರುವಂತೆ, ಭಕ್ತರ ಮನಸ್ಸಿನಲ್ಲಿ ಅಲ್ಲಮಪ್ರಭುವು ಸದಾ ವಿಹರಿಸುತ್ತಿದ್ದನು. ಜನರು ಯಾವಾಗಲೂ ಆತನ ಧ್ಯಾನವನ್ನು ಮಾಡುತ್ತಿದ್ದರು.

## ೨೦ ನೆಯ ಅಧ್ಯಾಯ.

ಪ್ರಭುದೇವರು ಶರಣಗಣಕ್ಕೆ ನಿಜಪದವನ್ನಿತ್ತು
ದನ್ನು ಪರಮೇಶ್ವರನು ದೇವಿಯರಿಗೆ
ನಿರೂಪಿಸಿದನು.
ವೀರಶೈವೋತ್ಕರ್ಷವಿಚಾರ.




ತ್ತ ಕೈಲಾಸಪರ್ವತದಲ್ಲಿ ಚಂದ್ರಶೇಖರನಾದ ಶಂಕರನು ಅಂತಜ್ಞಾನದಿಂದ ಅಲ್ಲಮನು ಭೂಮಿಯಲ್ಲಿ ನಡಿಸಿದ ಕಾರ್ಯವನ್ನಂತು ಅದನ್ನು ಪಾರ್ವತೀದೇವಿಗೆ ನಿರೂಪಿಸಿದನು. ಪರಮೇಶ್ವರನಾದ ಅಲ್ಲಮನ ಚರಿತ್ರವನ್ನು ಕೇಳಿ ಅವಳಿಗೆ ಪರಮಾನಂದವಾಯಿತು. ಶಿವಾಜ್ಞೆಯ ಮೇರೆಗೆ ತನ್ನ ಸಾತ್ವಿಕ ಕಲೆಯೂ ಮತ್ತು ಶಂಕರನ ಶುದ್ಧ ಚೈತನ್ಯರೂಪ ಅಲ್ಲಮಪ್ರಭುವೂ ಪೃಥ್ವಿಯ ಮೇಲೆ ಕಳುಹಿಸಲ್ಪಟ್ಟಿರುವರು. ಅವರೀರ್ವರ ವರ್ತಮಾನವನ್ನು ತನಗೆ ವಿಶದವಾಗಿ ಹೇಳಬೇಕೆಂದು ಜಗನ್ಮಾತೆಯು ಬಿನ್ನೈಸಿಕೊಳ್ಳಲು,

ಪರಮೇಶ್ವರ—ಎಲೈ ಕಮಲದಂತೆ ನೇತ್ರಗಳುಳ್ಳ ಪಾರ್ವತಿಯೇ, ನಿನ್ನ ಸಾತ್ವಿಕ ಕಲಾರೂಪ ಮಹಾದೇವಿ ಅಕ್ಕನು ಭೂಮಿಯಲ್ಲಿ ಜನ್ಮವೆತ್ತಿ ತನ್ನ ಮನಸ್ಸನ್ನು ಅಲ್ಲಮನಿಗೆ ಅರ್ಪಿಸಿದಳು. ಆ ಅಲ್ಲಮಪ್ರಭುವು ನನ್ನ ಶುದ್ಧ ಚೈತನ್ಯಸ್ವರೂಪನಿದ್ದು, ಈ ಚರಾಚರ ಜಗತ್ತಿಗೆ ಮೂಲ ಕಾರಣನಾಗಿದ್ದಾನೆ. ಲೋಕದ ಜನರ ಕಲ್ಯಾಣಕ್ಕಾಗಿ ಆತನು ಪೃಥ್ವಿಯಲ್ಲಿ ಅವತರಿಸಿರುವನು. ಅಲ್ಲಮನ ಕೃಪೆಯಿಂದ ಮಹಾದೇವಿಗೆ ಲಿಂಗಾಂಗಸಾಮರಸ್ಯದ ಯಥಾರ್ಥಜ್ಞಾನವಾಗಿ ಬಹು ಸಂತೋಷದಿಂದ ಅನೇಕ ಯೋಗೀಶ್ವರರು ಯೋಗಸಾಧನ ಮಾಡುವಂಥ ಶ್ರೀಗಿರಿಗೆ ಹೋದಳು. ಪ್ರಮಥರ ಅಂಶದವರು ಭೂಮಿಯ ಮೇಲೆ ಹುಟ್ಟಿ ಬೇರೆ ಬೇರೆ ಹೆಸರುಗಳಿಂದ ಪ್ರಸಿದ್ಧರಾಗಿ ಅಲ್ಲಮಪ್ರಭುವಿನ ಭಕ್ತಿಯನ್ನು ಮಾಡುತ್ತಿರುವರು. ಬೇರೆ ಬೇರೆ ಕುಲದಲ್ಲಿ ಹುಟ್ಟಿದ ಆ ಪ್ರಮಥರಿಗೆ ಪ್ರಭುದೇವರು ಲಿಂಗೈಕ್ಯೋಪದೇಶ ಮಾಡಿದ್ದರಿಂದ ಅವರೆಲ್ಲರು ಜೀವನ್ಮುಕ್ತರಾಗಿ ಚರಿಸುತ್ತಿರುವರು. ಅವರು ತಮ್ಮ ಕಾಯಕಷ್ಟದಿಂದ ಮತ್ತು ಪ್ರಾಮಾಣಿಕತನದಿಂದ ಗಳಿಸಿದ ಪದಾರ್ಥಗಳನ್ನು ಗುರುಲಿಂಗಜಂಗಮಪೂಜೆಯಲ್ಲಿ ಸದಾ ವ್ಯಯ ಮಾಡುತ್ತ ಶಿವಯೋಗಿ ಶ್ರೇಷ್ಠರೆನಿಸಿಕೊಂಡಿರುವರು. ದ್ವಿತೀಯ ಶಂಭುವೆನಿಸಿಕೊಳ್ಳುವ ಸರ್ವಜ್ಞ ಮೂರ್ತಿಯಾದ ನಂದಿಕೇಶ್ವರನು ನನ್ನಾಜ್ಞೆಯ ಮೇರೆಗೆ ನನ್ನ ಭಕ್ತಿಯನ್ನು ವಿಸ್ತರಿಸುವದಕ್ಕಾಗಿ ಮಾದಲಾಂಬಿಕೆಯ ಗರ್ಭದಲ್ಲಿ ಬಸವೇಶ್ವರನೆಂಬ ಹೆಸರಿನಿಂದ ಹುಟ್ಟಿ ಕಲ್ಯಾಣ ನಗರದ ರಾಜನಾದ ಬಿಜ್ಜಳನಿಗೆ ಮುಖ್ಯ ಪ್ರಧಾನನಾಗಿದ್ದಾನೆ. ಕರಪರುಷ-ದೃಷ್ಟಿಪರುಷ-ಭಾವಪರುಷ ಮೊದಲಾದ ಪಂಚಪರುಷದಿಂದ ಯುಕ್ತನಾದ ಆತನು ಪರವಾದಿಗಳ ಗರ್ವವನ್ನು ಮುರಿದು ಬಿಡುವದರಲ್ಲಿ ಮಹಾ ಸಮರ್ಥನಾಗಿದ್ದಾನೆ. ಆತನು ಪರಮ ಭಕ್ತಿವಂತನೂ, ವೀರಶೈವ ಕುಲೋದ್ಧಾರ ಕಾರ್ಯದಲ್ಲಿ ಮಹಾ ಸಮರ್ಥನೂ ಇದ್ದು, ಸರ್ವ ಶಿವಭಕ್ತರಲ್ಲಿ ಅಗ್ರೇಸರನಾಗಿದ್ದಾನೆ. ಯಾಚಕವೃಂದಕ್ಕೆ ಕಾಮಧೇನುವಾಗಿ ತನ್ನ ತನು-ಮನ-ಧನಗಳನ್ನು ಶಿವಭಕ್ತರಿಗೆ ಪೂರ್ಣವಾಗಿ ಅರ್ಪಿಸಿದ್ದಾನೆ. ಮತ್ತು ಶಿವಭಕ್ತರೊಂದಿಗೆ ಸುಖಸಂಕಥಾಲಾಪ ಮಾಡುತ್ತ (ಶಿವಗೋಷ್ಠಿಯಲ್ಲಿ ತತ್ಪರನಾಗಿ) ಧೀರನಾದ ಬಸವೇಶ್ವರನು ಕಲ್ಯಾಣನಗರದಲ್ಲಿ ಶೋಭಿಸುತ್ತಿದ್ದಾನೆ. ತನ್ನ ಅರಮನೆಗೆ ಅತಿಥಿಗಳಾಗಿ ಬಂದ ಅನೇಕ ಚರಮೂರ್ತಿಗಳಿಂದ ಅಲ್ಲಮನ ಚರಿತ್ರವನ್ನು ಕೇಳುತ್ತ ಅದರಲ್ಲಿಯೇ ಲೀನಮಾನಸನಾಗಿ "ನನ್ನ ಪ್ರಿಯ ಗುರುನಾಥ ಅಲ್ಲಮಪ್ರಭುವು ನನ್ನ ಮನೆಗೆ ಯಾವಾಗ್ಗೆ ಬರುವನು? ಆತನ ಕೃಪೆಯಿಂದ ನನ್ನ ಮನಸ್ಸಿನ ಸಂಶಯಗಳು ಯಾವಾಗ್ಗೆ ದೂರಾಗುವವು? ನನಗೆ ಗುರು-ಲಿಂಗ-ಜಂಗಮ ಪೂಜಾಕ್ರಮವು ಆತನ ಮುಖದಿಂದ ಯಾವಾಗ್ಗೆ ತಿಳಿದೀತು? ಲಿಂಗ ಮತ್ತು ಅಂಗ ಇವುಗಳ ಸಂಬಂಧವನ್ನು ನನಗೆ ಯಾವಾಗ್ಗೆ

ಬೋಧಿಸುವನು?" ಹೀಗೆ ಚಕೋರ ಪಕ್ಷಿಯು ಚಂದ್ರೋದಯದ ನಿರೀಕ್ಷಣೆ ಮಾಡುವಂತೆ ಬಸವೇಶ್ವರನು ಸರ್ವ ಪ್ರಮಥ ಗಣರೊಂದಿಗೆ ಅಲ್ಲಮ ಪ್ರಭುವಿನ ಬರುವಿಕೆಯನ್ನು ಹಾರೈಸುತ್ತಿದ್ದನು. ಅನಂತರ ಜಗದ್ಗುರುವಾದ ಅಲ್ಲಮನು, ಕರುವನ್ನು ನೆನೆದು ಆಕಳು ಅದರೆಡೆಗೆ ಓಡಿ ಬರುವಂತೆ ಬಸವೇಶ್ವರನ ಉತ್ಕಂಠಿತ ವಾದ ಮನಸ್ಸನ್ನು ತಿಳಿದು ಅವನಿಗೆ ಕೃಪೆ ಮಾಡಬೇಕೆಂದು ತತ್ಕ್ಷಣವೇ ಕಲ್ಯಾಣ ಪಟ್ಟಣಕ್ಕೆ ಬಂದನು. ಅನಂತರ ಬಸವೇಶ್ವರ ಮೊದಲಾದ ಪ್ರಮುಖ ಭಕ್ತರು ಅತಿ ವೈಭವದಿಂದ ಅವನನ್ನು ಸತ್ಕರಿಸಿ ಕರೆದುಕೊಂಡು ಬಂದ ಬಳಿಕ, ಅವ ರಿಂದ ಯೋಗ್ಯವಾಗಿ ಆರಾಧಿಸಲ್ಪಟ್ಟವನಾಗಿ, ಗುರುವರ್ಯನು ಅವರಿಗೆ ಜ್ಞಾನೋ ಪದೇಶ ಮಾಡಿದನು. ನುಡಿಗಳಿಂದ ವರ್ಣಿಸಲಸಾಧ್ಯವಾದ ತತ್ವಜ್ಞಾನಾನುಭವ ವನ್ನು ಅವರಿಗೆ ಪ್ರತ್ಯಕ್ಷ ಮಾಡಿಕೊಟ್ಟು, ಚಿತ್ಸ್ವರೂಪವಾದ ಇಷ್ಟಲಿಂಗದ ಸಂಬಂ ಧವಾಗಿ ಅವರಲ್ಲಿ ದೃಢತರವಾದ ನಿಷ್ಠೆಯನ್ನುಂಟು ಮಾಡಿದನು. ವೀರಶೈವ ಮತ ಸ್ಥನಾದ ಅಲ್ಲಮಪ್ರಭುವು ಬಸವೇಶ್ವರ ಮೊದಲಾದ ಸರ್ವ ಶಿವಶರಣರಿಗೆ ಇಷ್ಟಲಿಂ ಗದ ಯಥಾರ್ಥ ಜ್ಞಾನವನ್ನುಂಟು ಮಾಡಿಕೊಟ್ಟು ಅವರನ್ನು ಕೃತಾರ್ಥರಾಗಿ ಮಾಡಿದನು.

ಪಾರ್ವತಿ—ಸ್ವಾಮಿ, ತಾವು ಈ ವರೆಗೆ ಹೇಳಿದ್ದನ್ನೆಲ್ಲ ಸಾವಧಾನದಿಂದ ಕೇಳಿದೆನು. ಆದರೆ ಒಂದು ಮಾತಿನ ವಿಷಯವಾಗಿ ನನ್ನಲ್ಲಿ ಸ್ವಲ್ಪ ಸಂಶಯ ಉಂಟಾಗಿದೆ, ಅದೇನಂದರೆ—ಅಲ್ಲಮನು ಸರ್ವಾಂತರ್ಯಾಮಿಯೂ ಸರ್ವ ಸ್ವರೂ ಪನೂ ಆಗಿದ್ದಾನೆ. ಹೀಗಿದ್ದು, ಶಿವ-ವಿಷ್ಣು-ದುರ್ಗಾ-ಸೂರ್ಯ-ಸ್ಕಂದ-ಗಣ ಪತಿ ಈ ದೇವತೆಗಳ ಹೆಸರಿನ ಮೇಲಿಂದ ಉತ್ಪನ್ನವಾದ ಶೈವ-ವೈಷ್ಣವ ಮುಂತಾ ದ ಆರು ಮತಗಳಿರುವಾಗ, ಅಲ್ಲಮಪ್ರಭುವಿನ ಪ್ರೀತಿಯು ವೀರಶೈವ ಮತದ ಮೇಲೆ ಇಷ್ಟು ಯಾಕೆ? ಇದನ್ನು ನನಗೆ ದಯವಿಟ್ಟು ಹೇಳಬೇಕು.

ಪರಮೇಶ್ವರ—ಪ್ರಿಯೆ, ವೀರಶೈವ ಮತದ ಉತ್ಕರ್ಷವು ಶ್ರೇಷ್ಠವಾದ ಅದ್ವೈತ ವಿದ್ಯೆಯಲ್ಲಿದೆ. ಶೈವ, ವೈಷ್ಣವ, ಶಾಕ್ತೇಯ, ಸೌರ, ಸ್ಕಾಂದ, ಗಾಣಾಪತ್ಯವೆಂಬದಾಗಿ ಆರು ಬೇರೆ ಬೇರೆ ಮತಗಳಿರುವದನ್ನು ಆಗಮಜ್ಞರು ಒಪ್ಪಿಕೊಳ್ಳುವರು. ಈ ಆರು ಮತಗಳಲ್ಲಿ ಯಾವದಾದರೊಂದನ್ನು ಪರೀಕ್ಷಿಸಲಾಗಿ ಅದರಲ್ಲಿ ದ್ವೈತವೇ ಮುಖ್ಯವಾಗಿದೆ. ಮತ್ತು ವೇದಾಂತ ವಿರುದ್ಧವಾದ ಅಸಮಂ ಜಸ ವಿಚಾರಗಳು ಇವುಗಳಲ್ಲಿ ತುಂಬಿರುತ್ತವೆ. ಈ ಷಣ್ಮತಗಳ ಅವಲಂಬನದಿಂದ ಧರ್ಮ-ಅರ್ಥ-ಕಾಮ ಇವುಗಳ ಪ್ರಾಪ್ತಿಯುಂಟಾಗುವದು; ಆದರೆ ಮೋಕ್ಷ ಪ್ರಾಪ್ತಿಯು ಇವುಗಳಿಂದ ಎಂದೂ ಆಗದು. ಇವೆಲ್ಲ ಒಂದೊಂದು ವಿಶಿಷ್ಟವಾದ

ಲೋಕವನ್ನು ದೊರಕಿಸಿಕೊಡುತ್ತವೆಯಲ್ಲದೆ ಬೇರೆ ಯಾವದನ್ನೂ ಕೊಡಲರಿಯವು. ಇವುಗಳಲ್ಲಿ ಯಾವುದೊಂದು ಮತವನ್ನು ಹಿಂಬಾಲಿಸಿದರೂ ಜನನ ಮರಣ ಚಕ್ರವು ತಪ್ಪುವದಿಲ್ಲ. ಮೋಕ್ಷ ಪ್ರಾಪ್ತಿಯಂತೂ ದೂರೇ ಉಳಿಯಿತು. ತದ್ವಿಶಿಷ್ಟ ಲೋಕಗಳ ಸಂಪ್ರಾಪ್ತಿಯುಂಟಾದರೂ ಜೀವನಿಗೆ ಅದೊಂದು ಪ್ರಕಾರದ ಬಂಧನವೆಂದೇ ಹೇಳಬೇಕು. ಪಾರ್ವತಿ, ಈ ಮತಗಳಲ್ಲಿ ಭೇದಜ್ಞಾನವೇ * ಮುಖ್ಯವೆಂದು ಗಣಿಸಲ್ಪಡುವ ಕಾರಣ ಅವುಗಳಿಂದ ನಿರ್ದೋಷವಾದ ಮೋಕ್ಷವೆಂದಿಗೂ ಲಭಿಸದು. ಮೀಮಾಂಸಕರ ಮತವೆಂಬುದು ಕರ್ಮಕಾಂಡವು. ಇದರಲ್ಲಿ ಹಿಂಸೆಯನ್ನು ಅವಶ್ಯವಾಗಿ ಮಾಡಬೇಕಾಗುತ್ತದೆ. ಈ ಕರ್ಮಗಳ ಫಲವೆಂದರೆ–ಸ್ವರ್ಗ ನರಕಗಳ ವಾಸವು. ಇದರ ಹೊರತು ಬೇರೆ ಇಲ್ಲ. ದುರಭಿಮಾನದಿಂದ

* ಟಿಪ್ಪಣಿ—"ವೇದದಲ್ಲಿ ಪೂರ್ವಕಾಂಡವು ವರ್ಣಾಶ್ರಮ ಧರ್ಮದಿಂದ ಕೂಡಿರುತ್ತದೆ. ಈ ವರ್ಣಾಶ್ರಮ ಧರ್ಮಗಳು ಮಾಯಿಕವಾಗಿರುವವು. ಅವುಗಳನ್ನಾಚರಿಸುವವನಲ್ಲಿ ದೇವರಿಗೂ ತನಗೂ ಭೇದವಿರುವದೆಂಬ ಭಾವವು ದೃಢವಾಗುವದು. ಈ ಕಾರಣದಿಂದ ಶಿವಸಾಯುಜ್ಯರೂಪ ಮುಕ್ತಿಯು ಕರ್ಮಕಾಂಡೋಕ್ತವಾದ ವೈದಿಕ ಧರ್ಮದಿಂದ ಲಭಿಸದು. ಆದ್ದರಿಂದ ವೀರಶೈವರು ಕರ್ಮಕಾಂಡವನ್ನು ತ್ಯಾಗ ಮಾಡಿರುತ್ತಾರೆ. ಯಜ್ಞಾದಿ ಕರ್ಮಗಳಿಂದ ಚಿತ್ತಶುದ್ಧಿಯನ್ನು ಪಡೆಯಬೇಕೆಂದು ವೇದದಲ್ಲಿ ಹೇಳಿದೆ. ಭಕ್ತಿಯಿಂದ ಚಿತ್ತಶುದ್ಧಿಯನ್ನು ಹೊಂದಬೇಕೆಂದು ಶಿವಾಗಮಗಳಲ್ಲಿ ಹೇಳಿದೆ ಹೀಗಿದ್ದರೂ ಕರ್ಮಮಾರ್ಗಕ್ಕಿಂತ ಭಕ್ತಿಮಾರ್ಗವು ತೀರ ಭಿನ್ನವಾದದ್ದೂ ಮಿಗಿಲಾದದ್ದೂ ಇರುತ್ತದೆ. ಕರ್ಮಮಾರ್ಗದಿಂದ ದೇಹಾಭಿಮಾನಗಳು ನಾಶವಾಗುವದಿಲ್ಲ. ಭಕ್ತಿಯಲ್ಲಿ ಶಿವೋಪಾಸನೆಗೆ ಮೂಲ ಹೇತುವಾದ ಸೇವ್ಯ ಸೇವಕ ಭಾವವಿದ್ದರೂ ಅದು ಅಜ್ಞಾನ ಸೂಚಕವಲ್ಲ. ನಾನು ಇಂಥಾ ಕುಲದವನೆಂಬ ಅಭಿಮಾನವಿಲ್ಲದ್ದರಿಂದ ದೇಹದಲ್ಲಿ ತಾದಾತ್ಮ್ಯ ಕಲ್ಪನೆಯು ಭಕ್ತಿಯಲ್ಲಿ ಉಂಟಾಗುವದಿಲ್ಲ. ಆದ್ದರಿಂದ ವೀರಶೈವರಲ್ಲಿ ವರ್ಣಾಶ್ರಮ ಧರ್ಮಗಳು ಹೇಳಲ್ಪಟ್ಟಿರುವದಿಲ್ಲ. ಭಕ್ತಿಯು ಜ್ಞಾನದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಯಾಕಂದರೆ, ಭಕ್ತಿ–ಆಚಾರಗಳು ಕರ್ಮದಂತೆ ಜ್ಞಾನಕ್ಕೆ ಪ್ರತಿಬಂಧಕಗಳಾಗುವದಿಲ್ಲ. ಸ್ವಾಭಾವಿಕವಾದ ಶರೀರಕ್ರಿಯೆಗಳು ಭಕ್ತಿಮಾರ್ಗದಲ್ಲಿ ಶಿವಾರ್ಚನಾರೂಪವಾಗುತ್ತವೆ. "ರುದ್ರೋಭೂತ್ವಾ ರುದ್ರಂಯಜೇತ್" ಎಂಬ ವಚನಾನುಸಾರವಾಗಿ ಇಷ್ಟಲಿಂಗವು ತನ್ನ ಸ್ವರೂಪವೆಂದೇ ತಿಳಿದು ಪೂಜಿಸುವದರಿಂದ ಭೇದಭಾವವು ಸ್ವಲ್ಪಾದರು ಸಂಭವಿಸುವದಿಲ್ಲ."

ಕುರುಡರಾದ ಜನರು ಸ್ವರ್ಗಪ್ರಾಪ್ತಿಗೋಸುಗ ಹಿಂಸೆಯನ್ನು ಮಾಡುವರು. ಆದರೆ ಜೀವಹಿಂಸೆಯನ್ನು ಮಾಡುವವರ ಮೇಲೆ ಶಿವನು ಎಂದೂ ಕೃಪೆ ಮಾಡನು. ಶಿವಭಕ್ತಿಯಲ್ಲಿ ಹಿಂಸಾಕ್ರಮವಿಲ್ಲದಿರುವ ಮೂಲಕ ಅದರಿಂದ ಶಿವಾನುಗ್ರಹವು ಬೇಗನೆ ಉಂಟಾಗುವದು. ಶಿವಭಕ್ತಿಯನ್ನಾಚರಿಸದಿದ್ದರೆ ಶಂಕರನ ಅನುಗ್ರಹವು ದೊರಕದು. ಶಿವಾನುಗ್ರಹವಿಲ್ಲದೆ ಮೋಕ್ಷವೆಂದಿಗೂ ಲಭಿಸದು. ಇದರಲ್ಲಿ ತಿಲ ಮಾತ್ರ ಸಂದೇಹವಿಲ್ಲ. * ಆದ್ದರಿಂದ ಜನರು ನಿರಿಚ್ಛೆಯಿಂದ ಶಂಕರನನ್ನು ಆರಾಧಿಸಿದರೆ ಮಾತ್ರ ವೀರಶೈವ ಮತದ ಮೇಲೆ ಅವರಲ್ಲಿ ಪ್ರೀತಿಯುಂಟಾಗುವದು. ವೀರಶೈವಮತವು ಸಿದ್ಧಾಂತಶಾಸ್ತ್ರವನ್ನನುಸರಿಸಿ ಇದ್ದು, ಮೋಕ್ಷಪ್ರಾಪ್ತಿಗೆ ಮುಖ್ಯ ಸಾಧನವಾಗಿದೆ. ನಾನು ನೀನೆಂಬ ಭೇದಬುದ್ಧಿಯು ಇರುವ ತನಕ ಸಂಸಾರದಿಂದ ಮನುಷ್ಯನಿಗೆ ಬಿಡುಗಡೆ ಇಲ್ಲ. ತನ್ನ ಸ್ವರೂಪವೇ ಇಷ್ಟಲಿಂಗವೆಂಬದಾಗಿ ತಿಳಿದು ಲಿಂಗರೂಪಿಯಾದ ಶಿವನನ್ನು ಪೂಜಿಸಿರುವದರಿಂದ, ವೀರಶೈವಮತವು ಈ ಭೇಧ ಬುದ್ಧಿಯನ್ನು ನಾಶಗೊಳಿಸುವಂಥಾದ್ದಿದ್ದು ಅದ್ವೈತವೇ ಇದರಲ್ಲಿ ಮುಖ್ಯ ಫಲವಾಗಿದೆ. ಸದ್ಗುರುವಿನ ಉಪದೇಶದಿಂದ ಇಷ್ಟಲಿಂಗ ಸಂಬಂಧವಾಗಿ ಲಿಂಗಾಂಗ ಸಾಮರಸ್ಯ ಜ್ಞಾನವಾಗಲು ಅಂತಹ ಶಿಷ್ಯನು ವೀರಶೈವನೆನಿಸುವನು. ಜೀವನೇ ಅಂಗ, ಶಿವನೇ ಲಿಂಗ, ಇವರಿಬ್ಬರ ಪರಸ್ಪರ ಐಕ್ಯವೇ ಸಮರಸವೆಂಬದಾಗಿ ಹೇಳಿದೆ. ಅಜ್ಞಾನಿಗಳಿಗೆ ಶಿವಜೀವೈಕ್ಯಜ್ಞಾನದ ಬೋಧೆಯಾಗುವದಿಲ್ಲ. ಶಿವತತ್ವವು ತಿಳಿದ ಕೂಡಲೆ ವೇದದ ತಾತ್ಪರ್ಯವು ತಿಳಿಯಬರುವದು. ಅದ್ವೈತಾರ್ಥ ಪ್ರತಿಪಾದಕವಾದ ವೀರಶೈವಮತವು ಶ್ರುತಿಗಳಿಂದ ತಿಳಿಯಲ್ಪಡತಕ್ಕದ್ದಾಗಿದೆ. ಭೇದಬುದ್ಧಿಯು ದನಕರ ಮೊದಲಾದ ಪ್ರಾಣಿಗಳನ್ನು ಮೊದಲು ಮಾಡಿಕೊಂಡು ಮುದುಕರು ಕಡೆಯಾಗಿ ಸರ್ವರಲ್ಲಿ ಇರುತ್ತದೆ. ಇಂತಹ ಭೇದಕಲ್ಪನೆಗಳುಳ್ಳ ಮತಗಳಿಗೆ ಲೌಕಿಕ ಮತಗಳೆಂದು ಹೇಳಬೇಕು. ಆದರೆ ವೇದಾಂತ ಜ್ಞಾನದಿಂದ

---

* ಟಿಪ್ಪಣಿ— “ ಯಃಪೂಜಯನ್ ಮಹಾರುದ್ರಂ ಸಮೋಕ್ಷಮಧಿಗಚ್ಛತಿ ॥ ಮುನೇಶಿವಾರ್ಚನಾದನ್ಯೋ ಮೋಕ್ಷೋಪಾಯೋನವಿದ್ಯತೇ । ತತಃ ಸರ್ವಪ್ರಯತ್ನೇನ ಪೂಜನೀಯಸ್ಸದಾಶಿವಃ॥.........ಕುರ್ವಂತು ಕೋಟಿಶೋನಿತ್ಯಂ ಮಹೇಶಾನ್ಯಸುರಾರ್ಚನಂ । ತಥಾಪಿದುರ್ಲಭೋಮೋಕ್ಷೋ ವಿನಾಶಂಕರಪೂಜಯಾ ॥ ಕುರ್ವಂತು ಕೋಟಿಶೋಯಾಗಾನ್ ಧರ್ಮಾಂಶ್ಚಾನ್ಯಾನ್ ಸನಾತನಾನ್ । ತಥಾಪಿ ಶ್ರೀವಿರೂಪಾಕ್ಷಪೂಜಾಂ ಮೋಕ್ಷಸ್ತ್ವಪೇಕ್ಷತೇ ॥ ಸುಕೃತಾಮಿತಪುಣ್ಯೋಪಿ ವಿನಾಶಂಕರಪೂಜಯಾ । ನ ಮುಕ್ತಿಕಾಂತಾಂಲಭತೆ ಸತ್ಯಂಸತ್ಯಂ ನ ಸಂಶಯಃ ॥ ” (ಶಿವರಹಸ್ಯ.)

ಸ್ಥಿರ ಮನಸ್ಕರಾದ ಮತ್ತು ಅತ್ಯಂತ ವೈರಾಗ್ಯಸಂಪನ್ನರಾದವರಿಗೆ ಮಾತ್ರ ಅಂತ್ಯದಲ್ಲಿ ವೀರಶೈವ ಮತದ ಮೇಲೆ ಅನುರಾಗವು ಹುಟ್ಟುತ್ತದೆ. + ವೀರಶೈವ ಮತಗ್ರಂಥಗಳಲ್ಲಿ ಹೇಳಿದ ಪ್ರಕಾರ ಲಿಂಗಾಂಗಸಾಮರಸ್ಯ ಜ್ಞಾನವಾದವರಿಗೆ ಮೋಕ್ಷವು ಲಭಿಸುವದು. ಅವರಿಗೆ ಪುನಃ ಜನನ ಮರಣದ ಭೀತಿ ಇರುವದಿಲ್ಲ. +

ಮತ್ತಲ್ಲದೆ, ಕಾಲವು ಅನಾದಿ ಇದ್ದು ಒಬ್ಬ ಶಿವನಿಂದಲೇ ಈ ಪ್ರಪಂಚವೆಲ್ಲ ನಿರ್ಮಿಸಲ್ಪಟ್ಟಿರುತ್ತದೆ. ಶಿವಾನುಜ್ಞೆಯಿಂದ ಉಳಿದ ಅವಾಂತರ ಬ್ರಹ್ಮ ವಿಷ್ಣ್ವಾದಿಗಳು ಕೆಲವನ್ನು ನಿರ್ಮಿಸಿದ್ದಾರೆ. ವೇದಾಗಮ ಪುರಾಣಂಗಳಲ್ಲಿ ಕೆಲವೆಡೆಗಳಲ್ಲಿ ವಿಷ್ಣು ಬ್ರಹ್ಮಾದಿಗಳು ಮಾಡಿದ ಸೃಷ್ಟಿಯು ವರ್ಣನೆಯದೆ. ಆದರೂ ಅವುಗಳಲ್ಲಿ ಶಿವನಿರ್ಮಿತವಾದ ಸೃಷ್ಟಿಯು ಮುಖ್ಯವೆಂದು ಹೇಳಲ್ಪಟ್ಟಿದೆ. ಮಹೇಶ್ವರನ ಆಜ್ಞೆಯನ್ನು ಶಿರಸಾವಹಿಸಿ ವಿಷ್ಣ್ವಾದಿಗಳು ಸೃಷ್ಟಿಯನ್ನು ಉತ್ಪನ್ನ ಮಾಡುತ್ತಾರೆ. ಆ ಸಮಯದಲ್ಲಿ ಅವರಿಗೆ ಶಿವನು ಅನುಗ್ರಹ ಮಾಡುತ್ತಾನೆ. ಶಿವಾನುಗ್ರಹದಿಂದಲೆ ವಿಷ್ಣು ಬ್ರಹ್ಮಾದಿಗಳಲ್ಲಿ ಸೃಷ್ಟಿಯನ್ನು ಉತ್ಪನ್ನ ಮಾಡುವ ಸಾಮರ್ಥ್ಯವು ಉಂಟಾಗಿ ಆದರ ಸಹಾಯದಿಂದ ಅವರು ಸೃಷ್ಟಿಯನ್ನು ನಿರ್ಮಿಸುವರು. “ ವಿಶ್ವಾಧಿಕೊ ರುದ್ರಃ ” ಅಂದರೆ ವಿಶ್ವರೂಪಿಯಾದ ವಿಷ್ಣುವಿಗಿಂತ ರುದ್ರನು ( ಶಿವನು ) ಶ್ರೇಷ್ಠನೆಂದು ವೇದಗಳು ಸಾರುತ್ತವೆ. ವೇದಗಳು ಸ್ವತಃ ಸಾವಿರ ಸಾರೆ ಈ ಪರಮೇಶ್ವರನಿಗೆ ನಮಸ್ಕಾರ ಮಾಡುತ್ತವೆ. ಆದ್ದರಿಂದ ಶಿವನಲ್ಲಿ ಅನನ್ಯವಾದ ಭಕ್ತಿ

+ಟಿಪ್ಪಣಿ—“ಯಶ್ಚ ಮತ್ಸರುಣಾಪಾತ್ರಂ ಚರಮಂಜನ್ಮಯಸ್ಯವೈ।
ತಸ್ಯೈವಜಾಯತೆ ಭಕ್ತಿರ್ಮಮಲಿಂಗಸ್ಯಧಾರಣೆ”॥
(ವೀರಶೈವಧರ್ಮ ಶಿರೋಮಣಿ.)

+ಟಿಪ್ಪಣಿ—“ಧ್ಯಾಯಮಾನಶ್ಶಿವಂನಿತ್ಯಂ ಶಿವಸಾಯುಜ್ಯಮಾಪ್ನುಯಾತ್। ಯೇಸಂಪ್ರಾಪ್ತಾ ಪರಂಸ್ಥಾನಂ ಧ್ಯಾನಯೋಗರತಾನರಾಃ । ತೇಷಾಂ ನಪುನರಾವೃತ್ತಿ ಘೋರಸಂಸಾರಸಾಗರೆ”॥ (ಸವ್ಯಾಖ್ಯಾ ಪಂಚಶ್ಲೋಕಿ.)
“ಸರ್ವಾತ್ಮಕೋಪಿ ಭಗವಾನ್ ಲಿಂಗರೂಪೀಸದಾಶಿವಃ।
ಪೂಜನೀಯಃ ಪ್ರತಿಯತ್ನೇನ ಮುನೆಸ್ವರ್ಗಾಪವರ್ಗದಃ॥
ಧ್ಯಾತವ್ಯಃ ಪೂಜನೀಯಶ್ಚ ಲಿಂಗರೂಪೀಸದಾಶಿವಃ।”
(ಶಿವರಹಸ್ಯ.)

ಯೇ ಸರ್ವ ಲೋಕಕ್ಕೆ ಮೋಕ್ಷವನ್ನು ಕೊಡಲು ಹೇತುವಾಗಿದೆ. + ಮಾಯೆಯ ನಾಶವೇ ಮುಕ್ತಿಯು. ಅಲ್ಲಮಪ್ರಭುವಿನ ವಿನಾ ಈ ಮಾಯೆಯನ್ನು ಮತ್ಯಾರು ಗೆಲ್ಲುವರು? ಸರ್ವ ದೇವತೆಗಳು ಪ್ರಭುವನ್ನು ಉಪಾಸನೆ ಮಾಡಿ ಲಿಂಗದಲ್ಲಿ ಐಕ್ಯವಾಗುವ ಶ್ರೇಷ್ಠವಾದ ಪದವಿಯನ್ನು ಪಡೆದಿರುವರು. ವಿಷ್ಣು ಬ್ರಹ್ಮ ಮೊದಲಾದವರು ತಮ್ಮ ಭಕ್ತರಿಗೆ ಬಲು ಹೆಚ್ಚು ಕೊಟ್ಟರೆ ತಮ್ಮ ಪದ (ರಾಜ್ಯ) ವನ್ನು ಕೊಡಬಹುದು. ಆದರೆ ಶಿವನೊಳು ಐಕ್ಯವಾಗುವ ಸುಖವನ್ನು (ಲಿಂಗೈಕ್ಯವನ್ನು) ಅವರು ಎಂದೂ ಕೊಡಲಾರರು. + ವಿಷ್ಣು ಬ್ರಹ್ಮಾದಿ ದೇವತೆಗಳ ಭಕ್ತರು ತಮ್ಮ ಪುಣ್ಯ ಸಂಚಯವು ತೀರಿದ ಕೂಡಲೆ ಪುನಃ ಭವಸಾಗರದಲ್ಲಿ ಬೀಳುವರು. ಯಾರು ವಿಷ್ಣು ಬ್ರಹ್ಮಾದಿ ದೇವತೆಗಳು ಸಹ ಶಿವನ ಅಂಶದವರೆಂದು ಭಕ್ತಿಯಿಂದ ಅವರನ್ನು ಆರಾಧಿಸುವರೋ, ಅಂಥವರು ತಮ್ಮ ಉಪಾಸ್ಯ ದೇವತೆಗಳ ಲೋಕಗಳಾದ ಸತ್ಯಲೋಕ, ವೈಕುಂಠಲೋಕ ಮುಂತಾದ ಲೋಕಗಳಿಗೆ ಹೋಗಿ, ತಮ್ಮ ದೇವರ ಅನುಮತಿಯಿಂದ ಶಿವನನ್ನು ಆರಾಧಿಸಹತ್ತುವರು. ಲಿಂಗೈಕ್ಯ ಪದವಿಯನ್ನು ಅಪೇಕ್ಷಿಸುವ ಮನುಷ್ಯನು ಶಿವದೀಕ್ಷೆಯನ್ನು ಹೊಂದಿ ಶಿವನೊಳಗೆ ಅಭೇದವಾಗಿ ಕೂಡಿ ಶಿವನೇ ಆಗುವನು. ಇಂದ್ರಿಯ ನಿಗ್ರಹಿಗಳಾದ ಸಾತ್ವಿಕ ಗುಣವುಳ್ಳ ಕೆಲವರು ಶಾಸ್ತ್ರದ ಇಂಗಿತವರಿಯದೆ ವಿಷ್ಣ್ವಾದಿ ದೇವತೆಗಳ ಉಪಾಸನೆ ಮಾಡಿ ವೈಕುಂಠಾದಿ ಲೋಕಗಳಿಂದ ಮರಳಿ ಬಂದ

---

+ಟಿಪ್ಪಣಿ—"ವಿಷ್ಣುನಾಪಿಪರೇಣಾಪಿ ಮಹಾದೇವಂ ಘೃಣಾನಿಧಿಂ।
ವಿನಾಜಂತೂನ್ ಸಮುದ್ಧರ್ತುಂ ಶಕ್ಯತೆನಹಿಸತ್ತಮಾಃ॥"

(ಬ್ರಹ್ಮಗೀತೆ)

+ ವಿಷ್ಣುಬ್ರಹ್ಮಾದಿಗಳು ಭವಸಾಗರವನ್ನು ದಾಂಟಿಸಿ ಭಕ್ತರಿಗೆ ಮೋಕ್ಷವನ್ನೊದಗಿಸಿ ಕೊಡಲು ಅಸಮರ್ಥರೆಂಬುವದಕ್ಕೆ ಸೂತಸಂಹಿತಾ ಯಜ್ಞವೈಭವ ಖಂಡದಲ್ಲಿ ಸತ್ಯಸಂಭ ಮತ್ತು ವಿಷ್ಣು ಇವರ ಸಂವಾದವನ್ನು ಓದಬೇಕು.

"ನಾಹಂಸಂಸಾರಮಗ್ನಾನಾಂ ಸಾಕ್ಷಾತ್ಸಂಸಾರಮೋಚಕಃ।
ಬ್ರಹ್ಮಾದಿದೇವತಾಶ್ಚಾನ್ಯಾನ್ಯೈವ ಸಂಸಾರಮೋಚಕಃ॥
ಶಿವಏವಹಿಜಂತೂನಾಂ ಮಹಾಸಂಸಾರವರ್ತಿನಾಮ್।
ಸಂಸಾರಮೋಚಕಸ್ಸಾಕ್ಷಾತ್ಸರ್ವಜ್ಞಸ್ಸಾಂಬ ಈಶ್ವರಃ॥
ಮಹಾದೇವಂವಿನಾಯೋಮಾಂ ಭಜತೆಶ್ರದ್ಧಯಾಸಹ।
ನಾಸ್ತಿತಸ್ಯವಿನಿರ್ಮೋಕ್ಷೋ ಸಂಸಾರೋಜನ್ಮಕೋಟಿಭಿ॥"

ನಂತರ ಸಂಸ್ಕಾರವಶದಿಂದ ಶಿವನೊಬ್ಬನೆ ಉಪಾಸ್ಯದೇವನೆಂದು ತಿಳಿದುಕೊಳ್ಳು ವರು. ಮತ್ತು ಮುಂದಿನ ಜನ್ಮಗಳಲ್ಲಿ ವೀರಶೈವ ಮತದಲ್ಲಿ ವಿಶ್ವಾಸಾಭಿಮಾನಗ ಳನ್ನು ವಹಿಸಿದ ವೀರಶೈವರಲ್ಲಿ ಹುಟ್ಟಿ, ಶಿವಸಾಯುಜ್ಯ ( ಶಿವೈಕ್ಯ ) ಪದವಿಯನ್ನು ಹೊಂದುವರು. ಸರ್ವ ವೇದಾಂತದ ತಾತ್ಪರ್ಯವು ಹೀಗೆಯೆ ಇರುವದು.

ಸ್ವಭಾವತಃ ನಿಂದಾ ಜೀವಿಗಳಾಗಿ ಶಿವಮತ ಶಿವಭಕ್ತಿಗಳನ್ನು ದ್ವೇಷಿಸಿ ವಿಷ್ಣು ಮೊದಲಾದವರನ್ನು ದುರಾಗ್ರಹದಿಂದ ಪೂಜಿಸಿದವರನ್ನು ವಿಷ್ಣುವಾದರೂ ಅವರು ಶಿವದ್ರೋಹಿಗಳೆಂದು ತಿಳಿದು ಅವರ ಮೇಲೆ ಕೃಪೆ ಮಾಡುವದಿಲ್ಲ. × ಆದ್ದರಿಂದ ವಿಷ್ಣುಭಕ್ತ ಮೊದಲಾದವರು ಶಿವದ್ರೋಹಿಗಳಾದರೆ ಅಂಧಕೂಪ ನರಕ ದಲ್ಲಿ ಬೀಳುವರು. ಈ ಮಾತಿನಲ್ಲಿ ಏನೂ ಸಂದೇಹವಿಲ್ಲ. ಪುರಾಣದ ಕೆಲವು ಭಾಗಗಳಲ್ಲಿ ವಿಷ್ಣು ಮೊದಲಾದವರು ಪ್ರಸಿದ್ಧರಿರುವದಾಗಿ ವರ್ಣಿಸಲ್ಪಟ್ಟದೆ, ಆದ ರೆ ಅವರ ಈ ಶ್ರೇಷ್ಠತ್ವವು ಶಿವನ ಚರಣಕಮಲಗಳಲ್ಲಿ ಭಕ್ತಿಯನಿಟ್ಟದ್ದರಿಂದ ಪ್ರಾಪ್ತವಾಗಿದೆ. × ವಿಷ್ಣು ಮೊದಲಾದ ದೇವತೆಗಳು ಶಿವನ ಕೃಪೆಯಿಂದಲೇ ಮಹಾ ಬಲಿಷ್ಠರೆನಿಸಿರುವರು; ಯಾಕಂದರೆ, ಭಕ್ತರು ಭಕ್ತಿಯನ್ನು ವ್ಯಕ್ತಪಡಿ ಸಲು ಶಿವನು ಅವರಿಗೆ ಪ್ರಸನ್ನನಾಗಿ ಅವರ ಇಷ್ಟಾರ್ಥಗಳನ್ನು ಅನುಗ್ರಹಿಸುವ ನೆಂಬುವದು ಜಗತ್ಪ್ರಸಿದ್ಧವಾಗಿದೆ. ಶಿವನು ಜಗದೊಡೆಯನೂ ಆದರ ಮೂಲ ಕಾರ ಣನೂ ಆಗಿದ್ದಾನೆ. ತನ್ನ ಭಕ್ತರಲ್ಲಿ ಯಾರಾದರು ಉನ್ಮತ್ತರಾಗಲು, ಅವರನ್ನು ಚನ್ನಾಗಿ ಶಿಕ್ಷಿಸಿ ಹಾದಿಗೆ ತಂದು ಅವರಿಗೆ ಸದುಪದೇಶ ಮಾಡುವದು ಅವನ ಕರ್ತ ವ್ಯವಾಗಿದೆ. ಆದ್ದರಿಂದ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಾತಿಶಯದಿಂಧ ಭಾಗ್ಯಶಾಲಿಗಳಾದ ಅನೇಕರು ಸರ್ವ ಕಾರಣಗಳಿಗೆ ಕಾರಣನಾದ ಸದಾಶಿವನೆಂಬ ಮಹೇಶ್ವರನನ್ನು ಪೂಜಿಸುತ್ತಾರೆ. ಕೆಲವರು ವಿಷ್ಣ್ವಾದಿ ದೇವತೆಗಳು ಶಿವಭಕ್ತ ರೆಂದು ಅವರನ್ನು ಪೂಜಿಸುವರು. ಶಿವನು ಸರ್ವತ್ರ ಪರಿಪೂರ್ಣವಾಗಿ ವ್ಯಾಪಿಸಿ

---

+ ಲೋಕದಲ್ಲಿ ಯಾವನು “ಓಂ ನಮೊ ವಾಸುದೇವಾಯ ಶಿವಶಾಸ್ತ್ರಾವತಾರಿ ಣೆ ಶಿವಲಿಂಗಾರ್ಚನವ್ಯಗ್ರಚೇತಸೆ ಶಿವಜನ್ಮನೆ” ಎಂದು ಶಿವಭಕ್ತನಾದ ನನ್ನನ್ನು ನುತಿಸಿ ಪೂಜಿಸುತ್ತಾನೊ ಅವನಿಗೆ ನಾನು ಸುಲಭವಾಗಿ ಪ್ರತ್ಯಕ್ಷನಾಗುವೆನು- ಎಂದು ವಾಮನ ಪುರಾಣದಲ್ಲಿ ವಿಷ್ಣುವು ನುಡಿದಿರುವನು.

+ “ಅಹಂಬ್ರಹ್ಮಾದಿದೇವಾಶ್ಚ ಪ್ರಸಾದಾತಸ್ಯಶೂಲಿನಃ।
ಪ್ರಣಾಡ್ಯೈವಹಿ ಸಂಸಾರಮೋಚಕಾನಾತ್ರಸಂಶಯಃ”॥(ಸೂತಸಂಹಿತೆ)

ಕೊಂಡಿರುವನೆಂದು ಸಮಾಧಿಯೋಗದಿಂದ ತಿಳಿದು ಮತ್ತೆ ಕೆಲವರು ವಿಷ್ಣು ಮುಂಖಾದವರಿಗೆ ಮಾಡಿದ ಪೂಜೆಯನ್ನು ಶಿವನಿಗೆ ಅರ್ಪಿಸುವರು.

ಉತ್ತಮ ಸ್ವಭಾವದವರೂ ಸುಕೃತ ಜೀವಿಗಳೂ ಆದವರಲ್ಲಿ ಶಿವನ ವಿಷಯವಾಗಿ ಭಕ್ತಿಯು ಜನಿಸುವದು. ಮಧ್ಯಮ ಸ್ವಭಾವದವರಲ್ಲಿ ಶಿವನ ಅಂಶಭವರಾದ ವಿಷ್ಣು ಮೊದಲಾದ ದೇವತೆಗಳ ಮೇಲೆ ವಿಶ್ವಾಸವು ಅಂಕುರಿಸುವದು. ನೀಚ ಸ್ವಭಾವದ ಜನರಲ್ಲಿ ಅವರ ದುಷ್ಕರ್ಮದ ಮೂಲಕ ಕ್ಷುದ್ರ ದೇವತಾರಾಧನೆಯಲ್ಲಿ ಮನಸ್ಸುಂಟಾಗುವದು. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬದಾಗಿ ನಾಲ್ಕು ವರ್ಣಗಳೂ, ಬ್ರಹ್ಮಚಾರೀ-ಗೃಹಸ್ಥ-ವಾನಪ್ರಸ್ಥ-ಸನ್ಯಾಸಗಳೆಂಬ ನಾಲ್ಕು ಆಶ್ರಮಗಳೂ ಶಿವಾಜ್ಞೆಯ ಮೇರೆಗೆ ವೇದದಲ್ಲಿ ವರ್ಣಿಸಲ್ಪಟ್ಟವೆ. ಇವೆಲ್ಲ ಪ್ರಾಕೃತ ಧರ್ಮಗಳು ಅಂದರೆ, ಈ ವರ್ಣಾಶ್ರಮಗಳಲ್ಲಿದ್ದು ಜನಿಸತಕ್ಕವರು ತಮ್ಮ ದೇಹದಲ್ಲಿ ತಾದಾತ್ಮ್ಯಮತಿಯನ್ನಿಟ್ಟು ಕರ್ಮಗಳನ್ನು ಫಲಾಪೇಕ್ಷೆಯಿಂದ ಮಾಡುವರು. ದೇಹದ ಗುಣಗಳನ್ನು ಹಿಡಿದು ವರ್ತಿಸುವವರು ಪ್ರಾಕೃತರು. + ಮಹೇಶ್ವರನ ಆಜ್ಞೆಯು ಶ್ರುತಿಯೆನಿಸುವದು. ಆತನು ಸರ್ವ ಕರ್ಮಜಾಲಗಳನ್ನು ಮಂದಮತಿಗಳ ಚಿತ್ತಶುದ್ಧಿಗಾಗಿ ನಿರ್ಮಿಸಿರುವನು. ಮತ್ತು ಭಕ್ತಿ ವೈರಾಗ್ಯ ಲಕ್ಷಣವುಳ್ಳ ಪಾಪ ಪುಣ್ಯಗಳ ಲೇಪವಿಲ್ಲದ ಶಿವದೀಕ್ಷೆಯನ್ನು ಆತನೇ ಪರಿಪಕ್ವಮಲರಾದ ಮತ್ತು ಶಿವಭಕ್ತಿಪರರಾದ ಮುಮುಕ್ಷು ಸಮುದಾಯಕ್ಕೆ ಒದಗಿಸಿ ಕೊಟ್ಟಿರುವನು. ಶಿವಧ

---

+ ಟಿಪ್ಪಣಿ—"ವೀರಶೈವರು ಅಪ್ರಾಕೃತರು. ವೀರಶೈವೇತರರು ಪ್ರಾಕೃತರು ಇದನ್ನರಿಯದೆ ಅಸ್ಪಷ್ಟಮತಿಗಳಾದ ಕೆಲವರು ಅಸಹ್ಯಾರ್ಥಗಳನ್ನು ಕಲ್ಪಿಸಿರುವರು. ಬ್ರಹ್ಮನ ಸೃಷ್ಟಿಯಿಂದ ಉತ್ಪನ್ನರಾದವರು ಪ್ರಾಕೃತರೆಂತಲೂ ಶಿವನ ಸೃಷ್ಟಿಯಿಂದ ಉದಯಿಸಿದವರು ಅಪ್ರಾಕೃತರೆಂತಲೂ ಹೇಳುವರು; ಇದು ಸರ್ವಥಾ ತಪ್ಪು. ಸೃಷ್ಟಿಯು ಮೂಲದಲ್ಲಿ ಇಬ್ಬರಿಗೂ ಒಂದೇ ಇರುತ್ತದೆ. ಸಾತ್ವಿಕ-ರಾಜಸ-ತಾಮಸವೆಂಬ ಗುಣತ್ರಯಗಳು ಪ್ರಕೃತಿಯನ್ನು ಆವರಿಸಿರುವವು. ಇಂತಹ ಪ್ರಕೃತಿ ಗುಣಗಳನ್ನು ಮೀರಿದವನು ಅಪ್ರಾಕೃತನು ದೇಹದ ಗುಣಗಳನ್ನು ಹಿಡಿದು ವರ್ತಿಸುವವನು ಪ್ರಾಕೃತನು. ಶಿವದೀಕ್ಷೆಯಿಂದ ಪ್ರಕೃತಿ ಗುಣಗಳು ಅಳಿದು ಹೋಗುತ್ತವೆ. ಗುರುವಿನ ಕರುಣಾಕಟಾಕ್ಷವೇ ವೀರಶೈವರಿಗೆ ಅಪ್ರಾಕೃತ ಸೃಷ್ಟಿಯು. ವೀರಶೈವನು ಉಳಿದ ಪ್ರಾಕೃತ ಜೀವಿಗಳಂತೆ ಜಡವಾದ ಅನ್ನಪಾನಾದಿಗಳನ್ನು ಸೇವಿಸದೆ ಅವುಗಳನ್ನು ಲಿಂಗಾರ್ಪಿತ ಮಾಡಿ ಅವುಗಳ ಪೂರ್ವಭಾವವನ್ನು ಕಳೆದು ಪ್ರಸಾದ ಪಾದೋದಕಗಳಾಗಿ ಸೇವಿಸುವದರಿಂದ ಆತನು ಪ್ರಾಕೃತನಲ್ಲ

( ಪಾವಟೇಶಿದ ರಾಮಪ್ಪನವರ ಅಭಿಪ್ರಾಯದ ಸಾರಾಂಶ. )

ಕ್ತಿಯು ಜನನ ಮರಣ ರೂಪವಾದ ಸಂಸಾರ ಪಾಶವನ್ನು ಛೇದಿಸಲು ಸಮರ್ಥವಾಗಿ ಭಕ್ತನಿಗೆ ಮುಕ್ತಿಯನ್ನು ಕೊಡುವಂಥಾದ್ದಿರುವದರಿಂದ, ಆತನಿಗೆ ಲಿಂಗನಿಷ್ಠೆಗೆ ವಿರೋಧವಾದ ಬ್ರಾಹ್ಮಣ ಕುಲಾಲಾದಿ ಜಾತಿಧರ್ಮಗಳಿಲ್ಲ. ಶಿವಭಕ್ತನು ಕರ್ಮಕಾಂಡೋಕ್ತವಾದ ಯಜ್ಞಾದಿ ಕರ್ಮಗಳನ್ನು ಬಿಡಬೇಕೆಂಬದಾಗಿ ಶಿವಾಜ್ಞೆಯಿರುವದರಿಂದ ಅದನ್ನು ಯಾರೂ ಉಲ್ಲಂಘಿಸಲು ಶಕ್ತರಲ್ಲ. ಆದ್ದರಿಂದ ವೈರಾಗ್ಯಶೀಲನಾದ ಶಿವದೀಕ್ಷಾ ಸಂಪನ್ನನಾದವನು ಯಾಗಾದಿ ಕರ್ಮಗಳನ್ನು ತ್ಯಜಿಸಿ ಶಿವಭಕ್ತಿಯನ್ನಾಚರಿಸಬೇಕು; ಯಾಕಂದರೆ ಕರ್ಮಕಾಂಡಕ್ಕೆ ಮಿಗಿಲಾಗಿ ಶಿವಭಕ್ತಿ ಮಾರ್ಗವಿರುತ್ತದೆ. ಶಿವಭಕ್ತಿ ಸಂಪನ್ನನಿಗೆ ವೀರಶೈವದೀಕ್ಷೆ–ಲಿಂಗಧಾರಣ ದೀಕ್ಷೆ ಯಾದರೆ ಅವನಿಗೆ ವೀರಶೈವನೆಂದು ಕರೆಯುವರು. ಇಂತಹ ವೀರಶೈವನು ತನ್ನ ಶಿವಪೂಜಾ ಶಿವಜ್ಞಾನ ಮುಂತಾದ್ದರ ಸಾಮರ್ಥ್ಯದಿಂದ ಶಿವಸಾಯುಜ್ಯ ಪದವಿಯನ್ನು ಪಡೆಯಬೇಕಾದುದರಿಂದ ಮತ್ತು ಒಂದೇ ಜನ್ಮದಲ್ಲಿ ಆತನಿಗೆ ಮುಕ್ತಿಯುಂಟಾಗುವ ಕಾರಣ ಬ್ರಾಹ್ಮಣಾದಿ ವರ್ಣಾಶ್ರಮನಿರತರು ಮಾಡುವ ಯಜ್ಞಶ್ರಾದ್ಧಾದಿ ಕರ್ಮಗಳನ್ನು ಆತನು ಎಂದೂ ಮಾಡುವದಿಲ್ಲ.

ನಾಲ್ಕುವರ್ಣಗಳಲ್ಲಿ ಬ್ರಾಹ್ಮಣರು ಶ್ರೇಷ್ಠರಿರುವರಂತೆ, ವಿಷ್ಣ್ವಾದಿದೇವತೆಗಳಲ್ಲಿ ಶಿವನು ಶ್ರೇಷ್ಠನಿರುತ್ತಾನೆ. ಮತ್ತು ದೇವತೆಗಳಲ್ಲಿ ಆತನೇ ಬ್ರಾಹ್ಮಣನೆನಿಸಿಕೊಳ್ಳುತ್ತಾನೆ. ಆದ್ದರಿಂದ ಬ್ರಾಹ್ಮಣರಾದವರು ಶಿವನೊಬ್ಬನನ್ನೇ ಆರಾಧಿಸಬೇಕು. + ಜಾತಿಯಿಂದ ಮತ್ತು ಗುಣಗಳಿಂದ ಹೀಗೆ ಎರಡು ಬಗೆಯಿಂದ ಬ್ರಾಹ್ಮಣ್ಯವನ್ನು ನಿಶ್ಚಯಿಸತಕ್ಕದ್ದು. ದೇವರಲ್ಲಿ ಬ್ರಾಹ್ಮಣನಾದ ಶಿವನನ್ನು ಮಾತ್ರ ಪೂಜಿಸತಕ್ಕವರು ಬ್ರಾಹ್ಮಣರು. ಬ್ರಾಹ್ಮಣ ವಂಶದಲ್ಲಿ ಹುಟ್ಟಿ ಶಿವಭಕ್ತಿವಿರಹಿತನಾಗಿದ್ದರೆ ಅಂಥವನು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೇನೇ ಬ್ರಾಹ್ಮಣನೆಂತ ಅನ್ನಲಾಗದು. ಇಂಥವನು ಶಿವನಿಗೆ ಮಾನ್ಯನಲ್ಲ. ಯಥಾವಿಧಿ ಯಜ್ಞಾದಿಕರ್ಮಗಳನ್ನು ಮಾಡುವ ಬ್ರಾಹ್ಮಣನು ಪಿತೃಲೋಕಕ್ಕೆ ಹೋಗುವನು; ಶಿವಭಕ್ತರ ಕುಲದಲ್ಲಿ ಹುಟ್ಟಿ ಶಿವನನ್ನು ಬಿಟ್ಟು ಅನ್ಯದೇವತಾ ಭಜನೆಯಲ್ಲಿ ಆಸಕ್ತನಾದವನು ತನ್ನ ಪೂಜ್ಯದೇವತೆಯ ಲೋಕಕ್ಕೆ ಗಮಿಸುವನು. ಕರ್ಮಸಂಚಯವು ತೀರಿದನಂತರ

---

+ ಬ್ರಾಹ್ಮಣಃ ಕಥ್ಯತೇರುದ್ರಃ ಕ್ಷತ್ರಿಯಃ ಕಮಲೇಕ್ಷಣಃ।
ವೈಶ್ಯಃಕಮಲಜಾತಸ್ತು ಶೂದ್ರಸ್ಸ್ಯಾತ್ಪಾಕಶಾಸನಃ॥

ಇವರಿಬ್ಬರು ಪುನಃ ಭೂಮಿಯಲ್ಲಿ ಹುಟ್ಟುತ್ತ ಸಾಯುತ್ತ ತಿರುಗುವರು. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ ಶಿವಭಕ್ತಿಯಲ್ಲಿಯೂ ಶಿವಧರ್ಮ ಮಾರ್ಗದಲ್ಲಿಯೂ ನಿಷ್ಠಾಗರಿಷ್ಠನಾದ ಬ್ರಾಹ್ಮಣನು ಮೋಕ್ಷಪದವನ್ನು ಹೊಂದುವನು. ಉಳಿದ ಕ್ಷತ್ರಿಯ ವೈಶ್ಯ ಶೂದ್ರ ಜಾತಿಯವರು ಕೂಡ ಶಿವಭಕ್ತಿಯಲ್ಲಿ ಪರಿಪೂರ್ಣರಾಗಿದ್ದರೆ, ಅವರು ಸಹ ಬ್ರಾಹ್ಮಣ್ಯವನ್ನು ಹೊಂದಿ ಮುಕ್ತರಾಗುವರು. ಯಾವ ಜಾತಿಯವನಾದರೂ ಆಗಲಿ ಅವನು ಅನನ್ಯವಾಗಿ ಶಿವಭಕ್ತಿಯನ್ನಾಚರಿಸುತ್ತಿದ್ದರೆ ಅಂಥವರಲ್ಲಿ ಜಾತ್ಯಾದಿ

---

ಬ್ರಾಹ್ಮಣಸ್ಯ ಶಿವೋದೇವಃ ಕ್ಷತ್ರಿಯಸ್ಯ ಜನಾರ್ದನಃ।
ವೈಶ್ಯಸ್ಯ ಭಾಸ್ಕರೋದೇವ ಶೂದ್ರಾಣಾಂ ಸರ್ವದೇವತಾಃ॥
(ವಾತುಲಾಗಮ)

" ತ್ವಂದೇವೇಷು ಬ್ರಾಹ್ಮಣೋಸ್ಯಹಂ ಮನುಷ್ಯೇಷು ಬ್ರಾಹ್ಮಣಃ।
ಬ್ರಾಹ್ಮಣೋವೈ ಬ್ರಾಹ್ಮಣಮುಪ ಧಾವತ್ಯುಪದಾವಾಮಿ॥
(ಸಾಮವೇದ)

" ತತೋವಿಪ್ರಸ್ಯ ಸಂಬಂಧಶ್ಶಿವಸ್ಯೈವಹಿಯುಚ್ಯತೆ।
ಸಂಕರಾಸ್ಸರ್ವ ದೇವಾಶ್ಚ ವೃಸಲಸ್ತು ಪುರಂದರಃ॥
ಪಿತಾಮಹಸ್ತು ವೈಶ್ಯಸ್ಸ್ಯಾತ್ ಕ್ಷತ್ರಿಯಃ ಪರಮೋ ಹರಿಃ।
ಬ್ರಾಹ್ಮಣೋ ಭಗವಾನ್ರುದ್ರ ಸರ್ವೆಷಾಮುತ್ತಮೋತ್ತಮಃ॥
ಬ್ರಾಹ್ಮಣೋವೈ ಸದಾಲೋಕೆ ಬ್ರಾಹ್ಮಣಂಚೋಪಧಾವತಿ।
ಮಹಾಬ್ರಾಹ್ಮಣಮೀಶಾನ ಮುಪಧಾವೇನಚೇತರಃ॥
(ಈ ಉಪಬೃಹ್ಮಣ ವಚನವು ಪರಾಶರ ಪುರಾಣದಲ್ಲಿ ಅದೆ.)

ಹೀಗೆ ಶಿವನೊರ್ವನನ್ನೇ ಅನನ್ಯಭಾವದಿಂದ ಪೂಜಿಸುವ ವೀರಶೈವರಿಗೆ ಮಾತ್ರ ಬ್ರಾಹ್ಮಣ್ಯವು ಸಲ್ಲುವದೆಂಬದಾಗಿ ಶಾಸ್ತ್ರವಚನಗಳು ಹೇರಳವಾಗಿದ್ದರೂ ಅಂತಹ ಬ್ರಾಹ್ಮಣ್ಯವು ರೂಢಿಯಲ್ಲಿ ಕರ್ಮಕಾಂಡೋಕ್ತ ಮಾರ್ಗದರ್ಶಕವಾದುದರಿಂದ, ಅದಕ್ಕೂ ಮಿಗಿಲಾದ ಶಿವಭಕ್ತಮಾರ್ಗಾನುಯಾಯಿಗಳಾದ ನಮ್ಮ ಪೂರ್ವಜರು ಇಂತಹ ಬ್ರಾಹ್ಮಣ್ಯವು ವೀರಶೈವರಿಗೆ ನಿಂದಾಸ್ಪದವಾದ ನುಡಿಯೆಂದು ಅದನ್ನು ನಿರಾಕರಿಸಿರುತ್ತಾರೆ.

ಜಾತಿಯೊಳು ಬೊಮ್ಮನಶಿರವಹಂ। ದಾತತಪ್ಪುಮಥೇಂದ್ರವಂಶನ। ನೇತ
ಕೆಂಸಂ ಬ್ರಹ್ಮವಂಶಜನೆಂದು ಭಾವಿಸುವೆ॥ ಜಾತಿಗೋತ್ರಾತೀತಸದ್ಗುರು।
ಜಾತನಂ ಬಹುಜಾತಿಗೋತ್ರಸ। ಮೇತದುಷ್ಕ್ರಿಯದಾಶ್ರಯನ ನೀನೆಂತು
ಮಾಡಿದಪೆ॥

ದೋಷಗಳನ್ನೆಣಿಸಕೂಡದು. ಭಕ್ತರ ಹಿಂದಿನ ಜಾತಿಗಳನ್ನು ಎತ್ತಿ ಆಡಿದರೆ ಅಥವಾ ಕೇಳಿದರೆ, ಆ ಮನುಷ್ಯನು ಪಾಪಿಷ್ಠರಲ್ಲಿ ಶ್ರೇಷ್ಠನೆನಿಸಿಕೊಳ್ಳುವನು. ಅಂದರೆ ಶಿವಭಕ್ತರಲ್ಲಿ ಜಾತಿ ಕುಲ ಮುಂತಾದವುಗಳನ್ನು ಹುಡುಕುವವನು ಅತ್ಯಂತ ಪಾತಕಿಯೆಂದು ಹೇಳಬೇಕು. ಚಾಂಡಾಲ ಜಾತಿಯವನಿದ್ದಾಗ್ಯೂ ಶಿವಭಕ್ತನಾದಲ್ಲಿ ಅವನು, ಜಾತಿಯಿಂದ ಬ್ರಾಹ್ಮಣನಾದರೂ ಶಿವಭಕ್ತಿಯಿಲ್ಲದಿದ್ದ ಬ್ರಾಹ್ಮಣನಿಗಿಂತ ಅಧಿಕನು. ಶಿವಭಕ್ತಿಯುಕ್ತ ಚಾಂಡಲನು ಬ್ರಾಹ್ಮಣನೆನಿಸುವನು. ಶಿವಭಕ್ತಿಯಿಲ್ಲದ ಬ್ರಾಹ್ಮಣನು ಚಾಂಡಾಲಿಗೆ ಸಮಾನನಾಗುವನು. ಶಿವಭಕ್ತಿಯುಳ್ಳಾತನು ಸಾಕ್ಷಾತ್ ಶಿವನೇ ಆಗುವನು. ಅವನು ಉಳಿದವರಿಂದ ಪೂಜ್ಯನೂ ಅಧಿಕನೂ ಇರುತ್ತಾನೆ. * ಯಾನಾದರೊಬ್ಬನು ಮನುಷ್ಯ ಜನ್ಮಕ್ಕೆ ಬಂದು ಶಿವದೀಕ್ಷೆ

---

'ತೋರಪಟ್ಟಬ್ರಾಹ್ಮ್ಯಮೆಂಬುದು । ಬೇರೆದರ್ಶನ ವೀರಭಕ್ತಿಯು । ಬೇರೆಯಿಂಶಿವನೆರಡುಮಂ ನೀಕೂಡಿನುಡಿಯದಿರು ॥'

'ತೊಳಸದಿರು ಬ್ರಾಹ್ಮ್ಯವನುಭಕ್ತಿ। ಸ್ಥಳಕೆಬೇರೆಯ ಮಾರ್ಗಮಪ್ಪುದು ॥'

ಹೀಗೆ ವೀರಶೈವ ಶಬ್ದದೊಡನೆ ಬ್ರಾಹ್ಮಣ್ಯವನ್ನು ಉಪಯೋಗಿಸಕೂಡದೆಂದು ಸ್ಪಷ್ಟವಾದ ಉಕ್ತಿಗಳಿರಲು, ಅವನ್ನು ಮರೆತು ನಮ್ಮಲ್ಲಿಯ ಕೆಲವು ಮುಂದಾಳುಗಳು ಇತ್ತಲಾಗಿ ಜನಗಣತಿಯಲ್ಲಿ (Census-ಖಾನೆಸುಮಾರಿಯಲ್ಲಿ) ವೀರಶೈವ-ವೀರಮಾಹೇಶ್ವರ-ಲಿಂಗಾಂಗಿ-ಲಿಂಗಾಯತ-ಲಿಂಗವಂತ ಮುಂತಾದ ಸಾರ್ಥಕವಾದ ಮತ್ತು ಶ್ರೇಷ್ಠವಾದ ಹೆಸರುಗಳನ್ನು ಬಿಟ್ಟು, ಅಸಂಗತವಾದ ಕರ್ಮಬದ್ಧವಾದ ಬ್ರಾಹ್ಮಣ್ಯಕ್ಕೆ ಮೋಹಿಸಿ ತಾವು ವೀರಶೈವ ಬ್ರಾಹ್ಮಣರೆಂದು ಸರಕಾರದ ಜನಗಣತಿಯಲ್ಲಿ ಕಾಣಿಸಿಕೊಳ್ಳಲಿಕ್ಕೆ ಆಗ್ರಹಪೂರ್ವಕವಾಗಿ ಬರೆದುಕೊಳ್ಳುತ್ತಾರೆ.

* ಶಿವಭಕ್ತಿಯುತೋಮರ್ತ್ಯಃ ಚಂಡಾಲಃ ಪುಲ್ಕಸೋಽಪಿವಾ।
ನಾರೀನರೋವಾಷಂಡೋವಾ ಸದ್ಯೋಮುಚ್ಯೇತಸಂಸೃತೇಃ।
ಮಮಭಕ್ತೋಯದಿಭವೇತ್ಸರ್ವಸ್ಮಾದಧಿಕೋಹಿಸಃ॥

(ಸ್ಕಾಂದಪುರಾಣ)

"ಯಸ್ಯಾಸ್ತಿಭಕ್ತಿರೀಶಾನಿ ವೀರಶೈವಮತಾಶ್ರಯಾ।
ಭಕ್ತಿಮಾತ್ರಪವಿತ್ರಾಹಿ ಸರ್ವಏವಾಧಿಕಾರಿಣಃ॥
ಸರ್ವೇಪಿವೀರಾ ದೇವೇಶಿತುರ್ಯಾಃ ಪರಿಕೀರ್ತಿತಃ॥"

(ಪಾರಮೇಶ್ವರಾಗಮ)

\+ ಅಷ್ಟಾದಶಾನಾಂ ವರ್ಣಾನಾಂ ಶ್ರೇಷ್ಠೋಮಾಹೇಶ್ವರೋಜನಃ।
ಪೂತಸ್ತದೀಯದೇಶೋಪಿ ಕಿಂಪುನಸ್ತಸ್ಯಬಾಂಧವಾಃ॥

(ಶಿವರಹಸ್ಯ)

"ಮಲ್ಲಿಂಗಧಾರಿಣೋಲೋಕೆ ದೇಶಿಕಾಮತ್ಪರಾಯಣಾಃ।
ಮದೇಕಶರಣಾಸ್ತೇಷಾಂ ಸಮೋನ್ಯೈವಾನ್ಯಜಾತಿಷು॥"

(ಕಾಮಿಕಾಗಮ)

ಯುನ್ನು ಪಡೆಯುದಿದ್ದರೆ ಆತನು ಶಿವಾಪರಾಧಿಯೆನಿಸುವನು; ಮತ್ತು ಸತ್ತ ಬಳಿಕ ನೀಚ ಯೋನಿಯಲ್ಲಿ ಜನಿಸುವನು. ಶೈವಮತಾವಲಂಬಿಗಳು ಶಿವನನ್ನೇ ನಿಷ್ಠೆಯಿಂದ ಭಜಿಸುವರು. ಈ ಶಿವಭಕ್ತರಿಗೆ ವಿಶೇಷ ಪ್ರಕಾರದ ದೀಕ್ಷೆ ಅಂದರೆ ಲಿಂಗಧಾರಣ ದೀಕ್ಷೆಯಾದ ಕೂಡಲೇ ಅವರು ವೀರಶೈವರೆಂದು ಕರೆಯಲ್ಪಡುವರು. ಹದಿನೆಂಟು ಜಾತಿಯವರಿಗಿಂತ ಮಾಹೇಶ್ವರನು-ವೀರಶೈವನು ಶ್ರೇಷ್ಠನು. ಇಂತಹ ವೀರಶೈವರಿದ್ದ ದೇಶವು ಪವಿತ್ರವು. ಪ್ರಾಕೃತ ಧರ್ಮಾವಲಂಬಿಗಳಿಗೆ ಸಲ್ಲುವ ವರ್ಣಾಶ್ರಮ ಧರ್ಮಗಳು ವೀರಶೈವರಿಗೆ ಅಸಂಗತವಾಗುವವು. ಅವರು ಗುರುಕರಜಾತರಾದ್ದರಿಂದ ಪೂರ್ವದ ತಂದೆತಾಯಿಗಳ ಬಂಧುಬಳಗದವರ ಸಂಬಂಧವೇನೂ ಅವರಿಗೆ ಇರುವದಿಲ್ಲ. ಶಿವಕುಲವಲ್ಲದೆ ಅವರಿಗೆ ಬೇರೆ ಕುಲವಿಲ್ಲ. ಶಿವಭಕ್ತರೇ ಬಂಧುಗಳಲ್ಲದೆ ಬೇರೆ ಬಂಧುಗಳಿಲ್ಲ. ಶಿವಶಕ್ತಿಯರು ತಂದೆತಾಯಿಗಳಲ್ಲದೆ ಅವರಿಗೆ ಬೇರೆ ತಂದೆತಾಯಿಗಳಿಲ್ಲ. ಲಿಂಗಪೂಜಾದಿ ಕ್ರಿಯೆಗಳನ್ನು ಅವರು ಯಾವ ಫಲಾಪೇಕ್ಷೆಯಿಂದಲೂ ಮಾಡುವದಿಲ್ಲ; ಅವರು ಮಾಡುವ ಸರ್ವ ವ್ಯವಹಾರಗಳು ಗುರು-ಲಿಂಗ-ಜಂಗಮ ಸೇವೆಗಾಗಿ ಇರುವದರಿಂದ ಅವರಿಗೆ ಯಾವ ಪ್ರಕಾರದ ಬಂಧನವು ತಟ್ಟದು; ತುಚ್ಛವಾದ ಸ್ವರ್ಗಾದಿ ಭೋಗಗಳನ್ನು ತೃಣಪ್ರಾಯವಾಗಿ ಕಾಣುವರು; ದೇವಾದಿ ದೇವನಾದ ಮಹಾದೇವನನ್ನು ಬಿಟ್ಟು ಮಾಯಾಪಾಶದಲ್ಲಿ ಸಿಲುಕಿದ ವಿಷ್ಣು ಬ್ರಹ್ಮಾದಿಗಳನ್ನು ಅವರು ಎಂದೂ ಪೂಜಿಸರು; ಅವರ ಪದವಿಗಳಿಗೂ ಆಶೆಮಾಡರು. ಈ ವೀರಶೈವರಲ್ಲಿ ನಿರಾಭಾರ ದೀಕ್ಷೆಯನ್ನು ಹೊಂದಿ ವಿರಕ್ತಾಶ್ರಮಿಗಳಾಗಿ ಚರಿಸುವಂಥ ಷಟ್‌ಸ್ಥಳ ಜ್ಞಾನಸಂಪನ್ನರಾದವರು ಜಂಗಮರೆಂದೂ ಶಿವಯೋಗಿಗಳೆಂದೂ ಶಿವಾವಧೂತರೆಂದೂ ಆರೂಢರೆಂದೂ ಕರೆಯಲ್ಪಡುವರು. ಈ ನಿರಾಭಾರ ಜಂಗಮರು ಸರ್ವ ಜಗತ್ತನ್ನು ಪಾವನಮಾಡಲು ಸಮರ್ಥರಿರುವರು. ಯಾಕಂದರೆ ಇವರು ಶಿವನಲ್ಲದೆ ದೃಷ್ಟಪ್ರಪಂಚದಲ್ಲಿ ಬೇರೊಂದು ವಸ್ತುವಿಲ್ಲೆಂಬ ದೃಢತರವಾದ ಶಿವಜ್ಞಾನ ಬಲದಿಂದ ಅರಿತು, ಮಲತ್ರಯಂಗಳನ್ನು ನಾಶಗೊಳಿಸಿ ತಮ್ಮನ್ನಾಶ್ರಯಿಸಿದವರನ್ನು ಪಾಪರಹಿತರಾಗಿ ಮಾಡಿ ಕೇವಲ ಲೋಕೋದ್ಧಾರಕ್ಕಾಗಿ ಸಂಚರಿಸುವರು. ಯಾವನು ಈ ಜಗಜ್ಜಾಲವನ್ನು ಶಿವನೆಂದೇ ಭಾವಿಸುತ್ತಾನೋ ಆವನೇ ಶಿವಯೋಗಿಯು, ಅವನೇ ಜಂಗಮನು. ಸಂಸಾರವೆಂಬ ಅಜ್ಞಾನಾಂಧಃಕಾರವನ್ನು ಹೋಗಲಾಡಿಸಿದ ಜಂಗಮರು ಕಾಮಕ್ರೋಧಾದಿಗಳನ್ನು ಜಯಿಸಿ, ಬಂಗಾರವನ್ನೂ ಮಣ್ಣನ್ನೂ ಸಮವಾಗಿ ಭಾವಿಸುತ್ತ, ಶತ್ರು-ಮಿತ್ರರನ್ನು ಏಕಪ್ರಕಾರದಿಂದ ಕಾಣುತ್ತ ನಿಸ್ಪೃಹರಾಗಿಯೂ ನಿರಹಂಕಾರಿಗಳಾಗಿಯೂ ಇರುವರು. ಶಿವಜ್ಞಾನವು ಮತ್ತು ಶಿವಚಿಂತನೆಯು ಇವೆರಡೂ ಅತ್ಯಂತ ದುರ್ಲಭ್ಯಗಳಾಗಿವೆ. ಜಂಗಮರು ಇವೆರಡನ್ನು ಸಂ

ಪಾದಿಸಿರುವದರಿಂದ ಇಂಥವರ ಪಾದಧೂಳಿಯು ಯಾರ ಮನೆಯಲ್ಲಿ ಬೀಳುವದೋ ಅವರ ಮನೆಯು ಪಾವನವಾಗುವದು. ಈ ಶಿವಯೋಗಿಗಳ ದರ್ಶನದಿಂದ ಸಮಸ್ತ ಪಾಪಗಳು ನಾಶವಾಗಿ ಸರ್ವಸಿದ್ಧಿಗಳು ಲಭಿಸುವವು. ಅವರ ಸ್ಪರ್ಶನವು ಕೂಡ ಪುಣ್ಯಪ್ರದವಾಗಿದೆ. ಇಂತಹ ನಿರ್ಮಲರಾದ ಮತ್ತು ಜ್ಞಾನಾರೂಢ ಜಂಗಮರ ಪೂಜೆಯು ಮುಕ್ತಿದಾಯಕವಾಗಿದೆ. ಎಲೈ ಪಾರ್ವತಿಯೇ, ಈ ಕಾರಣದಿಂದಲೇ ಷಟ್‌ಸ್ಥಳ ಜ್ಞಾನಸಂಪನ್ನರಾದ ವೀರಶೈವರು ಶ್ರೇಷ್ಠರು. ಮೂರೂ ಲೋಕಗಳಲ್ಲಿ ಅವರಿಗೆ ಸಮಾನರು ಯಾರೂ ಇಲ್ಲ. ಇವರೇ ಸರ್ವರಿಂದ ವಂದ್ಯರೂಪೂಜ್ಯರೂ ಆಗಿರುತ್ತಾರೆ. + ಆದ್ದರಿಂದ ಅಲ್ಲಮಪ್ರಭುವಿನ ಪ್ರೀತಿಯು ವೀರಶೈವರ ಮೇಲೆ ವಿಶೇಷವದೆ.

ಪಾರ್ವತಿ—(ಪರಮೇಶ್ವರನು ಆಡಿದ ಮಾತನ್ನು ಕೇಳಿ ಆನಂದಭರಿತಳಾಗಿ ನಮ್ರಭಾವದಿಂದ ಎರಡೂ ಕೈಗಳನ್ನು ಜೋಡಿಸಿ ತನ್ನ ಪತಿಗೆ ನಮಸ್ಕಾರ ಮಾಡಿ) ಸ್ವಾಮಿ, ತನಗೂ ಶಿವನಿಗೂ ಭೇದವಿಲ್ಲೆಂದು ಭಾವಿಸುವ ವೀರಶೈವರು ತಾವು ಬ್ರಹ್ಮಸ್ವರೂಪಿಗಳೆಂದು ತಿಳಿದಬಳಿಕ ನಿನ್ನನ್ನು ಪೂಜಿಸುವರೋ ಅಥವಾ ಲಿಂಗಾರ್ಚನಾದಿ ಕ್ರಿಯಾಹೀನರಾಗಿ ಕೂಡ್ರುವರೋ? ಈ ನನ್ನ ಮನಸ್ಸಿನ ಸಂಶಯವು ದೂರಾಗುವಂತೆ ನನಗೆ ಭೋಧಿಸಬೇಕು.

ಪರಮೇಶ್ವರ—(ಜಗನ್ಮಾತೆಯಾದ ಪಾರ್ವತಿದೇವಿಯು ಜಗದ್ಧಿತಾರ್ಥವಾಗಿ ಈ ಪ್ರಶ್ನ ಮಾಡಿರುವಳೆಂದು ತಿಳಿದು) ಎಲೈ ಮಂಗಳಾಂಗಿಯೇ. ಸ್ವಧರ್ಮಶೀಲರಾದ ವೀರಶೈವರ ವರ್ತನ ಕ್ರಮವನ್ನು ಹೇಳುವನು ಕೇಳು—

+ "ಕ್ರಿಮಿಕೀಟಪತಂಗೇಭ್ಯಃ ಪಶವಃಪ್ರಜ್ಞಯಾಧಿಕಾಃ।
ಪಶುಭ್ಯೋಪಿನರಾಃ ಶ್ರೇಷ್ಠಾತೇಷು ಶ್ರೇಷ್ಠಾದ್ವಿಜಾತಯಃ॥
ದ್ವಿಜಾಷ್ವಧಿಕಾವಿಪ್ರಾ ವಿಪ್ರೇಷುಕ್ರತುಬುದ್ಧಯಃ।
ಕ್ರತುಬುದ್ಧಿಷುಕರ್ತಾರಸ್ತೇಭ್ಯಸ್ಸನ್ನ್ಯಾಸಿನೋಧಿಕಾಃ॥
ತೇಭ್ಯೋವಿಜ್ಞಾನಿನಃ ಶ್ರೇಷ್ಠಾಸ್ತೇಷು ಶಂಕರಪೂಜಕಾಃ।
ತ್ರೇಷುಶ್ರೇಷ್ಠಾ ಮಹಾಭಾಗ ಮಮಲಿಂಗಾಂಗಸಂಗಿನಃ॥
ಲಿಂಗಾಂಗಸಂಗಿಷ್ವಧಿಕಃ ಷಟ್‌ಸ್ಥಲಜ್ಞಾನವಾನ್ಭವೇತ್।
ತಸ್ಮಾದಪ್ಯಧಿಕೋನಾಸ್ತಿ ತ್ರಿಷುಲೋಕೇಷುಸರ್ವದಾ॥

(ಸ್ಕಾಂದಪುರಾಣಾಂತರ್ಗತ ಶಂಕರಸಂಹಿತೆಯಲ್ಲಿ)

ಮತ್ತು ಇದರ ಬಗ್ಗೆ ನಿಜಗುಣಶಿವಯೋಗಿಯ ವಿವೇಕಚಿಂತಾಮಣಿಯ ೩ನೇ ಪ್ರಕರಣದಲ್ಲಿ ನೋಡಬೇಕು.

"ವೀರಶೈವ ಮತದಲ್ಲಿ ಭಾವಾದ್ವೈತವೆಂದೂ ಕ್ರಿಯಾದ್ವೈತವೆಂದೂ ಎರಡು ಪ್ರಕಾರಗಳುಂಟು. 'ಅದ್ವೈತಭಾವಯೇಚ್ಛಾತ್ರೆ ಕ್ರಿಯಾಯಾಂದ್ವೈತಮಾಚ ಯೇತ್' + ಅಂದರೆ ಪಶುಪಕ್ಷಿ ಮೊದಲ್ಗೊಂಡು ಮನುಷ್ಯರು ಕಡೆಯಾಗಿ ಸರ್ವ ಪ್ರಾಣಿಗಳಲ್ಲಿ ಸಮಬುದ್ಧಿ ಇರಬೇಕಲ್ಲದೆ ಬಹಿರಂಗವಾಗಿ ಎಲ್ಲವೂ ಒಂದೇ ಎಂ ಬದಾಗಿ ತಿಳಿದು ಸಂಕರವಾಗುವಂತೆ ವರ್ತಿಸಲಾಗದು. ಪ್ರಾಪಂಚಿಕ ಫಲದಾಶೆ ಗಾಗಿ ಮಾಡತಕ್ಕ ಸರ್ವ ಬಾಹ್ಯಕರ್ಮಗಳನ್ನು ತ್ಯಜಿಸಿ ಶಿವೋಪಾಸನೆಯಲ್ಲಿ ಆ ಸಕ್ತನಾದ ವೀರಶೈವನು ಲಿಂಗಪೂಜಾದಿ ಸತ್ಕ್ರಿಯೆಗಳನ್ನು ದಿನಾಲು ತಪ್ಪದೆ ಮಾ ಡಬೇಕು. ದೃಢಮನಸ್ಕನಾಗಿ ತಾನು ಮಾಡತಕ್ಕ ಸರ್ವಕಾರ್ಯಗಳನ್ನು ಲಿಂಗಾ ರ್ಪಣ ಬುದ್ಧಿಯಿಂದ ಮಾಡುವದರಿಂದ ಅವನು ವೈರಾಗ್ಯಶೀಲನೆನಿಸುವನು. ತನು-ಮನ-ಧನಗಳಲ್ಲಿ ನಿರಾಶೆಯುಳ್ಳವನಾಗಿ ಅವುಗಳನ್ನು ಶಿವಕಾರ್ಯಕ್ಕಾಗಿ ವಿನಿಯೋ ಗಿಸುವನು. ಪಂಚೇಂದ್ರಿಯಂಗಳಿಂದಾಗುವ ಭ್ರಮವನ್ನಳಿದು ಮರಣಕ್ಕಂಜದೆ ಶಿವ ನಲ್ಲದೆ ಬೇರೆ ದೇವರಿಲ್ಲೆಂದು ನಿಶ್ಚಿಂತನಾದ ಜ್ಞಾನಿಯೇ ವೀರಶೈವನು. ಶಿವನೇ ಪರಬ್ರಹ್ಮನು. ಆತನ ಹೊರತು ಅಧಿಕರು ಯಾರು ಇಲ್ಲೆಂದು ಭಾವಿಸಿ, ಲಿಂಗೈಕ್ಯ ಸ್ಥಿತಿಯನ್ನು ಸಾಧಿಸುವದರಲ್ಲಿ ಮಗ್ನನಾದವನು ವೀರಮಾಹೇಶ್ವರನೆಂದೂ ವೀರ ಶೈವನೆಂದೂ ಕರೆಯಲ್ಪಡುವನು. ತನ್ನ ಮತಕ್ಕೆ ಗ್ಲಾನಿಯುಂಟಾದ ಸಂದರ್ಭದಲ್ಲಿ ಅದನ್ನು ಊರ್ಜಿತ ಸ್ಥಿತಿಗೆ ತರುವದಕ್ಕೋಸ್ಕರ, ಶ್ರುತ್ಯಾದಿ ಪ್ರಮಾಣಗಳಿಂದಲೂ ಯುಕ್ತಿಗಡಣದಿಂದಲೂ ಪರವಾದಿಗಳನ್ನು ಒಡಂಬಡಿಸಿ ಅದರ ಶ್ರೇಷ್ಠತ್ವವನ್ನು ಸಿದ್ಧಾಂತಗೊಳಿಸತಕ್ಕವನೇ ವೀರಶೈವನು. ಯಾವದೊಂದು ಫಲಾಪೇಕ್ಷೆಯಿಲ್ಲದೆ ನನ್ನನ್ನು ಪೂಜಿಸುತ್ತ ನಾನು ಕೊಟ್ಟರೂ ಸ್ವೀಕರಿಸದೆ ಇರತಕ್ಕವನೇ ವೀರಶೈವನು ಅವನೇ ಯೋಗಿಶ್ರೇಷ್ಠನು. ಪಾರ್ವತಿಯೇ! ಗುರುಮುಖದಿಂದ ಪ್ರಾಪ್ತವಾದ ಲಿಂ ಗಧಾರಣಾದಿ ವ್ರತಗಳನ್ನು ಪ್ರಾಣಾಂತ್ಯದಲ್ಲಿಯೂ ಬಿಡದೆ, ಇಷ್ಟಲಿಂಗದಲ್ಲಿ ಐಕ್ಯ ತೆಯನ್ನು ಪಡೆಯಲು ಬೇಕಾದ ಜ್ಞಾನಸಂಪನ್ನನೇ ವೀರಶೈವನು. ಅಂಗದಲ್ಲಿ ಸದಾ ಲಿಂಗಧಾರಿಯಾಗಿ ಇಷ್ಟ-ಪ್ರಾಣ-ಭಾವಲಿಂಗಗಳ ಏಕತ್ವಾನುಸಂಧಾನಿಯಾಗಿ ಮೆರೆಯುವಾತನೇ ವೀರಶೈವರಲ್ಲಿ ಅಗ್ರಗಣ್ಯನು. ಲಿಂಗಸನ್ನಿಹಿತನಾದ ಕಾರಣ ತಾನು ಶಿವಸ್ವರೂಪನೆಂದು ಭಕ್ತಿ ಜ್ಞಾನ ವೈರಾಗ್ಯಗಳಿಂದರಿತು, ಜಾತಿಸೂತಕ ಜನ ನಸೂತಕ ಪ್ರೇತಸೂತಕ ಉಚ್ಛಿಷ್ಟಸೂತಕ ರಜಾಸೂತಕವೆಂಬ ಪಂಚಸೂತಕಗಳಿ ಲ್ಲದಾತನಾಗಿ ಲಿಂಗಾಚಾರ ಸಂಪನ್ನನಾಗಿ ಮೆರೆಯುವಾತನೇ ವೀರಶೈವನು. ಶಿವೋ

+ ಟಿ.—"ಬಳಿಸದಿರದ್ವೈತವನು ಬಾಹ್ಯದಲ್ಲಿ ನಿನ್ನೊಳಗೇಕೋ ಭಾವ ನೆಯೊಡಗೂಡು" (ಕೈವಲ್ಯಪದ್ಧತಿ)

ದ್ದಿಶ್ಯವಾಗಿ ಮಾಡಿದ ಪಾಕವನ್ನು ಲಿಂಗಬಾಹಿರರಿಗೆ ತೋರಿಸದೆ ಮತ್ತು ಅಂತಹ ಪಾಕವನ್ನು ವೀರಶೈವೇತರರಿಗೆ ನೀಡದೆ ಶೋಭಿಸುವಾತನೇ ವೀರಶೈವನು. ಅನಾದಿ ಸಂಸಿದ್ಧವಾದ ಮತ್ತು ಶಿವನಿಂದ ಹೇಳಲ್ಪಟ್ಟ ವೀರಶೈವ ಮತವು ಪ್ರಮಥರ ಸಂಪ್ರದಾಯ ಶೀಲವಾದದ್ದೂ ಪ್ರಸಿದ್ಧವಾದದ್ದೂ ಇರುವದು ಆದ್ದರಿಂದ ಪ್ರೀಯಳೆ, ವೀರಶೈವರ ಆಚಾರವನ್ನು ವರ್ಣಿಸಲು ಯಾರಿಂದಲೂ ಆಗದು. ಸಾಕ್ಷಾತ್ ಬ್ರಹಸ್ಪತಿಯೂ ಬ್ರಹ್ಮನೂ ಅಥವಾ ವಿಷ್ಣುವೂ ಕೂಡ ಅದನ್ನು ಸಮಗ್ರವಾಗಿ ವರ್ಣಿಸಲು ಶಕ್ತರಲ್ಲ "

ಪಾರ್ವತಿ—( ಪುಲಕಾಂಕಿತ ಶರೀರಯಾಗಿ ಪುನಃ ಶಂಕರನನ್ನು ನೋಡಿ) ಸ್ವಾಮಿ, ಇನ್ನೊಂದು ಸಂಶಯವು ನನ್ನನ್ನು ಬಾಧಿಸುತ್ತದೆ, ಅದನ್ನು ಸಮಗ್ರವಾಗಿ ತಮ್ಮ ಸುಬೋಧದಿಂದ ಹೋಗಲಾಡಿಸಬೇಕು. ಅದೇನೆಂದರೆ—ಸತತ ಅಂಗದಲ್ಲಿ ಲಿಂಗವನ್ನು ಧರಿಸಿರುವ ವೀರಸೈವರು ಕಂಣಿಗೆ ಆಶಾಬದ್ಧರಂತೆ ಕಾಣುವರು. ತಾವು ಮಾತ್ರ ಅವರು ವಿರಕ್ತರೆಂದು ಹೇಳುವಿರಿ. ಇದು ಹ್ಯಾಗೆ? ಅವರಲ್ಲಿ ತನು-ಮನ-ಧನಗಳ ಮೇಲಿನ ಮಮತೆಯು ಹ್ಯಾಗೆ ಹೋಗುವದು?

ಪರಮೇಶ್ವರ— ವೀರಶೈವರ ಮಹಾತ್ಮ್ಯೆಯನ್ನು ಹೇಳುತ್ತೇನೆ. ಚಿತ್ತವಿಟ್ಟುಕೇಳು ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳಲ್ಲಿ ಸ್ವಾಭಾವಿಕವಾಗಿ ಇರುವ ಅನೇಕ ಪ್ರಕಾರದ ಕಲ್ಪನೆಗಳನ್ನು ವೇಧಾಕ್ರಿಯಾ ಮಂತ್ರಗಳೆಂಬ ಮೂರು ಪ್ರಕಾರದ ದೀಕ್ಷೆಗಳಿಂದ ತೆಗೆದು ಹಾಕಿ, ಮೇಲ್ಕಂಡ ತನು ತ್ರಯಗಳಲ್ಲಿ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳೆಂಬ ಮೂರು ಲಿಂಗಗಳನ್ನು ಸಂಬಂಧ ಮಾಡಿದ್ದರಿಂದ ಅವರಲ್ಲಿ ಅವುಗಳ ವಿಷಯವಾಗಿ ಏಕತ್ವಾನುಸಂಧಾನವು ಗಟ್ಟಿಕೊಂಡು ಬುದ್ಧಿಯು ನಿಶ್ಚಲವಾಗುವದು. ಅಂಗ ಲಿಂಗ ಇವುಗಳ ಹಸಮುಖ ಮುಂತಾದವುಗಳ ಬಗ್ಗೆ ಮತ್ತು ಭಕ್ತಾದಿ ಐಕ್ಯಾಂತವಾದ ಷಟ್‌ಸ್ಥಲದ ಬಗ್ಗೆ ಅವರಲ್ಲಿ ಪೂರ್ಣಜ್ಞಾನವಾಗಲು ಸರ್ವಶಕ್ತಿಗಳು ಅವರಿಗೆ ಪ್ರಾಪ್ತವಾಗುವುವು. ಆಮೇಲೆ ಅವರು ಸದಾ ಲಿಂಗೈಕ್ಯ ಚಿಂತನೆಯಲ್ಲಿಯೇ ಲೀನವಾಗಿರುವರು. ಅನಂತರ ಅವರ ಸ್ಥಿತಿಯು ಸಮುದ್ರದಲ್ಲಿ ಬಿದ್ದ ಆಣೇಕಲ್ಲಿನಂತೆ ಅಥವಾ ಆಕಾಶದಲ್ಲಿ ಬೀಸುವ ಗಾಳಿಯಂತೆ ಆಗುವದು. ಅಂದರೆ ಅವರು ಸಂಪೂರ್ಣವಾಗಿ ಶಿವಮಯವಾಗುವರು. ಅಗ್ನಿಯಲ್ಲಿ ಕೂಡಿಕೊಳ್ಳುವ ಬೆಳಕಿನಂತೆ ಅವರ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳು ಆತ್ಮಜ್ಞಾನದಲ್ಲಿ ನಷ್ಟವಾಗುವವು. ಮತ್ತು ಸದ್ಗುರುವಿನ ಕೃಪೆಯ ಮೂಲಕ ಅವರು ಶಿವಸ್ವರೂಪ ಸಿದ್ಧಿಯನ್ನು ಹೊಂದುವರು. ಪ್ರಪಂಚದಲ್ಲಿ ಮಗ್ನರಾದವರಿಗೆ ಅವರ ನಿಜಸ್ಥಿತಿಯು ಗೊತ್ತಾಗದಿದ್ದರೂ ಅವರು ಪರಮಶಿವ

ಯೋಗಿಗಳು ಅಥವಾ ಜೀವನ್ಮುಕ್ತರು ಎಂಬದಾಗಿ ಕರಿಸಲ್ಪಡುವರು. ಯಾಕಂದರೆ ಅವರು ಶರೀರ-ಇಂದ್ರಿಯಾದಿಗಳ ಮೇಲಿನ ಮಮತೆಯನ್ನೂ ವಿಷಯ ವ್ಯಾಪಾರಗಳನ್ನೂ ಸಂಪೂರ್ಣವಾಗಿ ಅಳಿದಿರುವರು.

ಪಾರ್ವತಿ—( ಜಗನ್ಮಾತೆಯು ಮತ್ತೂ ಸಂಶಯಗಳನ್ನು ಕಲ್ಪಿಸಿ ) ಸ್ವಾಮಿ, ತಾವು ಇಷ್ಟಲಿಂಗಾರ್ಚಕರಿಗೆ ವಿಷಯಗಳು ತಟ್ಟುವದಿಲ್ಲ. ಮತ್ತು ಲಿಂಗಾಚಾರದಿಂದ ಮುಕ್ತಿಯು ಲಭಿಸುತ್ತದೆಂದು ನಿರೂಪಿಸಿದಿರಿ. ಇದು ಹೇಗಾಗುತ್ತದೆಂಬದನ್ನು ವಿಸ್ತರಿಸಿ ಹೇಳಿ ನನ್ನ ಮನಸ್ಸಿನ ಸಂಶಯಗಳನ್ನು ನಷ್ಟಗೊಳಿಸಿ ನನ್ನನ್ನು ಕೃತಾರ್ಥಳಾಗಿ ಮಾಡಬೇಕು.

ಪರಮೇಶ್ವರ— ಎಲೈ ಮಂಗಳಾಂಗಿಯೆ, ನಾನು ಈಗ ಹೇಳುವದನ್ನು ಚಿತ್ತವಿಟ್ಟು ಲಾಲಿಸು. ತೋರತಕ್ಕ ಜಗತ್ತಿನಲ್ಲಿರುವ ಸಾರವೇ ಲಿಂಗವೆನಿಸುವದು. ಎಳ್ಳಿನಲ್ಲಿರುವ ಎಣ್ಣೆಯಂತೆ, ಹಾಲಲ್ಲಿರುವ ತುಪ್ಪದಂತೆ, ಜಗತ್ತಿನ ಲಿಂಗವಿದೆ. ಸರ್ವಪ್ರಾಣಿಗಳಲ್ಲಿಯೂ ಲಿಂಗವಿದೆ. ಆದರೆ ಗುರುವೆಂಬ ಗಾಣಿಗನು ಶರೀರವೆಂಬ ಗಾಣದಿಂದ ಎಣ್ಣೆಯೆಂಬ ಲಿಂಗವನ್ನು ಬಹಿಷ್ಕರಿಸಿ ತೆಗೆಯುವನು, ಸರ್ವಪ್ರಾಣಿಗಳಲ್ಲಿ ಮೂರು ಶರೀರಗಳುಂಟು ಈ ಶರೀರತ್ರಯಗಳ ಉಪಾಧಿಯಿಂದ ಲಿಂಗವು ಮೂರು ತೆರನಾಗಿರುವದು. ಸರ್ವಪ್ರಾಣಿಗಳು ಇಷ್ಟಲಿಂಗದ ಚೈತನ್ಯದಿಂದಲೇ ಕೆಲಸಮಾಡುತ್ತವೆ. ಇದಕ್ಕಾಗಿ ಇಷ್ಟಲಿಂಗರೂಪ ಚೈತನ್ಯವು ಮಾಯೆಯನ್ನು ಪ್ರೇರಿಸುತ್ತದೆ. ಆದರೆ ಅಜ್ಞಾನಿಗಳು ಮಾಯಾಪ್ರೇರಕವಾದ ಇಷ್ಟಲಿಂಗದ ಕಡೆಗೆ ಲಕ್ಷ್ಯಕೊಡದೆ, ಕೇವಲ ಮಾಯೆಯೇ ತಮ್ಮನ್ನು ಪ್ರೇರಿಸುತ್ತದೆಂದು ತಿಳಿಯುತ್ತಾರೆ. ವೀರಶೈವನು ಸರ್ವ ವಿಷಯಗಳನ್ನು ಆಯಾ ಇಂದ್ರಿಯಗಳಲ್ಲಿರುವ ಆಚಾರಾದಿ ಲಿಂಗಗಳಿಗರ್ಪಿಸಿ ತದ್ದ್ವಾರಾ ಬಂದ ಶೇಷವನ್ನು ಉಪಭೋಗಿಸುವದರಿಂದ ಲಿಂಗಪೂಜೆಯು ಆತನ ಶರೀರ ವ್ಯಾಪಾರಗಳನ್ನು ಬದಲುಮಾಡಿ ಲಿಂಗವ್ಯಾಪಾರದಲ್ಲಿ ತೊಡಗಿಸುವದರಿಂದ ಅವನಿಗೆ ಮೋಕ್ಷವು ಸುಲಭವಾಗಿ ಲಭಿಸುವದು. ಇಂತಹ ಇಷ್ಟಲಿಂಗವು ಜಾರಿ ಹೋಗಲು ಅಥವಾ ಅದನ್ನು ಅಜ್ಞಾನದಿಂದ ನಿರಾಕರಿಸಿ ಬಿಟ್ಟರೆ ಆ ಮನುಷ್ಯನ ವ್ಯಾಪಾರಗಳೆಲ್ಲ ಪ್ರಾಕೃತ ವ್ಯಾಪಾರಗಳಾಗುವ ಮೂಲಕ ಅವನ ಶರೀರವು ಲಿಂಗಾಚಾರವಾಗಲರಿಯದು. ಶರೀರವನ್ನು ಬಿಟ್ಟು ಮನಸ್ಸು ಸ್ವತಂತ್ರವಾಗಿ ತೋರದಿರುವಂತೆ, ಮತ್ತು ಶರೀರದ ವ್ಯಾಪಾರಗಳು ಮನಸ್ಸಿನ ಮೇಲೆ ಮನಸ್ಸಿನ ವ್ಯಾಪಾರಗಳು ಶರೀರದ ಮೇಲೆ ಬೀಜಾಂಕುರ ನ್ಯಾಯದಂತೆ ಪರಸ್ಪರವಾಗಿ ಒಂದು ಮತ್ತೊಂದರ ಮೇಲೆ ಪರಿಣಾಮವನ್ನುಂಟು ಮಾಡುವಂತೆ, ಇಷ್ಟಲಿಂಗವಿಲ್ಲದೆ ಪ್ರಾಣಲಿಂಗವು ದೊರಕದು. ಭವಿದೇಹದಲ್ಲಿರುವ ಮನಸ್ಸು ಭವಿರೂಪವಾಗುವಂತೆ, ಲಿಂಗದೇಹದಲ್ಲಿರುವ ಮನಸ್ಸು ಲಿಂಗರೂಪವಾಗುತ್ತದೆ.

ಮನಸ್ಸು ಶಿವಚೈತನ್ಯವಾಗಬೇಕಾದರೆ ಶರೀರದಲ್ಲಿ ಶಿವಚೈತನ್ಯವು ಅವಶ್ಯವಾಗಿ ಬೇಕು. ಆದ್ದರಿಂದ ಇಷ್ಟಲಿಂಗ ಸಂಬಂಧವುಳ್ಳ ಶರೀರದಲ್ಲಿದ್ದ ಮನಸ್ಸು ಮಾತ್ರ ಶಿವಚೈತನ್ಯದ ಅನುಸಂಧಾನ ಮಾಡಬಲ್ಲದು. ಇದಕ್ಕೇನೇ ಪ್ರಾಣಲಿಂಗ ಪೂಜೆಯನ್ನುವರು. ಹೀಗೆ ದೇಹ ಮನಸ್ಸು ಲಿಂಗವಶವಾದ ಕೂಡಲೆ ಶರಣನು ಲಿಂಗದಲ್ಲಿ ಐಕ್ಯನಾಗುವನು. ಈ ಶಿವಾದ್ವೈತ ಭಾವನೆಯೇ ಮುಕ್ತಿಯೆನಿಸುವದು.

ಶಿವನಾಡಿದ ಈ ಮಾತುಗಳನ್ನು ಕೇಳಿ ಪಾರ್ವತೀದೇವಿಯು ತನಗೆ ವೀರಶೈವ ಮತದ ಬಗ್ಗೆ ಯಥಾರ್ಥಜ್ಞಾನವಾಯಿತೆಂದು ಪರಮೇಶ್ವರನಿಗೆ ದೀರ್ಘದಂಡ ನಮಸ್ಕಾರವನ್ನು ಮಾಡಲು, ಶಿವನು ಜಗನ್ಮಾತೆಯ ಕೈಹಿಡಿದು ಮೇಲಕ್ಕೆತ್ತಿ ಆಲಂಗಿಸಿ ಅವಳನ್ನು ಸಂತೋಷಗೊಳಿಸಿದನು. ಜಗದ್ಗುರುವಾದ ಅಲ್ಲಮಪ್ರಭುವಿನ ಪರಾಜಯಕ್ಕಾಗಿ ಶಾಂಬರೀಮಾಯೆಯನ್ನು ಕಳಿಸಿಕೊಟ್ಟು ಅವನೊಡನೆ ಸ್ಪರ್ಧೆಮಾಡುತ್ತಿದ್ದ ಪಾರ್ವತಿಯು ತನ್ನ ತಪ್ಪನ್ನು ನೆನೆದು ಅಲ್ಲಮಪ್ರಭುವು ಪ್ರತ್ಯಕ್ಷ ಜಗತ್ಕರ್ತನೆಂದು ಭಾವಿಸ ಹತ್ತಿದಳು. ಮತ್ತು ಪ್ರಭುದೇವರು ಸರ್ವ ಶಿವಭಕ್ತ ಸಮೂಹಕ್ಕೆ ಮೋಕ್ಷವನ್ನು ದೊರಕಿಸಿಕೊಡಬೇಕೆಂದು ಸರ್ವತ್ರ ಜನರಿಗೆ ಬೋಧಿಸಿ ಅವರನ್ನು ರಕ್ಷಿಸುತ್ತಿರುವರೆಂಬ ಸಂಗತಿಯನ್ನರಿತು ಪಾರ್ವತೀ ಪರಮೇಶ್ವರರು ಸಂತೋಷ ಸಮುದ್ರದಲ್ಲಿ ಮುಳುಗಿದರು.

ಇತ್ತ, ಅಲ್ಲಮಪ್ರಭುವು ಬಸವೇಶ್ವರನ ಕಲ್ಯಾಣಪಟ್ಟಣವನ್ನು ಬಿಟ್ಟು ಹೊರಟುಬರುವ ದಾರಿಯಲ್ಲಿ, ತರುಣನಾಗಲಿ, ಮುದಕನಾಗಲಿ, ರಾಜನಾಗಲಿ, ಧನಿಕನಾಗಲಿ, ದರಿದ್ರನಾಗಲಿ, ಆಕಳಾಗಲಿ, ಬ್ರಾಹ್ಮಣನಾಗಲಿ ಅಥವಾ ಬೇರೆ ಯಾರಾದರೂ ಆಗಲಿ ಬರಲು, ಅವರ ಮೇಲೆ ಅನುಗ್ರಹಮಾಡಿ ಸಂತುಷ್ಟರಾಗಿ ಮಾಡಿದನು. ಶಿವನೇ ಅಲ್ಲಮಪ್ರಭು ರೂಪದಿಂದ ದೇಹವನ್ನು ಧರಿಸಿ ಸಂಚರಿಸಿದ ಕಾರಣ ಭೂಮಿಯು ಪವಿತ್ರವಾಯಿತು. ಆತನ ನಿರ್ಮಲವಾದ ಉಪದೇಶದ ಮೂಲಕ ಶೈವಮತವು ಸರ್ವತ್ರ ವ್ಯಾಪಿಸಿತು. ಅಲ್ಲಮನು ಹೋದತ್ತ ತರುಗಳು ಪ್ರಫುಲ್ಲಿತವಾಗಿ ಹೂಕಾಯಿಗಳನ್ನು ಬಿಟ್ಟವು. ಆತನ ಪಾದಧೂಳಿಯಿಂದ ದೇಶವೆಲ್ಲ ಸುಭಿಕ್ಷಸ್ಥಿತಿಯನ್ನು ಹೊಂದಿ ಸರ್ವರು ಸುಖಿಗಳೂ ಧಾರ್ಮಿಕರೂ ಆದರು.

ಇತಿ ಸರ್ವಂ ಶಿವಂ.



## ವಾಗ್ವಿಲಾಸ ಬುಕ್ ಡಿಪೋದಲ್ಲಿ ಸಿಗತಕ್ಕ ಪುಸ್ತಕಗಳು.

| | | |
|---|---|---|
| ೧ | ವಚನ ಜ್ಞಾನಸಿಂಧು ಕಥಾರೂಪ | [illegible] |
| ೨ | ನಿಜಗುಣ ಶಿವಯೋಗಿ ಪಂಚರತ್ನ | [illegible] |
| ೩ | ವಚನರೂಪ ಪ್ರಭುಲಿಂಗಲೀಲೆ (ಬಿಳೇಅಂಗಡಿ ಕೃತ) | [illegible] |
| ೪ | ಷಡಾಕ್ಷರವಚನ | [illegible] |
| ೫ | ಬಸವರಾಜ ವಿಜಯ ಕಥಾಸಂಗ್ರಹ | [illegible] |
| ೬ | ಶಿವಲೀಲಾಮೃತ ಕಥಾಸಂಗ್ರಹ | [illegible] |
| ೭ | ಜೋಗಳ ಪದಗಳು | [illegible] |
| ೮ | ಬಸವಂಣನವರಲೀಲಾ | [illegible] |
| ೯ | ವೀರಶೈವಾಚರಣೆ | [illegible] |
| ೧೦ | ಸಟೀಕ ಶಿವಗೀತಾ | [illegible] |
| ೧೧ | ಶಿವಭಜನೆ ಮಂಗಳಾರತಿ | [illegible] |
| ೧೨ | ಶಿಶುನಾಳ ತತ್ವಪದಗಳು ೧ನೇ ಭಾಗ | ೦—೮—[illegible] |
| ೧೩ | ವೀರಶೈವ ನಿರ್ಣಯಚಿಂತಾಮಣಿ | ೨—೮—೦ |
| ೧೪ | ಲಗ್ನ ವಿಧಾನ | ೦—೪—೦ |
| ೧೫ | ಸಂಕ್ಷಿಪ್ತ ಶಿವಪೂಜಾವಿಧಿ | ೦—೨—೦ |
| ೧೬ | ಶಿವಶರಣರ ಮೇಲಿನಪದಗಳು | ೦—೩—೦ |
| ೧೭ | ಬುದ್ಧಿಮಾತು (ಹರ್ಡೇಕರ ಕೃತ) | ೦—೪—೦ |
| ೧೮ | ಸ್ವಕರ್ತವ್ಯಸಿದ್ಧಾಂತ „ | ೦—೮—೦ |
| ೧೯ | ಆರೋಗ್ಯ ಜೀವನ „ | ೦—೮—೦ |
| ೨೦ | ಭಾರತೀಯರ ದೇಶಭಕ್ತಿ „ | ೧—೪—೦ |
| ೨೧ | ಮಹಾತ್ಮ ಗಾಂಧಿಯವರ ಚರಿತ್ರೆ „ | ೦—೮—೦ |
| ೨೨ | ರಾ. ಬಾ. ವಾರದ ಮಲ್ಲಪ್ಪನವರ ಸಚಿತ್ರ ಚರಿತ್ರೆ „ | ೦—೧೨—೦ |
| ೨೩ | ವೀರಶೈವ ಸಮಾಜಸುಧಾರಣೆ „ | ೦—೬—೦ |
| ೨೪ | ಶ್ರೀಸ್ವಾಮಿ ರಾಮತೀರ್ಥರ ಉಪನ್ಯಾಸ ಭಾಗ ೧ ೨ ೩ ೪ ೫ | ೦—೧೦—೦ |

ಎ. ಆರ್. ಶಿವನಾಗಪ್ಪಾ

ಪ್ರೊಪ್ರೈಟರ

ವಾಗ್ವಿಲಾಸ ಬುಕ್ ಡಿಪೋ ಹುಬ್ಬಳ್ಳಿ.